1950

॥ ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

ಪರಮಾರ್ಥಪ್ರಕಾಶ ಕುಸುಮ-೧

# ಶಿವೋಪಾಸನಾವಿವೇಕ

ಲೇಖಕರು :

ಶ್ರೀ॥ ಷ॥ ಬ್ರ॥ ಸ್ವಾಮಿ ವೀರಭದ್ರಶಿವಾಚಾರ್ಯರು

ಬೃಹನ್ಮಠ, ಹಲಗೂರು





ಪ್ರಕಾಶಕರು :

ಪರಮಾರ್ಥಧಾಮ

ಬೃಹನ್ಮಠ ಹಲಗೂರು. ಮಂಡ್ಯ ಜಿಲ್ಲಾ

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

ಪರಮಾರ್ಥಪ್ರಕಾಶ ಕುಸುಮ — ೧

# ಶಿವೋಪಾಸನಾವಿವೇಕ

ಲೇಖಕರು :

ಶ್ರೀ॥ ಷ॥ ಬ್ರಂ॥ ಸ್ವಾಮಿ ವೀರಭದ್ರಶಿವಾಚಾರ್ಯರು

ಬೃಹನ್ಮಠ, ಹಲಗೂರು



ಪ್ರಕಾಶಕರು :

**ಪರಮಾರ್ಥಧಾಮ**

ಬೃಹನ್ಮಠ ಹಲಗೂರು, ಮಂಡ್ಯ ಜಿಲ್ಲಾ

# ಪ ರಿ ವಿ ಡಿ



ಶ್ರೀಮದ್ವೇದವೇದಾಂತಸಿದ್ಧಾಂತಪುರಾಣಾಗಮೇತಿಹಾಸ ಸಕಲಶಾಸ್ತ್ರ
ಸುಪ್ರಸಿದ್ಧ ಶ್ರೀಮದ್ವೀರಶೈವ ಮಹಾಮತಸ್ಥಾಪನಾಚಾರ್ಯವರ್ಯ
ಶ್ರೀಜಗದ್ಗುರು ರೇಣುಕಭಗವತ್ಪಾದ ಮಹಾಚಾರ್ಯ ಪರಂಪರಾಗತ.
ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ ಸ್ವಸ್ತಿ ಶ್ರೀಮದಿತ್ಯಾದಿ
೧೦೦೮ ಗುರುಸಾರ್ವಭೌಮ ಲಕ್ಷಣಲಕ್ಷಿತ
ಜಗದ್ಗುರು ವೀರಗಂಗಾಧರ ಮಹಾರಾಜ ದೇಶಿಕೇಂದ್ರ
ಶಿವಾಚಾರ್ಯ ಮಹಾಸ್ವಾಮಿಗಳವರ
ಚರಣಾರವಿಂದಗಳಲ್ಲಿ
ಗುರುಭಕ್ತಿಪೂರ್ವಕ ಸಮರ್ಪಣೆ.

ಗ್ರಂಥಕರ್ತರು.

ಶ್ರೀಕಾಶೀ ವಿಶ್ವಾರಾಧ್ಯ ಜ್ಞಾನಸಿಂಹಾಸನಾಧೀಶ್ವರ
ಶ್ರೀಜಗದ್ಗುರು ವಿಶ್ವೇಶ್ವರಶಿವಾಚಾರ್ಯ ಮಹಾಸ್ವಾಮಿಗಳು
ಜಂಗಮವಾಡಿ ಮಠ, ವಾರಾಣಸಿ (ಉತ್ತರ ಪ್ರದೇಶ)

ನಂ. 6694/12-12-67 ವಾರಾಣಸಿ

ಷ|| ಬ್ರ|| ವೀರಭದ್ರಶಿವಾಚಾರ್ಯಸ್ವಾಮಿಗಳು ಬೃಹನ್ಮಠ
ಹಲಗೂರು ಇವರಿಗೆ —

ಕೃತಾನೇಕ ಶುಭಾಶಿಷಃ

ಈ ದಿನ "ಶಿವೋಪಾಸನಾವಿವೇಕ" ಎಂಬ ಪುಸ್ತಕವು ತಲ್ಪಿತು. ನೀವು ಬಹಳ ಪರಿಶ್ರಮದಿಂದ ಈ ಪುಸ್ತಕವನ್ನು ತಯಾರಿಸಿದ್ದೀರಿ. ಅನೇಕ ಪ್ರಮಾಣ ಹಾಗೂ ಅನುಭವದ ವಿಷಯಗಳಿವೆ. ನಿಮ್ಮ ಪರಿಶ್ರಮವು ಉಚ್ಚತರಗತಿಯದಾಗಿದೆ. ಇಂತಹ ಪುಸ್ತಕಗಳ ಕಿಮ್ಮತ್ತು ಸ್ವಲ್ಪ ಇಟ್ಟಿದ್ದಾದರೆ ಸಾಮಾನ್ಯ ಜನರಿಗೆ ಅನುಕೂಲವಾಗುವುದಲ್ಲದೆ ಹೆಚ್ಚು ಪ್ರಚಾರವಾಗುವುದು.

(ರುಜು) ಇತ್ಯಾಶಿಷಃ.

ಶ್ರೀ ೧೦೦೮ ಜಗದ್ಗುರು ಹಿಮವತ್ಕೇದಾರ ವೈರಾಗ್ಯ
ಸಿಂಹಾಸನಾಧೀಶ್ವರ "ರಾವಲ್" ಶ್ರೀ ಶ್ರೀ ಶ್ರೀ ಶಾಂತಲಿಂಗ
ಶಿವಾಚಾರ್ಯ ಮಹಾಸ್ವಾಮಿಗಳು
ಶ್ರೀ ಕೇದಾರನಾಥಮಹಾಸಂಸ್ಥಾನ (ಯು.ಪಿ.) ಹಿಮಾಲಯ

ಗೆ. ನಂ. ೬೧೫/೧೬-೧೨-೬೭

ಶ್ರೀ ಶ್ರೀ|| ಷ|| ಬ್ರ|| ಸ್ವಾಮಿ ವೀರಭದ್ರಶಿವಾಚಾರ್ಯರು
ಬೃಹನ್ಮಠ ಹಲಗೂರು ಇವರಿಗೆ—

ಮಂಗಲಾಶೀರ್ವಾದಗಳು

ತಮ್ಮ ಪತ್ರವು ಮತ್ತು ನಿಮ್ಮಿಂದ ರಚಿಸಲ್ಪಟ್ಟ "ಶಿವೋಪಾಸನಾ ವಿವೇಕ" ಪುಸ್ತಕವೂ ತಲುಪಿ ಸನ್ನಿಧಿಗೆ ಬಹು ಸಂತೋಷವಾಯಿತು. ಈ ಗ್ರಂಥವು, ಎಲ್ಲ ಧರ್ಮಗಳಿಗೆ ಮೂಲಾಧಾರವಾದ ಅಪೌರುಷೇಯ ವೇದಗಳ ಆಧಾರವನ್ನು ಪಡೆದುದಲ್ಲದೆ ಆಗಮೋಪನಿಷತ್ತುಗಳ ವಾಕ್ಯಗಳಿಂದ ಉದ್ಧೃತವಾಗಿ ತನ್ನ ಹಿರಿಮೆಯನ್ನು ವ್ಯಕ್ತಗೊಳಿಸುತ್ತಿದೆ.

ಮಾನವಜೀವನದ ಕೊನೆಯ ಹೆಗ್ಗುರಿಯು ಪರವಸ್ತುವನ್ನು ಪಡೆಯುವದಿದೆ. ಆ ಪರವಸ್ತುವಾದ ಪರಶಿವನ ಸ್ವರೂಪವು ಆಗಮಾದಿ ಪ್ರಮಾಣಗಳಿಂದ ಕೂಲಂಕಷವಾಗಿ ವಿಮರ್ಶಿಸಲ್ಪಟ್ಟಿರುವುದಲ್ಲದೆ, ವಿಶ್ವದಲ್ಲಿಯ ಎಲ್ಲ ವಸ್ತುಗಳ ಅಂತರ್ಬಾಹ್ಯ ಸರ್ವತ್ರ ಸದ್ರೂಪದಿಂದ ವ್ಯಕ್ತಾವ್ಯಕ್ತ ಉಭಯವೈಶಿಷ್ಟ್ಯದಿಂದ ಕಂಡುಬರುವ ಪರಶಿವನ ಆ ನಿಜ ತತ್ತ್ವವನ್ನು ಶ್ರೀ ಗುರುಮುಖದಿಂದಲೂ ಅರಿವು ಮಾಡಿಕೊಂಡಾಗಲೇ ಮಾನವೀಯತೆ ಪರಿಪೂರ್ಣಗೊಳ್ಳುತ್ತಾದೆಂಬ ಅಂಶವು ಇಲ್ಲಿ ಪುಷ್ಟಿಗೊಂಡಿದೆ. ಅಸ್ತು!

ಲಿಂಗಾಂಗಸಾಮರಸ್ಯದ ಜ್ಞಾನಮಾರ್ಗವನ್ನು, ಔಪನಿಷಧಪುರುಷನನ್ನು ತಿಳಿದುಕೊಳ್ಳುವ ಬಗೆಯನ್ನು ಇಲ್ಲವೇ ಜೀವ ಶಿವ ಅಭೇದವನ್ನು ವಿವರಿಸಿ ಹೊರಟಿರುವ ಈ ಗ್ರಂಥವು ಜಿಜ್ಞಾಸು ಭಕ್ತವರ್ಗಕ್ಕೆ ಅಭ್ಯಾಸ ಯೋಗ್ಯವಾಗಿದೆ.

ದಯಾಮಯ ಪರಮೇಶ್ವರನು ನಿಮ್ಮನ್ನು ಸಂರಕ್ಷಿಸಲಿ, ನಿಮ್ಮಿಂದ ಧರ್ಮಪ್ರಚಾರ ಚೆನ್ನಾಗಿ ಆಗಲಿ.

(ರುಜು) ಇತ್ಯಾಶೀಃ.

# ಪ್ರಕಾಶಕರ ಮನವಿ

ಸುಸಂಸ್ಕೃತಿ ಇಲ್ಲದ ಜೀವನ ಬರಡು. ಒಳ್ಳೆಯ ಸಾಹಿತ್ಯ ಧರ್ಮ, ಕಲೆ, ವಿಜ್ಞಾನ, ನೀತಿ ನಿಯಮ ಇವೆಲ್ಲವೂ ಸಂಸ್ಕೃತಿಯನ್ನು ಪೋಷಿಸುತ್ತವೆ; ಜಗತ್ತಿಗೆ ಒಳ್ಳೆಯ ಕ್ಷೇಮವನ್ನು ಬಯಸುತ್ತವೆ. ಉತ್ತಮ ಸಂಸ್ಕೃತಿಯ ಆಧಾರದಮೇಲೆ ವೈಯಕ್ತಿಕ ಜೀವನ ಮುಂಬರಿದರೆ ಲೋಕ ಕಲ್ಯಾಣ ಶಾಶ್ವತವಾಗುತ್ತದೆ—ಹೀಗೆಂದು ನಾಗರಿಕ ಜನ ನಂಬುತ್ತಾರೆ. ಅವರ ನಂಬಿಗೆ ನಿಜವೂ ಆಗಿದೆ. ನಾವಾದರೂ ಈ ಬಗೆಯ ಸತ್ಯವನ್ನು 'ಪರಮಾರ್ಥಧಾಮ' ಎಂಬ ಹೆಸರಿನ ಸಂಸ್ಥೆಯಮೂಲಕ ಪ್ರಕಾಶಗೊಳಿಸಲು ಇಚ್ಛಿಸಿದೆವು.

ಪದ್ಮಶ್ರೀ ವಿನಾಯಕ ಕೃಷ್ಣ ಗೋಕಾಕ, ಉಪಕುಲಪತಿ, ವಿಶ್ವವಿದ್ಯಾಲಯ ಬೆಂಗಳೂರು-ಈ ಮಹಾಶಯರು ದಿನಾಂಕ ೧-೨-೧೯೬೭ ರಂದು ನಮಗಾಗಿ ನಮ್ಮ ಶ್ರೀಮಠದಲ್ಲಿ ಈ ಸಂಘವನ್ನು ವಿಶ್ವಾಸದಿಂದ ಪ್ರಾರಂಭಿಸಿಕೊಟ್ಟರು. ಮತ್ತು ಈ ಸಂಘ, ಸಹಕಾರಿ ತತ್ತ್ವದ ಪ್ರಕಾರ ಹೇಗೆ ಹೇಗೆ ಸಂಘಟಿಸಿ ಕಾರ್ಯ ಮಾಡಬೇಕೋ ಅದೆಲ್ಲವನ್ನೂ ತಿಳಿಸಿ ಉಪಕಾರ ಮಾಡಿದರು.

ಹಿರಿಯರು ಹಲವರ ಸೌಜನ್ಯತೆಯ ಫಲವಾಗಿ ರೂಪುಗೊಂಡ ಈ ಸೇವಾಸಮಿತಿಯು ಮೊಟ್ಟಮೊದಲು "ಶಿವತತ್ತ್ವವಿವೇಕ" ಗ್ರಂಥವನ್ನು ಹೊರತಂದಿದೆ. ಈ ಕೃತಿಯ ಕರ್ತರು ನಮ್ಮ ಗುರುದೇವ ಶ್ರೀ ಶ್ರೀ ಸ್ವಾಮಿ ವೀರಭದ್ರಶಿವಾಚಾರ್ಯರು. ಇವರ ಪಳಗಿದ ಲೇಖನಿಯಿಂದ ಮೂಡಿಬಂದ ಈ ಗ್ರಂಥಕ್ಕೆ ಶ್ರೀ ಶ್ರೀ ಶ್ರೀ ಜಗದ್ಗುರು ಮಹಾಸನ್ನಿಧಾನಂಗಳವರ ದಿವ್ಯಾಶೀರ್ವಾದವಿದೆ. ಮಾನ್ಯ ವಿದ್ವನ್ಮಣಿಗಳ ಅಭಿನಂದನೆಯಿದೆ. ಅವೆಲ್ಲವೂ ಈ ಗ್ರಂಥ ಹೃದಯದ ಪರಿಸ್ಥಿತಿಗೆ ಅನ್ವಯವಾಗುವ ಹಾಗೂ ಜಿಜ್ಞಾಸುವೃಂದಕ್ಕೆ ಉಪಯೋಗವಾಗುವ ಹಿತವಚನಗಳೇ ಹೌದು, ಎಂತಲೇ, 'ಆಶೀರ್ವಾದ' ಮತ್ತು "ಅಭಿನಂದನ" ಅನುಬಂಧದಲ್ಲಿ ಆ 'ಪತ್ರಸಾಹಿತ್ಯ' ವನ್ನು ಜೋಡಿಸಿದ್ದಾಗಿದೆ, ಓದುಗರಿಗೆ ಒಂದುವಿಧದಲ್ಲಿ ಅವು ಸಹಾಯವೀಯುತ್ತವೆ. ಪ್ರಸಕ್ತ ಪುಸ್ತಕದ ಮುದ್ರಣ ಕಾಲದಲ್ಲಿ

ಆದ ಅಕ್ಷರ ಸ್ಖಾಲಿತ್ಯವನ್ನು ತಿದ್ದಿದ ಒಪ್ಪೋಲೆಯೂ, ಗ್ರಂಥಭಾಗದಲ್ಲಿ ಅಲ್ಲಲ್ಲಿ ಆವರಣಚಿಹ್ನೆಯೊಳಗೆ ಉಪಯೋಗಿಸಲ್ಪಟ್ಟಿರುವ ಸಂಕೇತಾಕ್ಷರಗಳ ವಿವರಣೆಯ ಪಟ್ಟಿಯೂ ಅನುಬಂಧ ಭಾಗದಲ್ಲಿ ಸೇರಿಸಲ್ಪಟ್ಟಿದೆ. ಓದುಗರು ಆ ಕಡೆಗೆ ಅವಶ್ಯವಾಗಿ ಗಮನಿಸಬೇಕು.

ಈ ಪುಸ್ತಕದ ನಿರ್ದಿಷ್ಟ ಸೃಷ್ಟಿ-ಪುಷ್ಟಿ-ವೈಶಿಷ್ಟ್ಯವನ್ನು ನೋಡಿ ಕರುಣಿಸಿ, ಇದರಲ್ಲಿ ಪ್ರಕಾಶಗೊಳಿಸಲು ತಮ್ಮ ಫೋಟೋ ಬ್ಲಾಕನ್ನು ದೊರಕಿಸಿದ ಶ್ರೀಮಜ್ಜಗದ್ಗುರು ರಂಭಾಪುರೀ ವೀರಸಿಂಹಾಸನಾಧೀಶ್ವರ ಯತಿವರ್ಯ ವೀರಗಂಗಾಧರಶಿವಾಚಾರ್ಯಮಹಾಸ್ವಾಮಿಗಳವರಿಗೆ ನಮ್ಮ ಅನಂತಾನಂತ ಸಾಷ್ಟಾಂಗ ನಮಸ್ಕಾರಗಳು.

ಇದರಂತೆಯೇ, ತಂತಮ್ಮ ಆಶೀರ್ವಾದಪತ್ರಗಳನ್ನು ಕಳುಹಿಸಿದ ಶ್ರೀಮದ್ ಹಿಮವತ್ಕೇದಾರ ಮತ್ತು ಶ್ರೀ ಕ್ಷೇತ್ರ ವಾರಾಣಸೀ ಮಹಾಪೀಠ ಗಳ ಜಗದ್ಗುರು ಮಹಾಸ್ವಾಮಿಗಳವರಿಗೂ, ಮೆಚ್ಚೋಲೆಯನ್ನು ಬರೆದು ಪ್ರೋತ್ಸಾಹಿಸಿದ ಮಾನ್ಯವಿದ್ವನ್ಮಂಡಲಿಗೂ ನಮ್ಮ ಹೃತ್ಪೂರ್ವಕ ಪ್ರಣಾಮ ಗಳು.

ಈ ಪುಸ್ತಕದ ಮುದ್ರಣ ಕಾರ್ಯದಲ್ಲಿ ನೆರವಾದ ಹಾಗೂ ತಮ್ಮ ಆಮುಖವನ್ನು ಇತ್ತು ಪ್ರೇಮವನ್ನು ತೋರಿಸಿದ ಪಂಚಾಚಾರ್ಯ ವಿದ್ಯುನ್ಮುದ್ರಾಲಯದ ಯಜಮಾನರು ಮಹಾಚಾರ್ಯತತ್ತ್ವಪ್ರಕಾಶಕ ವೇ॥ ಮಹಾದೇವಯ್ಯನವರಿಗೂ ಅಚ್ಚುಕೂಟದ ಕೆಲಸಗಾರರಿಗೂ ನಾವು ಕೃತಜ್ಞರು.

“ಪರಮಾರ್ಥಧಾಮ”<br>ಬೃಹನ್ಮಠ ಹಲಗೂರು<br>೨೦-೨-೧೯೬೪

ಎಂ. ನಾಗರಾಜಪ್ಪ,<br>ಅಧ್ಯಕ್ಷರು.

# ಆಮುಖ

ಪರಶಿವನ ಸದ್ಯೋಜಾತಾದಿ ಪಂಚಮುಖಗಳಿಂದುದಯಿಸಿದ ಶ್ರೀರೇಣುಕಾದಿ ಪಂಚಗಣಾಧೀಶ್ವರರು ಶಿವಾಜ್ಞೆಯಂತೆ ಈ ಭೂಮಂಡಲದಲ್ಲಿ ಲಿಂಗಮುಖದಿಂದ ಅವತರಿಸಿ ಶಿವಪೂಜೋಪದಿಷ್ಟವಾದ ವೀರಶೈವ ಮತ ವನ್ನು ಸ್ಥಾಪಿಸಿದರೆಂಬುದು ವೇದಾಗಮ ಪ್ರಣೀತವಾದ ವಿಷಯವಾಗಿದೆ. ಈ ವೀರಶೈವಮತಕ್ಕೆ ಗುರು-ಲಿಂಗ-ಜಂಗಮ ಇವು ಮೂರು ಪ್ರಧಾನ ವಸ್ತು ಗಳಾಗಿದ್ದು ಅಷ್ಟಾವರಣ-ಪಂಚಾಚಾರ-ಷಟ್‌ಸ್ಥಲಗಳು ಗುರುಪ್ರಣೀತ ಗಳಾಗಿ ಜಂಗಮಬೋಧಕಗಳಾಗಿರುತ್ತವೆ. ಶ್ರೀಜಗದ್ಗುರುಪಂಚಾಚಾರ್ಯರಲ್ಲಿ ಒಬ್ಬರಾದ ಶ್ರೀರೇಣುಕಾಚಾರ್ಯರು ಅಗಸ್ತ್ಯರಿಗೆ ಬೋಧಿಸಿದ ಶಿವಸಿದ್ಧಾಂತ ಗಳಲ್ಲಿ ತಪಸ್ಸು-ಕ್ರಿಯೆ-ಜಪ-ಧ್ಯಾನ-ಜ್ಞಾನಗಳು ಮುಖ್ಯವಾಗಿರುವವೆಂಬು ದನ್ನು ಧೃಡಪಡಿಸಿಕೊಂಡ ಹಲಗೂರು ಬೃಹನ್ಮಠಾಧ್ಯಕ್ಷ ಸ್ವಾಮಿ ಶ್ರೀ ವೀರಭದ್ರ ಶಿವಾಚಾರ್ಯರು ಅನುಕ್ರಮವಾಗಿ ಭಸ್ಮ-ರುದ್ರಾಕ್ಷ-ಮಂತ್ರ-ಲಿಂಗ-ಪ್ರಸಾದಗಳನ್ನು ಸರಿತೂಗಿಸಿ ಅವುಗಳ ವ್ಯಾಪಕಾರ್ಥವನ್ನು ಸಮಗ್ರ ಜನತೆಗೆ ತಿಳಿಯಪಡಿಸಲೋಸುಗ " ಶಿವೋಪಾಸನಾವಿವೇಕ " ಎಂಬ ಈ ಪುಸ್ತಕ ವನ್ನು ರಚಿಸಿರುವುದು ಸ್ತುತ್ಯವಾಗಿದೆ.

ಇಂದಿನ ಪ್ರಜಾಸತ್ತಾತ್ಮಕ ಭಾರತ ಸರ್ಕಾರವು ಯಾವ ರಾಷ್ಟ್ರೀಯ ತತ್ವವನ್ನು ಪ್ರತಿಪಾದಿಸುತ್ತಿದೆಯೋ ಆ ಎಲ್ಲ ತತ್ವಗಳ ಹಿನ್ನೆಲೆಯು ಯುಗ ಯುಗಗಳ ಹಿಂದೆಯೇ ಪಂಚಾಚಾರ್ಯ ಭಗವತ್ಪಾದರಿಂದ ಬೋಧಿಸಲ್ಪಟ್ಟಿ ದ್ದರೂ ಅದರ ಕೆಲವಂಶವನ್ನು ಮಾತ್ರ ಈ ಹಿಂದೆ ಆಗಿಹೋದ ಶಿವಶರಣರು ಅನುಕರಿಸಿ ವಿಸ್ತಾರಗೊಳಿಸಿ ಪ್ರಖ್ಯಾತಗೊಂಡಿದ್ದಾರೆಂಬುದನ್ನು ಈ ಗ್ರಂಥವು ಪ್ರತಿಪಾದಿಸಿ ಗುರುಪೀಠಗಳ ಅಧಿಕಾರ ಸ್ಥಾನದ ಭದ್ರತೆಯನ್ನು ಪುಷ್ಟಿ ಗೊಳಿಸಿದೆ. ಮತ್ತು ಚತುರ್ದಶಬ್ರಹ್ಮಾಂಡಗಳನ್ನು ಗರ್ಭೀಕರಿಸಿದ ಶಿವನ ಸ್ಥೂಲರೂಪಲಿಂಗವನ್ನು ಗುರುಮುಖದಿಂದ ಪಡೆದು ಗುರುವಿನಿಂದ ಪಡೆದ ಭಸ್ಮ-ರುದ್ರಾಕ್ಷಗಳನ್ನು ಧರಿಸಿ ಗುರುಬೋಧಕವಾದ ಮಂತ್ರದಿಂದ ಜಪಿಸಿ. ಆಶೀರ್ವಾದ ರೂಪವಾದ ಪ್ರಸಾದವನ್ನು ಸ್ವೀಕರಿಸಿ ಧನ್ಯನಾಗುವದೇ ಮಾನವ ಜೀವನದ ಗುರಿಯೆಂಬುದು ವಿಶದವಾಗಿರುತ್ತದೆ.

ಈ ಗ್ರಂಥಪ್ರಕಾಶಕರಾದ "ಪರಮಾರ್ಥಧಾಮ" ಬೃಹನ್ಮಠ ಹಲಗೂರು ಇವರ ಕರ್ತವ್ಯ ಶ್ಲಾಘನೀಯವೇ ಸರಿ. ಶಿವಧರ್ಮದ ಅಂತರಾಳ ವನ್ನು ವಿಶ್ವಕ್ಕೆ ಅರಿವುಮಾಡಿಕೊಡಲೆಳಸಿದ ಈ ಸಂಸ್ಥೆ ಚಿರಕಾಲ ತನ್ನ ಸೇವೆ ಸಲ್ಲಿಸುವುದು ಅಗತ್ಯ.

ಶಿವನ ಬಗೆಗೆ ಇರುವ ಇಂಥ ಸರ್ವೋತ್ಕೃಷ್ಟ ತತ್ವಗಳನ್ನು ಹೊರತಂದು ಭಾರತೀಯ ಸನಾತನ ಧರ್ಮವನ್ನು ಪ್ರಕಾಶಪಡಿಸಬೇಕೆಂಬ ಆಸೆ ನನ್ನ ಅಣ್ಣಂದಿರಾದ ಕೈ|| ಪಂ|| ಕಾಶೀನಾಥಶಾಸ್ತ್ರಿಗಳಿಗೆ ಅತಿಯಾಗಿದ್ದಂತೆ ನನಗೂ ನಮ್ಮ ಪ್ರೆಸ್ಸಿನಲ್ಲಿ ಈ ಪುಸ್ತಕ ಪ್ರಿಂಟು ಮಾಡುವ ಅವಕಾಶ ಸಿಕ್ಕದ್ದಕ್ಕೆ ಅಪಾರ ಸಂತೋಷವಾಗಿದೆ. ನಾಗರಿಕ ಜನ ಅದರಲ್ಲೂ ವೀರಶೈವ ಮಹಾಜನರು ಈ ಗ್ರಂಥವನ್ನು ಅಕ್ಕರೆಯಿಂದ ಓದಿ ಜ್ಞಾನದ ಬಲವನ್ನು ವೃದ್ಧಿಪಡಿಸಿಕೊಂಡು ಮುಕ್ತಿಗಾಮಿಗಳಾಗಲೆಂದು ಹಾರೈಸುತ್ತೇವೆ.

ನಾಗನೂರು ಬೃಹನ್ಮಠಾಧ್ಯಕ್ಷ

ಮೈಸೂರು

ಮಹಾದೇವಯ್ಯ

೨೦-೨-೧೯೬೮

ಪಂಚಾಚಾರ್ಯಪ್ರಭಾಸಂಪಾದಕರು.

# ಸ್ವಸಂವೇದನೆ

ನೆಗಳ್ತೆ ಪೂಜ್ಯತೆ ಕೆಲರನು
ರಾಗದೊಳೀವುದುಗೊರೆಯು ಬೇಡವೇನುಂ ತಜ್ಞರ್ ॥
ಬೀಗಿ ಪರೀಕ್ಷಿಸಿ ಮೆಚ್ಚಿದೊ
ಡಾಗಳೆ ಬಂದಪುದು ಕೃತಿಗೆ ತೇಜೋವದೌಲ್ಯಂ ॥

" ಶಿವಶ್ರೀ "

ಪ್ರಪಂಚದ ಯಾವುದೇ ಭಾಗದಲ್ಲಿ ನೆಲಸಿರಲಿ, ಯಾವುದೇ ಭಾಷೆಯನ್ನು ಆಡುತ್ತಿರಲಿ, ಯಾರಯಾರ ಆಚಾರವ್ಯವಹಾರ ಹೇಗೇಗೋ ಇರುತ್ತಿರಲಿ—ಮಾನವರಲ್ಲಿ ಕೆಲವರು ಪ್ರಯತ್ನವಾದಿಗಳು. ಅವರು ಕೇವಲ ಕರ್ಮವಿಜ್ಞಾನಕ್ಕೆ ಗೌರವವೀಯುತ್ತಾರೆ; ಪ್ರತ್ಯಕ್ಷ ಪ್ರಮಾಣವನ್ನು ಬಲವಾಗಿ ತಬ್ಬಿಕೊಳ್ಳುತ್ತಾರೆ; ಭೌತಿಕ-ರಾಸಾಯನಿಕ-ಅಣುವಿಜ್ಞಾನ, ಇನ್ನಿತರ ಸರ್ವವಸ್ತು ನಿರೀಕ್ಷಣ ಪರೀಕ್ಷಣಾದಿ ಪ್ರಜ್ಞಾಕೌಶಲ್ಯವಷ್ಟೊ ತಮಗೆ ಗೊತ್ತಿರುವಹಾಗೆ ಇನ್ನೊಬ್ಬರಿಗೆ ಸಂಪೂರ್ಣವಾಗಿ ಸ್ಪಷ್ಟವಾಗಿ ಗೊತ್ತಿರುವುದಿಲ್ಲ ಎಂದುಕೊಳ್ಳುತ್ತಾರೆ. ಸರಳ ಸ್ವಭಾವದ ಇನ್ನೊಂದು ತಂಡ ದೇವರು-ದಿಂಡರ ಬಲವನ್ನು ಅಪೇಕ್ಷಿಸುತ್ತದೆ. ಮಾರ್ಜಾಲ ಕಿಶೋರ ನ್ಯಾಯವಾದಿಗಳು ಅವರು. ನಂಬುಗೆಯೇ ಅವರ ಚರಮಲಕ್ಷ್ಯ; ಜೋಗೆ ಪ್ರತ್ಯಕ್ಷಾದಿ ಪ್ರಮಾಣಗಳನ್ನೂ ಉದ್ಧರಿಸುತ್ತಾರೆ. ಮೂರನೆಯ ವರ್ಗದ ವಿಚಾರಪರರು—ಮಾನವ ಶಕ್ತಿಯ 'ಸಾಧ್ಯ' ಪ್ರಭುತ್ವವನ್ನೂ, ಪೂರ್ವಾರ್ಜಿತ 'ಕರ್ಮ'ದ ಅನುಕೂಲದೆಸೆಯನ್ನೂ, ಇಹಜನ್ಮದ 'ಉಪಾಸನಾ-ಯೋಗ'ವನ್ನೂ ಬಹುವಾಗಿ ಹಿಂಬಾಲಿಸುತ್ತಾರೆ. ಅವಿದ್ಯೆಯೆಂಬ ಉಪಾದಾನವು ಪೂರ್ಣತಃ ಅಳಿಸಿಹೋದಾಗಲೇ ಜೀವನಿಗೆ ಆತ್ಯಂತಿಕ ನೆಮ್ಮದಿ ದೊರಕುತ್ತದೆಂಬುದನ್ನು ಒಪ್ಪಿಕೊಳ್ಳುತ್ತಾರೆ. ಪ್ರಯೋಗಕುಶಲರ ಮೂರನೆ ನಿರ್ಣಯದಲ್ಲಿ ಮೇಲಿನ ಉಭಯಪಕ್ಷದ ಭಾವನೆಗಳೂ ಸಮುಚಿತವಾಗಿ ಕೂಡಿಕೊಂಡಿರುತ್ತವೆ. ಮಾನವನ ಸಂಪೂರ್ಣ ಕರ್ತವ್ಯವನ್ನು ಸಿದ್ಧಾಂತಗೊಳಿಸುವ ಜ್ಞಾನ-ಕರ್ಮ ಸಮುಚ್ಚಯ ಸ್ಥಿತಿಯು ಮೂರನೆಯ ಮಾರ್ಗಕ್ಕೆ ಅಭಿ

ಮುಖರು ಮತ್ತು ಅದರ ಇತ್ಯರ್ಥವನ್ನು ಎತ್ತಿ ತೋರಿಸಿದವರು ವೀರಶೈವ ಮತಾಚಾರ್ಯರು.

ಯುಗಯುಗಳಿಂದಲೂ ವಿಶ್ವಪ್ರಸಿದ್ಧವಾಗಿರುವ ಶೈವಮತದ ಉತ್ಕ್ರಾಂತಿತತ್ತ್ವವಿಶಿಷ್ಟವಾದ ಇವೊಂದು ಉಚ್ಚತಮ ಜೀವಂತ ದರ್ಶನ ದಲ್ಲಿ ಆಸ್ಥೆ, ನಂಬುಗೆ, ವಿಶ್ವಾಸ ಉಳಿಸಿಕೊಂಡು ಹೋಗುತ್ತಿರುವವರು ಇತ್ತೀಚೆಗೆ ಕೆಲವರು; ಸಾವಿರಾರು ವರ್ಷಗಳ ಅನೈಕ್ಯ ಮತ್ತು ಅಲಕ್ಷ್ಯ ಕಾರಣದಿಂದ ಪರಸ್ಪರ ಸಹಕಾರ ಸಹಾನುಭೂತಿ ಸೌಹಾರ್ದತ್ವ ವ್ಯವಸ್ಥಾ ವಿಹೀನರಾಗಿ, ನಾನಾಬಗೆಯ ವ್ಯಾಕುಲಗಳಿಂದ ಪೀಡಿತರಾಗಿ ಅನ್ಯರ ಅನುಕರಣೀಯ ಹಂಗಿನಲ್ಲೇ ಜೀವಿಸುತ್ತಿರುವವರು ಹಲವರು. ಹೀಗಾಗಿ ವೀರಶೈವವು 'ತನ್ನತನ'ದ ಸಾಮರ್ಥ್ಯದಿಂದ ದೂರ ದೂರ ಸರಿಯುತ್ತಿದೆ. ಅದೊಂದು ಬಗೆಯ ಸಂದಿಗ್ಧ ಮನೋಭಾವದ ಮತವಾಗಿಯೂ ಪರಿಗಣಿಸ ಲ್ಪಡುತ್ತಿದೆ—ಜಾಗತಿಕ ಧರ್ಮವಾದಿಗಳಿಂದ.

ಶರೀರ-ಬುದ್ಧಿ-ಮನಸ್ಸು-ಆತ್ಮಬಲ ಇಂತಹ ಮಾನವೀಯ ಮೌಲ್ಯ ಗಳ ಉನ್ನತಿಗೆ ಕಾರಣವಾದ ಈ ಧರ್ಮಪಥವು ಅದೆಷ್ಟರಮಟ್ಟಿಗೆ ಶಾಸ್ತ್ರಾನು ಭವಪ್ರಸಿದ್ಧ? ಅಂಥ ಅಧ್ಯಾತ್ಮಿಕ ಶಿಸ್ತನ್ನು ತ್ರಿಕರಣಗಳಲ್ಲಿ ಅಳವಡಿಸಿ ಕೊಂಡು ತನ್ನನ್ನು ತಾನೇ ಸುಧಾರಿಸಿಕೊಂಡು ಚರಿಸುವುದಾದರೆ, ಸಾಧಕನಿಗೆ ಅದೆಷ್ಟು ಹೆಚ್ಚಿನ ಲಾಭ ಸಿಕ್ಕುವುದು? ಅದೆಂತಹ ಸತ್-ಚಿತ್-ಆನಂದ-ಪರಿಪೂರ್ಣ ಪರಿಣಾಮ ದಕ್ಕುವುದು? ಪೂರ್ವಿಕರ ಆ ಪ್ರಗತಿಗಾಮಿ ಹಾಗೂ ಪ್ರಾವೀಣ್ಯ ವ್ಯವಸ್ಥೆ ಮಾನವಕುಲದ ಅಂತರ್ಮನದ ಸಿದ್ಧಿಗೆ ಹೇಗೆ ಹೇಗೆ ಅವಕಾಶ ಕಲ್ಪಿಸಿಕೊಡುತ್ತದೆ? ಎಂಬುದನ್ನೆಲ್ಲ ಸಾರ್ವತ್ರಿಕ ಯುಕ್ತ್ಯನು ಭವಗಳೊಡನೆ ಸಾಧಕ ಬಳಗಕ್ಕೆ ತಕ್ಕಮಟ್ಟಿಗೆ ಜ್ಞಾಪಕಕ್ಕೆ ತಂದುಕೊಡು ವುದೇ ಇಲ್ಲಿ ಉದ್ದೇಶವಾಗಿದೆ. ಜಡಜೀವನಿಗೆ ಪರಿಶುದ್ಧಶಿವದರ್ಶನವನ್ನು ಮಾಡಿಸುವುದೇ ಮುಖ್ಯ ಗುರಿಯಾಗಿದ್ದಪ್ರಯುಕ್ತ 'ಶಿವೋಪಾಸನಾ ವಿವೇಕ'ವೆಂಬ ಹೆಸರಿನಿಂದಲೇ ಇದು ಬೆಳಕಿಗೆ ಬಂದಿದೆ.

ಶಿವಾನುಭವದ ದೃಢತೆ ಹಾಗೂ ಸರ್ವಜೀವಿ ಹಿತಕರ ಮೂಲ ಪ್ರವೃತ್ತಿಯನ್ನು ಕಾಪಾಡಿಕೊಳ್ಳುವುದಲ್ಲದೆ—ಈ ಇಪ್ಪತ್ತನೇ ಶತಮಾನದ ಸಮಾಜನೀತಿ, ರಾಜನೀತಿ, ಆರ್ಥಿಕನೀತಿ, ಶಿಕ್ಷಣ ಪದ್ಧತಿ ಮುಂತಾದುವೆಲ್ಲ

ವನ್ನೂ ಒಂದು ಕ್ರಮಬದ್ಧರೂಪದಲ್ಲಿ ಉಪಯೋಗಮಾಡಿಕೊಂಡು ಹೋಗುವುದಕ್ಕೂ, ಆದಿಮ ಶಿವಸಂಸ್ಕಾರವು ಹೇಗೆ ಸಹಾಯ ಕೊಡುತ್ತದೆ? ಅತಿಮಾನವತೆಯ ಪ್ರಾಪ್ತಿಗೆ ಶಿವಧರ್ಮ-ಶಿವಕರ್ಮ-ಶಿವಜ್ಞಾನ-ಶಿವಭಕ್ತಿ ಈ ಚತುಷ್ಪಥಗಳ ಚಿಂತನ-ಮಂಥನ-ನಿಧಿಧ್ಯಾಸನ ಎಷ್ಟೊಂದು ಆಧಾರ, ಎಷ್ಟೊಂದು, ಅಗತ್ಯ? ಸಾಧಕನ ಪ್ರಗತಿಪಕ್ಷಕ್ಕೆ ಅವೆಲ್ಲಾ ಎಷ್ಟೊಂದು ಸಹಾಯಕ? ಎಂಬುದನ್ನು ನವಿರು ನವಿರಾಗಿ—ನವೀನರೀತಿಯಲ್ಲಿ ಈ ಪ್ರಬಂಧದಲ್ಲಿ ವಿಮರ್ಶಿಸಲಾಗಿದೆ.

ಸಂಪ್ರತಿ, ಭಾರತೀಯ ಸಾರಸ್ವತ ಜಗತ್ತಿನ ವಾಸ್ತವಿಕ ಉದ್ಬೋಧನೆಯನ್ನು ಆಧಾರವಾಗಿಟ್ಟುಕೊಂಡು, ಹಲವಾರು ಪೂರ್ವೋಕ್ತಿ (quotation)ಗಳನ್ನೂ, ಮಧ್ಯೆಮಧ್ಯೆ ಕುತೂಹಲಕಾರಕಪ್ರಶ್ನೆಗಳನ್ನೂ ಕೂಡಿಸಿ—ವಿಮರ್ಶಕ ಶೈಲಿಯಲ್ಲಿ ಸಿದ್ಧಗೊಳಿಸಿದ ಈ ಪ್ರಬಂಧವನ್ನು ಸಾಧಕರು ಸ್ವಲ್ಪ ನಿಧಾನವಾಗಿಯೇ ಓದಬೇಕಾದ ಅಗತ್ಯವಿದೆ. ಹಾಗೆ ಮಾಡುವುದಾದರೆ, ಕೈಗೆ ಎಟುಕದ ಭಾಗದ ಅಂತರಂಗ-ಅಭಿಪ್ರಾಯ ಕೂಡ ಕಾಲಕ್ರಮದಲ್ಲಿ ಮನಸ್ಸಿಗೆ ಹೊಳೆಯುತ್ತದೆ; ಹೃದ್ಗೋಚರವಾಗುತ್ತದೆ. ವೀರಶೈವ ಮತವು ಎಷ್ಟೊಂದು ಸಮಗ್ರವಾದುದು? ಸರ್ವಧರ್ಮ ಸಮನ್ವಯದ ರೂಪುರೇಷೆ ಇದರಲ್ಲಿ ಹೇಗೆ ಹೊಂದಿ ಬೆಳೆದಿದೆ? ಆ ಬೆಳೆ ಹೇಗೆ ಅನುಭವಕ್ಕೆ ಬಂದಿದೆ—ಎನ್ನುವ ಸಂಗತಿಯೆಲ್ಲವೂ ಕೃತ ನಿಶ್ಚಯವಾಗುತ್ತದೆ.

ಇಷ್ಟಾದರೂ ಅನ್ಯಥಾ ಜ್ಞಾನ—ಅನವಧಾನ ಮುಂತಾದುದರ ಬಗ್ಗೆ ಈ ಗ್ರಂಥದಲ್ಲಿ ನಾವು ಇನ್ನೂ ಇನ್ನೂ ವಿಚಾರಿಸಬೇಕಾದ್ದು ಬಹಳವಿತ್ತು. ಸ್ವತಂತ್ರ ಆಧಾರಗ್ರಂಥಗಳ ಅಭಾವವಿದ್ದಾಗ ಬಲುಬೇಗ ಅಂಥ ಯಾವದೇ ಇತ್ಯರ್ಥಕ್ಕೂ ಬರುವುದಕ್ಕಾಗುವುದಿಲ್ಲವೆಂಬುದು ಖಚಿತ. ವೀರಶೈವ ಸಿದ್ಧಾಂತದ ನಿಶ್ಚಯದಲ್ಲಿ ಆಧಾರಗ್ರಂಥಗಳ ಕೊರತೆ ಅತೀ ಮುಖ್ಯವಾದುದು. ಎಂದರೆ, ಈ ಮತವನ್ನು ಸಂಪೂರ್ಣವಾಗಿ ಚಿತ್ರಿಸುವ ಗ್ರಂಥಗಳು ಕ್ರಿಸ್ತಶಕ ಆರನೆಯ ಶತಮಾನದವರಿವಿಗೂ ಕಾಣಬರುತ್ತಿಲ್ಲ. ವೇದಾಗಮ ಪ್ರತಿಪಾದಿತ ಧರ್ಮ-ತತ್ವ-ಆಚರಣಾ ನಿಬಂಧನೆಗಳೆಲ್ಲವೂ ಆಚಾರ್ಯವರ್ಗದವರಲ್ಲಿ ಮೌಖಿಕವಾಗಿಯೇ ಉಳಿದುಕೊಂಡು ಬರುತ್ತಿದ್ದ ಕಾಲ ಮೊದಲಿನದು. ಅದೆಲ್ಲವೂ ಪರಮಾರ್ಥವೆಂದು ಅಂದು ಕರೆಯಲ್ಪಡುತ್ತಿತ್ತು. ದೇಶ-ಕಾಲ-

ವಸ್ತು ಭೇದದಿಂದ ಅತೀತವಾದ ಪರಮಶಿವನನ್ನು ದೇಶ-ಕಾಲ-ವಸ್ತುಗಳ ಸದುಪಯೋಗದಿಂದಲೇ ತಿಳಿದುಕೊಳ್ಳುವ ಕುಶಲತೆ, ಅಲ್ಲಿ ಉಪಪಾದಿತ ವಿಷಯು. ಜ್ಞಾನವು ಕ್ರಿಯೆಗೆ ಇಳಿಯದ ಮುನ್ನ ಬೇರೆ ಬೇರೆ ಯಾಗಿ ಕಾಣುತ್ತಿದ್ದ ತತ್ತ್ವಜ್ಞಾನ-ತತ್ತ್ವ ಸಾಕ್ಷಾತ್ಕಾರ-ತತ್ತ್ವಾನುಭೂತಿ ವಿಶೇಷ ವೆಲ್ಲವೂ ಬಲು ಗೋಪ್ಯ. ಆಗ ಕೇವಲ ಭಕ್ತಿಗೆ ಪುರಸ್ಕಾರವಿಲ್ಲ. ಜ್ಞಾನದ ಪರಿಪಕ್ವಾವಸ್ಥೆಗೆ-ಶಿವಾನುಭವಕ್ಕೆ ದೇವ-ದಾನವ-ಮಾನವ ಸಾಮರ್ಥ್ಯವೆಲ್ಲಾ ಶರಣು ; ವಿಶ್ವಕ್ಕೆ ವಿಶ್ವವೆ ಒನ್ಮುಖ.

ಅಂಥ ಗುಟ್ಟು, ಗುರು-ಶಿಷ್ಯ ಪರಂಪರೆಯಲ್ಲಿ ಕೂಟಸ್ಥವಾಗಿಯೇ ಉಳಿದಿರಬೇಕಾಗಿ ಕಟ್ಟುನಿಟ್ಟು ಇತ್ತು. ಈಗಲೂ ಹಲವು ಅಂಶಗಳು ಪೂರ್ವ ದಂತೆಯೇ ಇರುತ್ತಿರುವುದು ಸುಸ್ಪಷ್ಟ. ಎಂದಬಳಿಕ, ವಿಶೇಷಾನುಭವವನ್ನು ಪುಸ್ತಕ ರೂಪದಲ್ಲಿ ಬರೆದಿಡುವ ಪದ್ಧತಿ ವೀರಶೈವರಲ್ಲಿ ಹಿಂದೆಬಿತ್ತು. ಎಂತಲೇ, ಧಾರ್ಮಿಕ ಗ್ರಂಥಗಳ ಅಭಾವವು ಈ ಮತಕ್ಕೆ ಒಂದು ಪ್ರಬಲ ಶಾಪವೇ ಸರಿ ! ಎಂಬ ಮಾತು.

ಶಿವಾದ್ವೈತದ ಸುಳುಹು-ಹೊಳಹು, ಆದಿ-ಅನಾದಿಯಿಂದತ್ತತ್ತಲ ದೆಂದು ಸಿದ್ಧಗೊಳಿಸುವ ಕಾರ್ಯ, ಅದಷ್ಟಕ್ಕೆ, ನಿಂತಿರಲಿ ; ಸದ್ಯಕ್ಕೆ ಭಾರತೀ ಯರ ಸರ್ವೋತ್ತಮ 'ಸಮಾಜಶಾಸ್ತ್ರ'ವೆಂದು ಕರೆಯಲ್ಪಡಬಹುದಾದ, ಅಥವ 'ಅಧ್ಯಾತ್ಮ ಶಾಸ್ತ್ರ'ವೆಂದು ಗೌರವ ಪಡೆದಿರುವ ವೇದ ವೇದಾಂತ ಪುರಾಣಾಗಮೇತಿಹಾಸ ಸಮ್ಮತಿಯಪ್ರಕಾರ—ವೀರಶೈವವು ಕ್ರಿಸ್ತಶಕ ನಾಲ್ಕಾರು ಸಾವಿರ ವರ್ಷಗಳ ಹಿಂದಿನಿಂದಲೂ ಇಂದ್ರಿಯಾನುಭವ, ಅವಸ್ಥಾನುಭವ, ಸಾಕ್ಷ್ಯನುಭವ, ಸ್ವಾನುಭವ ಮತ್ತು ನಿತ್ಯ ಶುದ್ಧ ಬುದ್ಧ ಶಿವಾನುಭವ ವಿಚಾರದ ಕುಶಲಪ್ರಶ್ನೆಯನ್ನು ಮಾಡುತ್ತಲೇಬಂದಿದೆ. ಮಾನವ ಪಾವಿತ್ರ್ಯದ ವಿವೇಚನೆಯನ್ನು ಹಾಗೂ ಅನೂಚಾನಬದ್ಧ ಶಿವ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳುವುದರಿಂದಲೇ ಮಾನವೀಯತೆಯ ಪರಿ ಪೂರ್ಣತೆ, ಎಂಬ ನಿರ್ಣಯವನ್ನು ಒಪ್ಪಿ, ಅದರಂತೆ ನಡೆದುಕೊಳ್ಳುತ್ತಲೇ ಬಂದಿದೆ—ಎಂದೂ ಅಭಿಮಾನದಿಂದ ಹೇಳೋಣ. ಅದಕ್ಕೆ ತಕ್ಕ ಅನು ಕೂಲವೂ ಇದೆ.

"ಕೈವಲ್ಯ ಕೈಯಲ್ಲಿ" ಎನುವ ಧರ್ಮಸೂತ್ರದಂತೆ ಅನುವರ್ತಿ

ಸುತ್ತಾ, ಸಂಪ್ರದಾಯಾನುಸಾರಿ ಯೋಗ, ಜ್ಞಾನ, ಭಕ್ತಿ, ಕ್ರಿಯಾ-ತಪೋಮಾರ್ಗಗಳ ಅಂತಿಮ ವೈಶಿಷ್ಟ್ಯದ ವಿವೇಕವನ್ನು ಅರಿತು-ಆ ನಾಲ್ಕರಲ್ಲೂ ಬೆರೆತು ಆನಂದಗೊಳ್ಳುತ್ತಾ ಸಾಗುತ್ತಿದೆ-ಈ ಮತವು. ಮನುಷ್ಯ ಜೀವನದ ಮೇಲ್ಮೆಯನ್ನು ಸೂಚಿಸುವ ಉಚ್ಚತಮ ಸಂಸ್ಕಾರವ್ಯವಸ್ಥೆಗೆ, ಅದರಲ್ಲೂ ತ್ರಿಕಾಲಾಬಾಧಿತ ಸರ್ವತಂತ್ರ ಸ್ವತಂತ್ರ ಪ್ರಜಾಸತ್ತೆಯ ಆಧಾರ ತತ್ತ್ವಗಳ ಸ್ಥಿರೀಕರಣಕ್ಕೆ-ಮನಸ್ಸಿನ ಸ್ವೈರಾಚಾರ ನಿರ್ಮೂಲನಕ್ಕೆ, ಅಸತ್ಯ-ಅಸಮತೆ-ಅಧರ್ಮಗಳ ವಿರುದ್ಧ ಹೋರಾಟ ನಡೆಸುವುದಕ್ಕೆ ತಕ್ಕ ಸಾಮುದಾಯಿಕ ಹಾಗೂ ಧಾರ್ಮಿಕ ಹಿನ್ನೆಲೆ ಈ ಮತದ ಕಟ್ಟಳೆಯಲ್ಲಿ ಅಡಕವಾಗಿದೆ.

ಇಂಥ ಕಟ್ಟು ಕಟ್ಟಳೆಗಳಾದರೂ ಯಾವಾಗಲೂ ಚಿರಸ್ಥಾಯಿಯಲ್ಲ. ಏಳು ಬೀಳುಗಳು ಸ್ವಾಭಾವಿಕ; ಉಪಲಬ್ಧ ಸಾಹಿತ್ಯರಾಶಿಯು ಈ ಮಾತನ್ನು ದೃಢಪಡಿಸುತ್ತಿದೆ.

"History is the authentic record of the Major achievements of man."

A History of World Civilisation
James, Edgar Swain, Eurasia Publishing House, (P) Ltd., Delhi.

"ಇತಿಹಾಸವು ಮಾನವಜನಾಂಗದ ಪರಿಚಯವನ್ನು ಮಾಡಿಕೊಡುತ್ತಿರುವ ಅಕೃತ್ರಿಮ ಮತ್ತು ಅಧಿಕೃತ ಪರಿಣಾಮ ನಿಷ್ಪತ್ತಿಯ ಪ್ರಮುಖ ದಾಖಲೆ" ಎಂಬ ಮಾತನ್ನು ಸದಾ ಜ್ಞಾಪಕದಲ್ಲಿಟ್ಟುಕೊಂಡು, ಹಳೆಯ ಕಾಲದ ನಮ್ಮ ಸಮಾಜದ ರೂಪುರೇಷೆಗಳನ್ನು ಪರೀಕ್ಷಿಸಬೇಕು. ಅಖಿಲ ಭಾರತ ವೀರಶೈವ ಮಹಾಸಭೆ, ವಿಶ್ವವಿದ್ಯಾನಿಲಯಗಳು, ಧರ್ಮಪೀಠಗಳು, ವಿಶ್ವಧರ್ಮಪರಿಷತ್ತುಗಳೂ—ಉತ್ಸಾಹೀ ವಿದ್ವಾಂಸರೂ, ಯುವಜನರೂ ಈ ಬಗ್ಗೆ ತಂತಮ್ಮ ಪಾಲಿನ ಕೆಲಸಕ್ಕೆ ತೊಡಗಬೇಕು. ತುಂಬ ಆಸಕ್ತಿಯಿಂದ, ಎಚ್ಚರಿಕೆಯಿಂದ ಪುರಾತನ ವಾಙ್ಮಯದ ಸಂಶೋಧನೆಯನ್ನು ನಡೆಸಿ, ಯಾಥಾರ್ಥ್ಯವನ್ನು ಹೊರಗೆಡುಹಬೇಕು. ಪ್ರಾಮಾಣಿಕ ಪುರಾವೃತ್ತವನ್ನು ಬೆಳಕಿಗೆ ತರಬೇಕು. ಕನ್ನಡಭಾಷೆಯಲ್ಲಿರುವ ಸ್ವಕೀಯ ಸಾಹಿತ್ಯ

ರಾಶಿಯನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳಬೇಕು, ಜೊತೆಗೆ, ಕ್ರಿಸ್ತಪೂರ್ವಕ್ಕಿಂತ ಬಹಳ ಮೊದಲಿನ, ಪ್ರಸಿದ್ಧವಾದ ನೆರೆಯ ತಮಿಳಿನ ಸಂಘಕಾಲದ ಮತ್ತು ಶೈವ ನಾಯನಾರರ ಕಾಲದ ಬರವಣಿಗೆಯಲ್ಲಿ, ಅಥವಾ ತಿರುಕ್ಕುರಳ್, ನಾಲ್ಲಡಿಯಾರ್, ಮಣಿಮೇಖಲೈ ಮುಂತಾದ ಗ್ರಂಥಗಳಲ್ಲಿ ಶಿವಸಿದ್ಧಾಂತದ ಲಕ್ಷಣ ಹೇಗೆ ಹೇಗೆ ಅಳವಟ್ಟಿರುತ್ತದೆ ಎಂದು ಆಲೋಚಿಸ ಬೇಕು. ತೆಲುಗುನಾಡಿನ ಪುರಾತನರ ಬಗ್ಗೆ ತಿಳಿದುಕೊಳ್ಳಬೇಕಾದ ಸಂಗತಿ ಇನ್ನೂ ಬಹಳವಿದೆ. ಸಂಸ್ಕೃತ ಭಾಷೆಯಲ್ಲಿ ಇದ್ದಿರಬಹುದಾದ ಹಳೆಯ ಗ್ರಂಥಗಳನ್ನು ಹೊರತರುವ ಕಾರ್ಯವಂತೂ ಮೊದಲನೆಯದು.

ನಮ್ಮ ಈ ಪ್ರಬಂಧರಚನಾಕರ್ತವ್ಯ—ಆ ಎಲ್ಲ ಆಸಕ್ತಿಯ ಎಚ್ಚರಿಕೆಯ ಪ್ರತಿಧ್ವನಿ, ಹಿರಿಯ ಶಿವಧರ್ಮದ ಸಾರಸಂಗ್ರಹ, ಶಿವಸಿದ್ಧಾಂತ "ಪ್ರಮಾ" ಪ್ರತಿಪಾದಕ ಮೂಲಗ್ರಂಥಗಳನ್ನು ಅಭ್ಯಾಸಮಾಡುವ ಆಸಕ್ತಿಯನ್ನು ಜಿಜ್ಞಾಸುಗಳಿಗೆ ಹುಟ್ಟಿಸುವ, ಹಾಗೂ—ದೇಶ, ಕಾಲ, ವಸ್ತುಗಳಿಂದ ಅತೀತವಾದ ಪರಮಾರ್ಥವನ್ನು—ದೇಶ, ಕಾಲ, ವಸ್ತುಗಳ ಸದುಪಯೋಗದಿಂದಲೇ ಪಡೆದುಕೊಳ್ಳಬಹುದೆಂಬುದನ್ನು ಸರ್ವಾನುಭವಸಮ್ಮತವಾಗಿ ಉಪಪಾದಿಸುವುದಷ್ಟೇ ಇಲ್ಲಿ ಕರ್ತವ್ಯವಾಗಿದೆಯೇ ವಿನಾ, ಇವೊಂದು ಚಿಕ್ಕಪುಸ್ತಕದಲ್ಲಿಯೇ—ಹತ್ತಾರು ಸಾಮಾನ್ಯ ವಾಕ್ಯಗಳಲ್ಲಿಯೇ, ಹೇಳಬೇಕಾದುದೆಲ್ಲವನ್ನೂ ಹೇಳಿ ಪೂರೈಸಿದೆನೆಂದಲ್ಲ. ಪ್ರಾಚೀನತಮವಾದ ಉಜ್ವಲವಾದ ಶಾಸ್ತ್ರವಾಣಿಯನ್ನು ಕ್ರೋಢೀಕರಿಸಿ, ಅದರ ಮೂಲಕ ಶಿವಧರ್ಮದ ಸಲ್ಲಕ್ಷಣವನ್ನು ತಕ್ಕಮಟ್ಟಿಗೆ ಪ್ರತಿಪಾದಿಸುವ, ನಮ್ಮ ಈ ಹವ್ಯಾಸ—ಮಹಾನ್ ವೇದಾಗಮ ಪುರಾಣೇತಿಹಾಸ ಗ್ರಂಥರಾಶಿಯಲ್ಲಿ ಹುದುಗಿರುವ ಶಿವಸಂಸ್ಕೃತಿಯನ್ನು ಅಧ್ಯಯನ ಮಾಡಲು ಓದುಗರಿಗೆ ಅಭ್ಯಾಸುವರ್ಗಕ್ಕೆ ಆಸಕ್ತಿಯುಂಟಾಗಲಿ ಎಂಬ ದೃಷ್ಟಿಯಿಂದ. ಹಾಗೆ ಪೂರ್ವಜರ ಆಚಾರವಿಚಾರದ ಕಡೆಗೆ ಕಣ್ತೆರೆದು ನೋಡಲು ಈ ಚಿಕ್ಕ ಪ್ರಬಂಧ ಪೀಠಿಕೆಯಾಗುವುದಾದರೆ, ಆಗ ನಮ್ಮ ಶ್ರಮ ಸಾರ್ಥಕ.

ಕೇವಲ ಶಾಸ್ತ್ರಜ್ಞಾನವೊಂದೇ ಸದಾನಂದಯೋಗವನ್ನು ಆತ್ಮಶಾಂತಿಯನ್ನು ತಂದುಕೊಡಲಾರದು. ಹಾಗೇನಾದರೂ ಅಪ್ಪಿತಪ್ಪಿ ಆಗಿಬಿಟ್ಟರೆ, ಅದು ಕೈಗಡದ ನಿಷ್ಕರ್ಷೆ ಮಾತ್ರ. ನಿಜವಾದ ಆತ್ಮಶಕ್ತಿ–ನೆಮ್ಮದಿ–ಮನ

ಸ್ವಸಮಾಧಾನ ಸಾಧನೆಯಿಂದ, ತನ್ನನ್ನು ತಾನು ವಿಚಾರಿಸಿ ತಪ್ಪನ್ನು ತಿದ್ದಿಕೊಳ್ಳುವ ನಿಯಮದಿಂದಲೇ ಅದು ಲಭ್ಯ. ಬಯಸದೆ ಭೋಗಮೋಕ್ಷ ಕೈಸೇರುವುದು ಆಗಲೇ !

ಸಮಾಜದ ಯಾವತ್ತೂ ಜನತೆ, ಆನುವಂಶಿಕ ಶಿಸ್ತಿಗೆ ಅನುಗುಣವಾಗಿ ಸ್ವಧರ್ಮೋದ್ಧಾರಪ್ರಿಯರಾಗಿ, ಧರ್ಮಶಾಸ್ತ್ರಾಧ್ಯಯನಶೀಲರಾಗಿ, ಪರಂಪರೆಯನ್ನು ಅಚ್ಚುಕಟ್ಟಾಗಿ ಬೆಳೆಸಿಕೊಳ್ಳುತ್ತಲೂ—ಸೋದರಸಮಾಜದ ಸೌಜನ್ಯವನ್ನು ಸದುಪಯೋಗಮಾಡಿಕೊಳ್ಳುತ್ತಲೂ, ಪ್ರತ್ಯನಾತ್ಮನೊಡನೆ ಅಭೇದಪರಿಣಾಮ ಪಡೆದು ಭಾವಾತೀತರಾಗಿಯೂ ಇರುವುದೆಂದರೆ—ಅದರಿಂದ ಸರ್ವರ ಅಭ್ಯುದಯ, ಹಾಗೂ ಸರ್ವೋತ್ಕೃಷ್ಟ ಜಗಚ್ಛಾಂತಿ ಶತಸಿದ್ಧವೆಂದೆನ್ನಲು ಹರ್ಷ. ಅಂಥ ಸುಸ್ಥಿತಿಗೆ ನವ್ಯಪ್ರಪಂಚ ಏರುತ್ತದೆಂದು ವಿಶ್ವಾಸಿಸೋಣ !

॥ ಮಂಗಲಂ ಭವತು ॥

ಬೃಹನ್ಮಠ-ಹಲಗೂರು

೨೦–೨–೬೮

ಶ್ರೀ ಶ್ರೀ ವೀರಭದ್ರಶಿವಾಚಾರ್ಯರು.

# ಗ್ರಂಥ ಪ್ರತಿಪಾದ್ಯ ವಿಷಯುಗಳ ಅನುಕ್ರಮಣಿಕೆ.

[ವಿಶೇಷ :- ಈ ಕೆಳಗಡೆ ನಾಗದಂತದಲ್ಲಿ (Bracket) ಕೊಟ್ಟಿರುವುದು ಪುಟಗಳ ಸಂಖ್ಯೆಯಾಗಿದೆ.]

## ಒಂದನೆಯ ಪ್ರಕರಣ



## ಎರಡನೆಯ ಪ್ರಕರಣ



## ಮೂರನೆಯ ಪ್ರಕರಣ



## ನಾಲ್ಕನೆಯ ಪ್ರಕರಣ

## ಐದನೆಯ ಪ್ರಕರಣ



## ಆರನೆಯ ಪ್ರಕರಣ



## ಏಳನೆಯ ಪ್ರಕರಣ

## ಎಂಟನೆಯ ಪ್ರಕರಣ

ಶ್ರೀ ಜಗದ್ಗುರವೇ ಭಗವತೇ
ರೇಣುಕಾಚಾರ್ಯಾಯ ನಮಃ



# ಶಿವೋಪಾಸನಾವಿವೇಕ

## ಪ್ರಾರ್ಥನಾ

ಶ್ರೀಮತಾಂ ಕೋಮಲಂ ಸದ್ಭಿಃ ಹೃದಯಾಂಭೋಜಮಧ್ಯಗಂ ।
ಶಿವಚೈತನ್ಯಮೇವೈಕಂ ವಂದೇಹಂ ವಿಶ್ವಭೇಷಜಂ ॥ ೧ ॥

ಅರಿವೊಡೆ ನಂದಿಯಗಿರಿಯಾ
ಪರತರ ಗುರುಪೀಠದೊಳಿರ್ದು ಶಿವಧರ್ಮವನೇ ॥
ಭರದಿಂ ಪೋಷಿಸಿ ಮೆರೆದಾ
ಪರಮಂ ಶಿವನಂದಿ ಪೊರೆಗೆ ನಿಸದಂ ಭುವಿಯಂ ॥ ೨ ॥

## ಪ್ರಸ್ತಾವನಾ

ಪಿರಿದೇನಾ ಸಂಪ್ರದಾಯದಿ
ಚರಿಸುತ್ತೀ ಶಿವೋಪಾಸನಾ ವಿವೇಕಮಂ ॥
ನೆರೆಪೇಳ್ದಂ ಲೋಕಮರಿಯಲ್
ವರ ವೀರಭದ್ರಾಖ್ಯಂ ಶಿವಾಚಾರ್ಯನೀಗಳ್ ॥ ೩ ॥

ತಿಳಿದೋದುತ್ತಾಚರಿಸು
ತ್ತಲರುಂ ಪರಿಮಳದ ತೆರದಿ ಧರ್ಮದಿ ಬೆರೆದುಂ ॥
ಕಳೆಕಳಪಾವಿದೇಹಸ್ಥಿತಿಯಂ
ತಳೆದುಂ ಶೋಭಿಸುಗೆ ಜನರ್ ಶಾಂತಿಯ ಮಡಲೋಳ್ ॥ ೪ ॥

ಓಂ ತತ್ಸತ್

೧

ಜನಜೀವನು ಅಮೃತಪುತ್ರನಾಗಿ ಪರಿವರ್ತನೆಗೊಳ್ಳಬೇಕೆಂದರೆ, ಅವನು ಅನುಸರಿಸುವ ಕರ್ಮಕ್ಷೇತ್ರ-ಧರ್ಮಕ್ಷೇತ್ರಗಳು ಅದಕ್ಕೆ ಬಹುಮುಖ್ಯ ಕಾರಣ ಎಂಬುದನ್ನು ತಿಳಿಯಪಡಿಸುವ ಮೊದಲನೆಯ ಪ್ರಕರಣವಿದು.

ವ್ಯಕ್ತ ಜೀವಕುಲದಲ್ಲಿ ಮಾನವನು ಜನ್ಮತಃ ಭಾವನಾಜೀವಿ. ಬುದ್ಧಿ ಜೀವಿಯೂ ಹೌದು. ಚಾಣಾಕ್ಷ. ತನ್ನ ಮತ್ತು ತನ್ನ ಅನುವಿನ ಜಗದ ಆಗು-ಹೋಗು, ಯೋಗ-ಕ್ಷೇಮ ಪರಿಸ್ಥಿತಿಯನ್ನರಿಯಲು ಅವನ ಒಲವು-ಓಟ ಜಾಸ್ತಿ. ಸತ್ಯದತ್ತಲೂ ಅವನ ಚಿಂತನ-ಮಂಥನ ಅನಂತ ; ಅಪಾರ.

ತಾನು ಯಾರು ? ತನ್ನ ನೆಮ್ಮದಿಗೆ ಬೇಕಾದ ಅನುಕೂಲತೆ ಯಾವ ಯಾವುದು ? ಎಂಬುದರಿಂದ ಆರಂಭಿಸಿ, ಪಂಚಬ್ರಹ್ಮಮಯ ಪ್ರಪಂಚ ವ್ಯವಸ್ಥಿತ ಭೂತ ಭೌತಿಕ ಸರ್ವಸ್ವವನ್ನೂ ಪೂರ್ಣವಾಗಿ ಅಳೆದಳೆದು ನೋಡುತ್ತಾನೆ ; ಬುದ್ಧಿಯ ಒರೆಗಲ್ಲಮೇಲೆ ಒರೆಹೊರೆಸು ಪರೀಕ್ಷಿಸುತ್ತಾನೆ. ಪ್ರಾಚೀನ-ನವೀನ ವೈಜ್ಞಾನಿಕ ದೃಷ್ಟಿಯನ್ನು (Scientific Look) ಒಂದುಗೂಡಿಸಿ ಬೆಲೆಕಟ್ಟುತ್ತಾನೆ. ಅದನ್ನು ತನ್ನದನ್ನಾಗಿ ಮಾಡಿಕೊಳ್ಳುವ ಆಸೆ !

ಆ ಅಂತರ್ಜ್ಞಾನದ (Intuition ಇಂಟ್ಯೂಶನ್) ಕಡೆಗೆ ವಾಲುವ ದಕ್ಕಿಂತಲೂ, ಸಕಲ ಸೌಭಾಗ್ಯ ಪರಿವೇಷ್ಟಿತ ರಂಗುರಂಗಿನ ಆಯಕಟ್ಟಿನ ಗೌರವ ಸ್ಥಾನಸಂಪಾದನೆ ಮತ್ತು ಅದರ ರಕ್ಷಣೆ ಮುಂತಾದ ಲೌಕಿಕ ಪ್ರಗತಿ ಯತ್ತ ಅವನಿಗೆ ಹಂಬಲು ಜಾಸ್ತಿ. ದ್ವಿಗುಣ ತ್ರಿಗುಣ ಲಾಭವ ಬಯಸಿ, ಸನ್ನಿವೇಶಾನುಗುಣ್ಯ ಸಾಹಸವಷ್ಟನ್ನೂ ಶ್ರದ್ಧೆಯಿಂದ ಮಾಡುತ್ತಾನೆ. ಇಚ್ಛಿತವನ್ನು ಪಡೆಯುತ್ತಾನೆ. ಅದುವೇ 'ಸುಧರ್ಮ-ಸ್ವಧರ್ಮ' ವೆನ್ನು ತ್ತಾನೆ. ನಿಜವಿರಬಹುದೇ ?

ಇರಲಾರದು. ಏಕೆಂದರೆ—ಅವನ ಆ ಸ್ವಧರ್ಮದಲ್ಲಿ ಜ್ಞಾನಶಕ್ತಿ-ಕ್ರಿಯಾಶಕ್ತಿ ಇವೆರಡರ ಕರ್ತವ್ಯ ಸರಿಯಾಗಿ ಹೆಪ್ಪುಗಟ್ಟಿ ನಿಂತಿಲ್ಲ. ಪಕ್ಷ-ಪ್ರತಿಪಕ್ಷಗಳನ್ನು ಸಮತೂಗಬಲ್ಲ ಪ್ರಯೋಗ ಅಲ್ಲಿ ಚೆನ್ನಾಗಿ ಆಗಿಲ್ಲ. ತಕ್ಕಡಿಯ ದಂಡಿ ಸಮನಾಗಿಲ್ಲ. ತೂಗಲ್ಪಡುವ ದ್ರವ್ಯ ಅಸ್ಪಟವಲ್ಲ.

ಅವಿನಾಶಿಯಲ್ಲ! ಇನ್ನು ಅಂತಹ ಪೂರ್ಣಪರಿಷ್ಕಾರ ಧರ್ಮವೊಂದಿದ್ದರೆ ಅದುವೇ ಶಿವಧರ್ಮ. ಅದುವೇ ಅಂತರ್ವಿಜ್ಞಾನ. ಸಾಧಕನ ಸರ್ವಾಂಗೀಣ ಉನ್ನತಿಯನ್ನು ಅಪೇಕ್ಷಿಸುತ್ತದೆ ಅದು. 'ಇಲ್ಲೂ-ಅಲ್ಲೂ' ಸಲ್ಲುವ ಪರಿಶುದ್ಧ ಸಾಣ್ಯವನ್ನು ಸಿದ್ಧಗೊಳಿಸುತ್ತದೆ ಅದು.

ಯತೋಽಭ್ಯುದಯನಿಃಶ್ರೇಯಸಃ ಸಿದ್ಧಿಃ ಸ ಧರ್ಮಃ

(ವೈ. ದ. ೧-೧-೨)

*　　*　　*　　*

ದೇವಪ್ರಭೆಯ ಕಡೆಗೆ ಕಣ್ಣಿಟ್ಟು ನೋಡಿದ್ದಾನೆ. ದೈವೀಶಕ್ತಿಯನ್ನು ಕಂಡುಹಿಡಿದು ಮಹಾದಾರ್ಶನಿಕನೆನಿಸಿಕೊಂಡಿದ್ದಾನೆ. ದೂರದರ್ಶಕ ಯಂತ್ರದಂತೆ (Telescope) ದೂರದರ್ಶಿಯಾಗಿ, ಸೂಕ್ಷ್ಮದರ್ಶಕ ಯಂತ್ರದಂತೆ (Microscope) ಸೂಕ್ಷ್ಮದರ್ಶಿಯಾಗಿ ಒಪ್ಪುತ್ತಿದ್ದಾನೆ. ಸತ್ಯಾನ್ವೇಷಿಯಾಗಿದ್ದಾನೆ. ಆ ಶಿವಧರ್ಮಿ.

ಕಾರ್ಯ-ಕಾರಣ ವಸ್ತುವಿಶೇಷವನ್ನು ತುಂಬು ಎಚ್ಚರಿಕೆಯಿಂದ ಪರಿಶೋಧಿಸಿ-ಪರಿಚಿಂತಿಸಿ, ನಿಜವನ್ನು ಮೆಚ್ಚಿ, ಆ ನಿರಾಲಂಬ ಪರಂಜ್ಯೋತಿಯೊಡನೆ ಒಂದಾಗಿ ಬೆಳಗುತ್ತಿದ್ದಾನೆ. ಜಗತ್ತಿಗೆ ವಿವಿಧ ಅನುಕೂಲಗಳನ್ನು ಕಲ್ಪಿಸಿಕೊಡುವ ಚಿತ್ಕಳಾತೇಜವಾಗಿ, ಸಂಪೂರ್ಣ ಶಿವಧರ್ಮವೇ ಆಗಿ, ತಾನಿದ್ದಾನೆ—ತಪಶ್ಶಕ್ತಿಯಿಂದ.

ಚಂದ್ರಕಾಂತೇ ಯಥಾ ತೋಯಂ ಸೂರ್ಯಕಾಂತೇ ಯಥ್ಯಾನಲಃ |
ಬೀಜೇ ಯಥಾಂಕುರಃ ಸಿದ್ಧಸ್ತಥಾಽಽತ್ಮನಿ ಶಿವಃ ಸ್ಥಿತಃ || ೩೫ ||
ನಿತ್ಯಾನಂದಚಿದಾಕಾರಮಾತ್ಮತತ್ತ್ವಂ ವಿಹಾಯ ಕಃ |
ವಿವೇಕೀ ರಮತೇ ದೇಹೇ ನಶ್ವರೇ ದುಃಖಭಾಜನೇ || ೬೯ ||

(ಸಿ. ಶಿ. ಪರಿ-೫)

ಶಿವಶ್ಯಕ್ತ್ಯಾ ಯುಕ್ತೋ ಯದಿ ಭವತಿ ಶಕ್ತಃ ಪ್ರಭವಿತುಂ
ನಚೇದೇವಂ ದೇವೋ ನ ಖಲು ಕುಶಲಃ ಸ್ಪಂದಿತುಮಪಿ ||
ಅತಸ್ತ್ವಾಮಾರಾಧ್ಯಂ ಹರಿಹರವಿರಿಂಚಾದಿಭಿರಪಿ
ಪ್ರಣಂತುಂ ಸ್ತೋತುಂ ವಾ ಕಥಮಕೃತಪುಣ್ಯಃ ಪ್ರಭವತಿ ? || ೧ ||

(ಸೌಂದರ್ಯ ಲಹರಿ)

ಆಧಿ ಭೌತಿಕ, ಆಧಿ ದೈವಿಕ, ಆಧ್ಯಾತ್ಮ ತರಂಗದ ನೂರು ಸಾಸಿರ ಕೋಟಿ ಬಡಿತ ಹೊಡೆತಗಳಿಂದ ತಪ್ಪಿಸಿಕೊಂಡು, ಇಹ-ಪರ ಭೋಗವನ್ನು ಕ್ರಮಶಃ ಲಭ್ಯಮಾಡಿಕೊಂಡು, ದೇವಪ್ರಸಾದವನ್ನು ಸಂಪಾದಿಸಿ, ಸಂತೃಪ್ತ ನಾದ ಆತ್ಮಶಿಲ್ಪಿಯ ಆ ಸಮೀಕ್ಷೆ ಸಕಾಲಿಕ ಮತ್ತು ಸಫಲ; ಪ್ರತ್ಯಕ್ಷ ಸಂಸಿದ್ಧ. ಅದು ಎಂದೆಂದಿಗೂ—' ಮೊಲದಕೋಡು, ಮಳಲನೆಯ್ ' ಎಂದೆನಿಸಿಕೊಳ್ಳದು.

ಋಷಿ-ಮುನಿಗಳ ವಿಶಾಲವಾದ-ಆಳವಾದ ದೃಷ್ಟಿ, ಸಾಧು-ಶರಣರ ದೀರ್ಘ ಪರಿಶ್ರಮ, ಶಾಸ್ತ್ರಜ್ಞರ ಸಮ್ಯಕ್ ಪರಿಷ್ಕರಣ, ಗುರುಬೋಧೆಯ ನಿಶ್ಚಿತನ್ಯಾಸ—ಈ ಎಲ್ಲದರಲ್ಲೂ ಆ ಪರವಸ್ತುವಿನ ಅಧಿಕೃತ ಅನ್ವೇಷಣೆ ಸ್ಪಷ್ಟವಾಗಿ ಸಾಗಿದೆ. ಶುದ್ಧವಿದ್ಯಾಕರ್ತೃ ಜಗನ್ನಾಥನ ಸರ್ವತಂತ್ರ ಸ್ವತಂತ್ರ ಶಕ್ತಿಯನ್ನು ಅನುಲಕ್ಷಿಸಿ ಉತ್ತಮ ಮಟ್ಟದ ಜಿಜ್ಞಾಸೆ ನಡೆಸಿ, ಅವರೆಲ್ಲರೂ ಪಡೆದ ನಿಲುಗಡೆಯ ಸಮ್ಮತಿ :

" ಅಖಂಡ ವಿಶ್ವದ ಮೂಲಧ್ವನಿ ಒಂದಿದೆ. ಅದು ಜನನ-ಮರಣ-ಮುಪ್ಪು-ರೋಗ ಮೊದಲಾದ ವಿಕ್ಷೇಪಗಳಿಂದ ಆವೃತವಾಗದುದು. ಅದರ ಸಂಕಲ್ಪ ಶಕ್ತಿಯಿಂದಲೇ ವಿಶ್ವಸೃಜನಾದಿ ಪಂಚಕೃತ್ಯ ವ್ಯವಸ್ಥೆ ಸಾಗಿ ಬರುತ್ತಿದೆ " ಹೀಗೆಂದು.

ಪ್ರತಿಬೋಧವಿದಿತಂ ಮತಂ ಅಮೃತತ್ವಂ ಹಿ ವಿಂದತೇ |

(ಕೇ. ಉ. ೨-೪).

ಜನ್ಮಾದ್ಯಸ್ಯ ಯತಃ |

(ಬ್ರ. ಸೂ. ೧-೧-೨-೨).

ಜನ್ಮಾದಿ ಸೃಷ್ಟಿ ಸ್ಥಿತಿಲಯ ತಿರೋಧಾನಾನುಗ್ರಹಾತ್ಮಕಂ
ಕೃತ್ಯಪಂಚಕಂ ಅಸ್ಯ ಚಿದಚಿತ್ ಪ್ರಪಂಚ ವಿಲಾಸಸ್ಯ |
ಯತೋ ಯಸ್ಮಾತ್ಸ್ವಾಭಾವಿಕಾನಂತ ಶಕ್ತಿವಿಶಿಷ್ಟ-
ಬ್ರಹ್ಮಣಸ್ಸಂಭವತಿ ತದ್ಬ್ರಹ್ಮೇತಿ ಸೂತ್ರಾರ್ಥಃ ||

(ಶ್ರೀ. ಭಾ. ಭಾ II. ಪು. ೨೭).

* * * *

೧. ಅನಾದಿ ಜೀವನು ಪೂರ್ವಜನ್ಮದ ದುಷ್ಕರ್ಮ ವಶದಿಂದ ಅಶುದ್ಧೋಪಾದಿ ಸಂಯುಕ್ತನಾದನು. ಆದರಿಂದಲೇ ಅವನಿಗೆ ಬಗೆಬಗೆಯ ದುಃಖ-ದೌರ್ಜನ್ಯ ಆಘಾತ ಪ್ರಾಪ್ತವಾಯಿತು. ಈಗ ಸ್ಥಿರವಿಶ್ರಾಂತಿ ಬೇಕು. ಅದನ್ನು ದೊರಕಿಸಿಕೊಳ್ಳುವ ಪರಿ ಹೇಗೆ? ಸುಲಭದ ಮಾತಲ್ಲ. ಅನಂತಾನಂತ ಪ್ರಯತ್ನ ಅಗತ್ಯ. ಜ್ಞಾನಪಿಪಾಸೆ ಅವುಗಳಲ್ಲೊಂದು. ಅದನ್ನು ತುಂಬು ಎಚ್ಚರಿಕೆಯಿಂದ ಸಂಗ್ರಹಿಸಬೇಕು. ಶಾಂತಿಮಂತ್ರ ಬರಿದೆ ಬಾಯೊಳಗಿದ್ದರೆ ತೀರದು; ಮನದ ಮೂಲಕ ಕೃತಿಗಿಳಿಸಬೇಕು— ಅವನು.

೨. ಸೀಮಾಂತವಾದ ಮೂವತ್ತಾರು ಮಹಾತತ್ತ್ವಗಳ ಮೂಲ ಸ್ತಂಭರೂಪವಾಗಿ, ಆ ಎಲ್ಲದರಿಂದ ಪ್ರತ್ಯೇಕವೂ ಶಾಶ್ವತವೂ ಸ್ವಯಂ ತೇಜವೂ ಆದ ಕೇಂದ್ರೀಯ ಪರವಸ್ತುವೊಂದಿದೆ, ಅದು ಅತ್ಮಾಪಮ್ಯವು. ತಾನಿದ್ದಂತೆಯೇ ಇದೆ ಎಂಬ ಅರಿವನ್ನು ಆಸ್ವಾದಿಸುತ್ತಾ ಹೋದಂತೆಲ್ಲ, ಸಾಂಸಾರಿಕ ಜೀವನು ಮನೋವಿಕಾರದಿಂದ ನಿವೃತ್ತನಾಗುತ್ತಾನೆ; ಪೂರ್ವೋತ್ತರ ಭಾವಿತ್ವ ಸಚ್ಚಿದಾನಂದ ವಿಶಿಷ್ಟವಾಗುತ್ತಾನೆ, ಮನಶ್ಶುದ್ಧಿ ಯಿಂದ ಆ ಮೂಲಾಧಾರ ವಸ್ತು ಸಮನ್ವಯವಾಗಬೇಕು. ನೆನಹಿಲ್ಲದ ಕುರುಹಿಲ್ಲದ ಆ ಘನವನ್ನು ಅವಗಾಹನೆ ಮಾಡಿದವನೇ ಪುಣ್ಯಶಾಲಿ. ಜೀವರ ಆಚರಣೆಗೆ ಅನುಸಾರವಾಗಿ ಆ ಪುಣ್ಯದ ಅವತರಣ.

೩. ಬುದ್ಧಿಯ ಅಳತೆಗೆ ಮೀರಿದ ಅತಿಮಾನುಷ ಶಕ್ತಿಯ ಹಸ್ತ ಕ್ಷೇಪಕ್ಕೆ ಸಿಲುಕಿ ಆ ಆವೇಶಭರದಲ್ಲಿ ಲೌಕಿಕವನ್ನು ನಿಂದಿಸಿ, ನಿಸರ್ಗದ ಮುನಿಸಿಗೆ ತುತ್ತಾಗಲೊಲ್ಲನು-ಸುಜ್ಞಾನಿ. ಅದಕ್ಕೆ ಪ್ರತಿಯಾಗಿ ತನ್ನ ಗುಣ ದೋಷಗಳನ್ನು ಸರಿಪಡಿಸಿಕೊಳ್ಳಲು ಯತ್ನಿಸುತ್ತಾನೆ; ಪಟ್ಟಭದ್ರ ಪ್ರಕೃತಿ ಪರ್ಯಂಕದಲ್ಲಿಯೇ, ಅರ್ಥಾತ್ ತಾನು ಮೆಚ್ಚಿದ ವಿಶ್ವಪ್ರೇಮಾದಿ ಸದ್ವರ್ತನೆ ಯಲ್ಲಿಯೇ–ದೈವೀಶಕ್ತಿಯ ಆ ಅಸದೃಶ ಸಾಮರ್ಥ್ಯವನ್ನು ಭಾವಿಸಿ ತಿಳಿಯ ಹೋಗುತ್ತಾನೆ. ಅದಕ್ಕೆ ಅನ್ವಯವಾಗುವ ಒಳ್ಳೆಯ ಹಾದಿಯಲ್ಲಿ ಕಾಲಿಟ್ಟು, ಆ ನೈತಿಕಸಾಧನೆಯಲ್ಲಿ ಜನಸಾಮಾನ್ಯರಿಗೆ ಮಾದರಿಯಾಗುತ್ತಾನೆ; ನಾಗರಿಕರ ವಿಶ್ವಾಸ ತಳೆಯುತ್ತಾನೆ. ಇದು ಅವನ ನಿತಾಂತ ಆತುರ. ಪಶು ಸಹಜ ಪ್ರವೃತ್ತಿಗೆ ಅಲ್ಲಿ ಅವಕಾಶವಿಲ್ಲವೇ ಇಲ್ಲ.

೪. ತನ್ನೊಬ್ಬನ ಕುಶಲದ ಸಲುವಾಗಿ ಮಾತ್ರ, ಅವುದೋ ಒಂದು ನಿರ್ದಿಷ್ಟ ಪ್ರದೇಶವನ್ನು ಅಥವಾ ದುರಾಶಾ ಮರುಮರೀಚಿಕೆಯನ್ನು ಅರಸುತ್ತ ಹೋಗಲು ಅವನ ಮನಸ್ಸು ಇಚ್ಛಿಸದು. ಅದಕ್ಕೆ ಪ್ರತಿಯಾಗಿ-ಭ್ರಷ್ಟಾಚಾರದ ಮೋಹಕ್ಕೆ ಮರುಳಾಗಿ ವಿವಿಧ ಶ್ರಮಕ್ಕೆ ಗುರಿಯಾಗಿ ಬೊಬ್ಬಿಡುವವರ, ಅಜ್ಞರ, ಹಸಿದವರ ಉದ್ಧಾರದಲ್ಲಿ ಭಾಗವಹಿಸುತ್ತದೆ; ಕೇವಲ ಪ್ರವೃತ್ತಿ ಮಾರ್ಗವನ್ನು ಹಿಡಿದು ಮತ್ತೆ ಮೋಸಹೋಗದಂತೆ, ಒಡನಾಡಿ ಇಂದ್ರಿಯಗಳನ್ನು ಎಚ್ಚರಿಸುತ್ತದೆ; ಲೋಕಾನುರಾಗ ಮತ್ತು ಭೂಮಾನಂದ ಈ ಎರಡರ ತುಲನಾತ್ಮಕ 'ತ್ಯಾಗ-ಭೋಗ-ಯೋಗ' ಸ್ಥಿರೀಕರಣ ಸಂಸ್ಕೃತಿಯನ್ನು ಗೌರವಿಸುತ್ತದೆ, ಅದು.

೫. ಜಡಾಜಡ ವಸ್ತುಪ್ರಪಂಚದ, ಕಾರ್ಯ-ಕಾರಣ ಸರ್ವಸ್ವವಾದ ಅರಿವು-ಆಚರಣೆಗಳೆಲ್ಲವೂ ಮೊದಮೊದಲು ಅದೊಂದು ತೆರನಾದ ಊಹಾಪೋಹ ಪ್ರಯತ್ನವೇನೋ ಎಂಬಂತೆ ಭಾಸವಾಗಬಹುದು. ಆದರೆ ಧಾರ್ಮಿಕತೆಯ ವಿಕಾಸದಿಂದ ಉಪಾಸಕ ಮನಸ್ಸು ಜಾಗೃತವಾಗುತ್ತಾ ಹೋಗಲು, ಮುಂದೆ ಅದರ ಮಹತ್ವ ತಾನೇತಾನಾಗಿ-ಸ್ಪಷ್ಟವಾಗಿ ಗೋಚರವಾಗುತ್ತದೆ. ಸ್ವಾರ್ಥಭಾರ ಪಾಶವೀ ತೃಷ್ಣೆಗಳನ್ನೆಲ್ಲ ತೃಣೀಕರಿಸಿ, ವಿಶ್ವಬಾಂಧವ್ಯ ಪ್ರಜ್ಞಾ ಸಂಪುಟದಲ್ಲಿ ಚಿತ್ತವು ಎರಕವಾಗಿಬಿಟ್ಟಿತೆಂದರೆ, ಆಯಿತು:

ವಿಶ್ವಾತ್ಮ ಶಿವಚೈತನ್ಯದ ಲೀಲಾವಿಲಾಸವೇ ಜಗತ್ತು ಎಂದೂ, ಮೂಲದಲ್ಲಿರುವ ಏಕಮೇವಾದ್ವಿತೀಯಂ ರುದ್ರಪಶುಪತಿತ್ವವೇ-ಜಗದ್ವಿಸ್ತಾರದ ಬಹುತ್ವವೆಂದೂ, ತಾನು ಆ ಅವ್ಯಾಜ ಧರ್ಮದ ಅಂಶವೆಂದೂ ಅರಿತು-ಆಚರಿಸಿ ತೃಪ್ತನಾಗಲು ಸಾಧ್ಯ. ಸತ್ಯಸಮೀಕ್ಷಾ ಸಂಪ್ರದಾಯಸ್ಥರ-ಶಿವಶರಣರ ಜೀವಮಾನ ಇದಕ್ಕೆ ಉದಾಹರಣೆ.

೬. "ಅದು ಕೆಟ್ಟದ್ದು-ಇದು ಕೆಟ್ಟದ್ದು" ಎನ್ನುತ್ತ, ಪ್ರಾಪಂಚಿಕ ಪ್ರವೃತ್ತಿಯಮೇಲೆ ಸುಮ್ಮಸುಮ್ಮನೆ ಧಾಳಿಮಾಡುವ ಚಟ ಉತ್ತಮವಲ್ಲ. ಕೆಟ್ಟದ್ದು ಕಂಡುಬಂದರೆ, ಅದನ್ನು ಸುಧಾರಣೆಗೊಳಿಸಿಕೊಳ್ಳಬೇಕು; ಉಪಯೋಗ ಪಡೆಯಬೇಕು. ಪಾಪಕ್ಕೆ ತಕ್ಕಂತೆ ಪ್ರಾಯಶ್ಚಿತ್ತವಿದೆ. ಕಳೆ ಕಿತ್ತರೆ, ಹೊಲ ಹಸನಾಗುತ್ತದೆ.

ಚಿನ್ನದಿಂದ ಒಳ್ಳೊಳ್ಳೆಯ ಒಡವೆಗಳನ್ನು ಸಿದ್ಧಗೊಳಿಸಿ ಮಾರಾಟ ಮಾಡಿದರೇನೇ ಜನರು ಅವನ್ನು ಅಕ್ಕರೆಯಿಂದ ಕೊಂಡುಕೊಳ್ಳುತ್ತಾರೆ; ಅಲಂಕರಿಸಿಕೊಂಡು ನಲಿಯುತ್ತಾರೆ. ಮೂಲವಸ್ತುವಿಗೆ ಬೆಲೆ ಹೆಚ್ಚುತ್ತದೆ. ಅದರಂತೆಯೇ ಪರಮಾತ್ಮ ಪ್ರಸಾದಪ್ರಾಪ್ತಿಗಾಗಿ, ವ್ಯಷ್ಟಿ-ಸಮಷ್ಟಿ, ಪ್ರಾಕೃತಿಕ-ಅಪ್ರಾಕೃತಿಕ, ಪ್ರವೃತ್ತಿ-ನಿವೃತ್ತಿ ಉಭಯ ಸ್ತರಸೂಕ್ಷ್ಮವನ್ನು ಅನ್ವೇಷಿಸಿ, ಅವೆಲ್ಲವನ್ನೂ ಮರ್ಯಾದಾಪೂರ್ವಕ ಬೇಕುಮಾಡಿಕೊಂಡು ಬಾಳಲು ಕಲಿತಾಗಲೇ ಮನುಷ್ಯಜನ್ಮ ಸಾರ್ಥಕ. ಅದೇ ಪರಮತೃಪ್ತಿಯ ಸ್ಥಾನ. ಜೀವ-ಪರಮರ ಸಮರಸಜೀವನದ ಆ ಸ್ಥಿತಿಯೇ ಮುಮುಕ್ಷುತ್ವ.

—ಇದೆಲ್ಲವೂ ಜೈವೀ ಪ್ರಜ್ಞೆಯುಳ್ಳ ಆ ಪ್ರಾಜ್ಞರ ಪರಮಾನುಭಾವದ ನಿಲುವಳಿ.

ಸ್ವಾತ್ಮಾನಮಾತ್ಮನಾ ಕೃತ್ವಾ ಸ್ವಾತ್ಮನ್ಯೇವ ವ್ಯಚಿಂತಯನ್ ।
ಪರಾತ್ಪರತರಂ ಸ್ವಸ್ಥಂ ನಿರ್ಮಾಯಂ ನಿರವಗ್ರಹಂ ॥ ೪ ॥
ತದ್ವಸ್ತುಭೂತೋ ಭಗವಾನೀಶ್ವರೋ ವೃಷಭಧ್ವಜಃ
ಅವಿಜ್ಞಾತಗತಿಸ್ತೂತಿಸ್ಸಹರಃ ಪರಮೇಶ್ವರಃ ॥ ೫ ॥

(ಶಿ. ರು. ಸಂ. ಪಾರ್ವತೀಖಂಡ, ಅಧ್ಯಾಯ-೨೫)

ಅಂಗಂ ಜೀವಃ ಪರಂ ಲಿಂಗಂ ಸಾಮರಸ್ಯಂ ತಯೋಃ ಶುಭಮ್ ।
ಯೋಗ ಇತ್ಯುಚ್ಯತೇ ಸದ್ಭಿಃ ಶಿವತತ್ತ್ವಾರ್ಥವೇದಿಭಿಃ ॥ ೧೩೨ ॥
ಅಹಂ ಶಬ್ದಂ ಪ್ರಯುಂಜಾನೋ ಲೋಕಃ ಸರ್ವೋऽಪಿ ದೃಶ್ಯತೇ ।
ಹೃದಯಂ ನಿರ್ದಿಶತ್ಯೇವ ಹ್ಯಹಂ ತತ್ರ ಸ್ಥಿತಸ್ತತಃ ॥ ೧೪೩ ॥
ಯತೋऽಸ್ಯ ಹೃದಯೇ ನಿತ್ಯಂ ಪ್ರಕಾಶೋऽತೀವ ವಿದ್ಯತೇ ।
ನ ತಥಾನ್ಯತ್ರ ತಸ್ಮಾಚ್ಚ ಹೃದಯಂ ಹಿ ವಿಶಿಷ್ಯತೇ ॥ ೧೪೪ ॥

(ಕ್ರಿಯಾ, ಉ. ೨)

ಚಿದ್ರೂಪ ಪರಮಾತ್ಮ ಪರಮಾರ್ಥ ಪ್ರತಿಯೋಗದ ಇಂಥ ಆಲೋಚನೆ ಯಾವದೋ ಏನೋ ಒಂದು ಬಗೆಯ ಶ್ರೀಮದ್ಗಾಂಭೀರ್ಯದ ಒಣಚರ್ಚೆಯಿಂದ ಮುಗಿಯುವದಿಲ್ಲ; ಬರೀ ಪಾಂಡಿತ್ಯ ಲಹರಿಯಲ್ಲಿ ತೇಲಿಸಿಬಿಡಲೂ ಆಗುವುದಿಲ್ಲ. ಕ್ರಮಬದ್ಧ ಧರ್ಮಬುದ್ಧಿ(ಜ್ಞಾನ), ಕ್ರಿಯೆ, ಭಕ್ತಿ, ಯೋಗ—

ಈ ಶ್ರೇಷ್ಠ ಸಾಧನಗಳಿಂದ ಅದು ಕರಗತವಾಗಬೇಕು. ಅನುಭವ ಪ್ರಸಿದ್ಧ ದೇವಪ್ರಪಂಚದ ಅಂತರ್ಯಾಮಿಯಾಗಿ, ಸರ್ವಜೀವ ಸ್ನೇಹಪರನಾಗಿ ಸಾಧಕನು ಉಳಿಯಬೇಕು. ಸ್ವಾವಲಂಬನ, ಕರ್ತವ್ಯಬುದ್ಧಿ-ಇಂತಿಂತ ಪರಿಪಕ್ವ ನ್ಯಾಯಮಾರ್ಗಸ್ಥಿತ ಅನುಭವದ ಆ ಬಾಳುವೆ ವಿಶ್ವದ ಅಭ್ಯುದಯ ಕಾರಣ ಮಹಾ ಶಕ್ತಿಯೇ ಆಗಿದೆ—ಎಂದು ಶಿವಸಿದ್ಧಾಂತವು ಉದ್ಘೋಷಿಸುತ್ತಿದೆ. ಅದನ್ನನುಸರಿಸಿ ನಡೆದವರೇ ಶಿವತತ್ತ್ವೋಪಾಸಕರು—ಶಿವ ಜ್ಞಾನಿಗಳು.

* * * *

ನ ವಾ ಅರೇ ಪತ್ಯುಃ ಕಾಮಾಯ ಪತಿಪ್ರಿಯೋ ಭವತ್ಯಾತ್ಮನಸ್ತು
ಕಾಮಾಯ ಪತಿಃ ಪ್ರಿಯೋ ಭವತಿ | ಇತ್ಯಾದಿನಾ ;
ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತಿ || ಇತ್ಯಂತೇನ
(ಬೃ. ಉ. ೪-೫-೬)

"ಪ್ರತಿ ಮನುಷ್ಯನೂ ಅಕಲುಷಿತ ದೇವ ಪ್ರೇಮದ ಮೂಲಕವೇ ಆತ್ಮಶಕ್ತಿಯನ್ನೂ ಮನಶ್ಶಕ್ತಿಯನ್ನೂ ಉತ್ಥಾನಗೊಳಿಸಿಕೊಳ್ಳಬೇಕು. ತತ್ಸಂಬಂಧ ಆಧಾನ-ಪ್ರದಾನಕರ್ತವ್ಯವಷ್ಟನ್ನೂ ಶಿವಾತ್ಮಕಾಮನೆಯಿಂದಲೇ ಆರಂಭಿಸಿ ಸಾಗಿಸಿ, ಕೊನೆಮುಟ್ಟಬೇಕು. ಎಂದರೇನೇ ಆ ಹೃದಯದಲ್ಲಿ ಧರ್ಮವು ಜ್ವಲಂತವಾಗುತ್ತದೆ; ಪರಮಾತ್ಮ ಬೋಧಾ 'ಇಚ್ಛಾ-ಜ್ಞಾನ-ಕ್ರಿಯೆ'ಗಳು ಕೈ ಹಿಡಿಯುತ್ತವೆ; ಜೀವನ ಹಸನಾಗುತ್ತದೆ; ಅಭೀಪ್ಸೆ ಸಮ್ಮಿಳನವಾಗುತ್ತದೆ." ಎನ್ನುವ ಬೃಹದಾರಣ್ಯಕ ಶ್ರುತಿವಾಕ್ಯವನ್ನು ಆ ಶಿವ ಜ್ಞಾನಿಯು ಮೆಚ್ಚಿದನು. ಗುರು ನಿರೂಪಿಸಿದಂತೆ, ತತ್ಸಂಬಂಧ ಆಚಾರ ವಿಚಾರಗಳನ್ನು ಬಳಕೆಗೆ ತಂದುಕೊಂಡನು.

ಮಾನವ-ಮಾನವರೊಳಗಿನ ಪರಸ್ಪರತೆ, ಅದು ಗಟ್ಟಿಮುಟ್ಟಾಗಿ ನಿಂತಂತೆಲ್ಲ, ಮಾನವ ಮತ್ತು ಇತರ ಚರಾಚರ ಜೀವಗಣದ ನೋವು-ನುರಿ, ಸಮ ಸಮಾನ ಸಮಾಹಿತವಾದಂತೆಲ್ಲ—'ದಯಾ ಧರ್ಮ'ದ ಆ ಗರಿಷ್ಠತಮ ವ್ಯವಸ್ಥೆಯಿಂದಾಗಿ—ಇಡೀ ಜಗದ ಒಕ್ಕೂಟ ಸ್ಥಿರವಾಗುತ್ತದೆ. ಮಾನವನು ಮಾನವನಾಗಿಯೇ ಉಳಿದುದಕ್ಕೆ, ಮಾನವನು ದೇವತ್ವವನ್ನು

ಹೊಂದಿದುದಕ್ಕೆ ಇದೇ ಮೊದಲ ದೃಷ್ಟಾಂತ—ಎಂದು ಬೆರಳುಮಾಡಿ ತೋರಿಸಿದರು, ಭಗವಾನ್ ಗುರುದೇವರು.

ಪಶ್ಯನ್ ಸರ್ವಾಣಿ ಭೂತಾನಿ ಸಂಸಾರಸ್ಥಾನಿ ಸರ್ವಶಃ |
ಸ್ಮಯಮಾನಃ ಪರಾನಂದೇ ಲೀನಾತ್ಮಾ ವರ್ತತೇ ಸುಧೀಃ || ೫೫ ||
(ಸಿ. ಶಿ. ಪರಿ-೧೫)

ಆವೊತ್ತಿನಿಂದ, ಪರಾನಂದ ಶಿವಪ್ರಭೆಯಲ್ಲಿ ತಲ್ಲೀನನಾಗಿರುತ್ತಿದ್ದರೂ, ಜಗತ್ ಸಂಸಾರದ ಎಲ್ಲ ಜೀವಿಗಳನ್ನೂ ಎಲ್ಲೆಲ್ಲೂ ಎಲ್ಲ ಬಗೆಯಿಂದಲೂ ವಿಲೋಕಿಸಿ, ಅವರ ಶುಭಾಶುಭ ದೃಷ್ಟಿಯನ್ನು ಪರೀಕ್ಷಿಸಿ ವಿಸ್ಮಿತನಾಗ ಹತ್ತಿದನು-ಶಿವಧರ್ಮಿಯು. ಅವನ ಜೀವಿತದ ಉದ್ದೇಶ—ಸಕಲರ ಉದ್ಧಾರವನ್ನು ಕುರಿತದ್ದು. ಕಾಯೇನ ವಾಚಾ ಮನಸಾ ಲೋಕಸಂಗ್ರಹ ಕಾರ್ಯವನ್ನೇ ಆದರಿಸಿ ನಿಂತುಬಿಟ್ಟ ಆತ್ಮಚೈತನ್ಯವಂತನಾದ ಅವನಿಗೆ ಸತ್ ಸಮಾಜಸೇವೆ ಹಾಗೂ ಸತ್ ಸಂಸ್ಕೃತಿ ಸಂರಕ್ಷಣೆಯ ಹೊಣೆ—ಹೆಗಲೆಣೆಯಾಯಿತು. ದೇವಶಿಲ್ಪಿಯ ಕೈಯ ನಂದಿಕೇಶ್ವರ ಮೂರ್ತಿಯಿದ್ದಂತೆ, ಅವನು ಕಡೆದು ನಿಲ್ಲಿಸಿದ ಮಠ-ಮಂದಿರಗಳ ಸೊಬಗು! ತನ್ನ ಚಿತ್ತಸ್ಫೂರ್ತಿಗೋಸುಗವೇ ಆಗಿರದೆ, ಹಿಂದುಳಿದವರ ಅಭಿವೃದ್ಧಿಗಾಗಿಯೂ ಆ ಸಮಸ್ತ ಏರ್ಪಾಡುಗಳು. ಎಲ್ಲವೂ ಪೂರ್ವಾಚಾರ್ಯರ ಆಜ್ಞೆಯವೇರೆಗೆ!

ಸ್ವಾರ್ಥ—ಪರಾರ್ಥ, ಇಹಲೋಕ—ಪರಲೋಕ, ದೇಹ—ಆತ್ಮ, ಈ ಉಭಯ ಸಂಯೋಗ ವಿಶೇಷವನ್ನು ಮಾನ್ಯ ಮಾಡಿದ ಶಿವಧರ್ಮಿಯು 'ವೀರಶೈವ' ನೆಂದೆನಿಸಿಕೊಂಡನು. ಶಿವಜೀವೈಕ್ಯಬೋಧಿನೀ ವಿದ್ಯಾಪರಿಣತನಾಗಿ, ಅದರ ಬೆಳಕೇ ತಾನಾದ ಅವನಿಗೆ—ಆ ಹೆಸರು ಶೋಭಾಯಮಾನ!

ವಿಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯಬೋಧಿಕಾ |
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತು ತೇ ಮತಾಃ || ೧೫ ||
ವೇದಾಂತಜನ್ಯಂ ಯದ್ ಜ್ಞಾನಂ ವಿದ್ಯೇತಿ ಪರಿಕೀರ್ತ್ಯತೇ |
ವಿದ್ಯಾಯಾಂ ರಮತೇ ಯಃ ಸ ವೀರ ಇತ್ಯಭಿಧೀಯತೇ || ೧೬ ||
ವಿದ್ಯಾಯಾಂ ಶಿವರೂಪಾಯಾಂ ರಮಂತೇ ಯೇ ವಿಶೇಷತಃ |
ತಸ್ಮಾದೇತೇ ಮಹಾಭಾಗಾ ವೀರಶೈವಾ ಇತಿ ಸ್ಮೃತಾಃ || ೧೭ ||
(ಸಿ)೫-೯೩ ೦..

ಪೂರ್ವೋಕ್ತ ಶಾಸ್ತ್ರೋಪದೇಶವೇ ಮೊದಲಾಗಿ, ಸೋಪಾನಕ್ರಮದಿಂದ ತನ್ನತನವನ್ನೂ ವಿಶ್ವಾತ್ಮಭಾವವನ್ನೂ ಬೆಳೆಸಿಕೊಂಡ ವೀರಶೈವ ಮಾರ್ಗ—ಸನ್ಮಾರ್ಗವೆನಿಸಿದೆ. ಆತ್ಮವಿಶ್ವಾಸಕ್ಕೆ ಸಂಬಂಧಿಸಿದಂತೆ, ಸಹ ಮಾರ್ಗದಲ್ಲೂ—ಸತ್ಪುತ್ರ ಮಾರ್ಗದಲ್ಲೂ—ದಾಸ (ಭಕ್ತ) ಮಾರ್ಗದಲ್ಲೂ ಅದು ಚರಿಸಿ ಗುರಿಮುಟ್ಟಿದೆ. ಈ ಮಾರ್ಗ ಚತುಷ್ಟಯದಲ್ಲಿ ಕಾಣಬರುವುದು ಸಾಧಕಮನದ ಪ್ರವೃತ್ತಿಯ ಹೊಂದಾಣಿಕೆಯ ಪರಿಣಾಮ ಗುಣವೇ ಹೊರತು, ಮೂಲದ ವ್ಯತಿರೇಕ ಚಿಹ್ನೆಯೇನೂ ಅಲ್ಲ. ದೈನಂದಿನ ಜೀವನ ವ್ಯವಹಾರದಲ್ಲಿ ಕ್ಷುಲ್ಲಕ ಹವ್ಯಾಸ ದೂರದೂರ ಸರಿದಂತೆಲ್ಲ—ಮನದ ದೃಢತೆ, ಹೊಸಶಕ್ತಿ—ಹೊಸ ಯುಕ್ತಿ ಕೂಡಿಬಂದು, ಅದೇ ಅಂತಃಶಕ್ತಿಯ ಸತ್ಪರಿಣಾಮವೆನಿಸಿಕೊಳ್ಳುತ್ತದೆ; ಅದೇ ಅಂತರಾತ್ಮನ ಪ್ರೇರಣೆಯೂ ಆಗುತ್ತದೆ. ಉಪಾಸಕ ದೃಷ್ಟಿಯಲ್ಲಿ ಅದೇ ಶಿವಾನುಗ್ರಹವು. ಉಕ್ತ ಚತುರ್ವಿಧಮಾರ್ಗಗಳಲ್ಲಿ, ಔಪಾಸನಾ—ಆಗಮೋಕ್ತ ಚರ್ಯಾಪದ್ಧತಿಯು ಸುಲಭವಾದುದು, ಸುಂದರವಾದುದು. ಅದರಿಂದ ಶಿವಾನುಗ್ರಹ ಪ್ರಾಪ್ತಿ ಖಚಿತ. ಕಾರ್ಯತಃ ನಿಜ.

ಪೃಥಿಕೃತ ಶಿವಸಿದ್ಧಾಂತ ಸೂತ್ರ ರೀತ್ಯಾ—ನಿರುಪಾಧಿಕ ಶಿವಸ್ವರೂಪದರಿವೇ ಪುರುಷಾರ್ಥವು. ಅದನ್ನರಿವ ಕ್ರಮ ಕ್ರಿಯೆಯೇ ಪೌರುಷೇಯವು. ಭಕ್ತಿಯು ಅದರ ಜನನೀಸ್ಥಾನ. ಅರಿತುದರಲ್ಲಿ ಕೂಡಿಕೊಳ್ಳುವುದೇ ಅಂತೇವಾಸವು. ಅಂತೇವಾಸಿಗಳೇ ಪರಮ ಮಾಹೇಶ್ವರರು, ಶಿವಗಣದವರು. ಅತ ಏವ, ಶಿವಧರ್ಮಾಭ್ಯಸನದಲ್ಲಿ ಭಕ್ತಿ, ಕ್ರಿಯೆ, ಜ್ಞಾನ, ಯೋಗ ಸಮ ಸಮುಚ್ಚಯಕ್ಕೆ ಗೌರವವಿದೆ. ವಿಶಾಲಭಾವನಾಪೂರಿತ ಸದಸತ್ ವಿವೇಕ ಜೀವನಕ್ಕೆ ಬಂಗಾರಕ್ಕಿಂತ ಮಿಗಿಲಾದ ಮೌಲ್ಯವಿದೆ.

ತಿಳಿವು ಮತ್ತು ಪರಿವರ್ತನೆಗಳ ನಡುವಿನ ಅಂತರದ ಅತಿ ಸೂಕ್ಷ್ಮ ವಿವೇಕವನ್ನು ಶಿವಕ್ರಿಯೆಯು ಸ್ಪಷ್ಟೀಕರಿಸುತ್ತದೆ. ಅದರ ನವಿರು ನವಿರಾದ ಭಾಗವನ್ನೆಲ್ಲ ಷಟ್‌ಸ್ಥಲ ವಿಜ್ಞಾನವು ಬಿಚ್ಚಿ ಬಿಚ್ಚಿ ತೋರಿಸುತ್ತದೆ. ಸಾಧಕ ಲೋಕವು ಅದನ್ನು ಬಹಳ ಎಚ್ಚರಿಕೆಯಿಂದ ಬಳಸಿಕೊಳ್ಳುತ್ತಾ ಇರಬೇಕು. ಹಾಗಾದಲ್ಲಿ ಮಾತ್ರ, ಉಪಾಸಕ ಜೀವದಲ್ಲಿ ಯಾವ ಕ್ಷಣದಿಂದ ಶಕ್ತಿಪಾತ ಪ್ರಾರಂಭವಾಗುತ್ತಾ ಹೋಗುವದೋ ಅವೊತ್ತಿನಿಂದ, ಪಶುತನ ಅರ್ಥಾತ್

ಮೃಗಜೀವನವು ಕ್ರಮಕ್ರಮವಾಗಿ ಬಯಲಾಗುತ್ತಾ ಬಂದು, ಕಡೆಗೆ ಪರಿಪಕ್ವತೆಯಲ್ಲಿ ಶಿವಯೋಗವು ನಿರುತ್ತರವೇ ಆಗಿ ಪರಿಣಮಿಸುವುದು; ಪಿಂಡಸ್ಥಲದಿಂದಾರಂಭವಾದ ಪರಿಚಿಂತನೆ, ಜ್ಞಾನಶೂನ್ಯ ಸ್ಥಲದಲ್ಲಿ ಮುಕ್ತಾಯವಾಗುವುದು.

ವಿನಯ, ಗಾಂಭೀರ್ಯ, ಶುಶ್ರೂಷೆ—ಮೊದಲಾದ ಯೋಗ್ಯ ನಡವಳಿಕೆಯಿಂದ ಗುರುಕೃಪೆಯನ್ನು ಶೇಖರಿಸಿಕೊಳ್ಳುತ್ತಾ ಶುದ್ಧಾಂತಃಕರಣನಾಗಿ, ಶಾಸ್ತ್ರೋಕ್ತ ಸತ್ಪ್ರಯತ್ನಗಳಲ್ಲಿ ಅನುರಕ್ತನಾಗಿ; ಅದಕ್ಕೆ ತಕ್ಕ ಚಟುವಟಿಕೆಗಳನ್ನು ಹುಟ್ಟುಹಾಕಿಕೊಂಡು, ಆಶಾ—ಆಕಾಂಕ್ಷಾರೂಪ ಘನಗಂಭೀರ ಪ್ರಪಂಚ ಸಾಗರವನ್ನು ಈಜಿ, ಶುಭದ ದಂಡೆಯನೇರಿದಾಗ—

ಎಂದರೆ, ಪಶುತನದಿಂದ ಪತಿತನದ ಮೇಲ್ಮಟ್ಟಕ್ಕೆ ಜೀವಾತ್ಮನು ಸಾವಧಾನದಿಂದ ಏರುತ್ತಾ, ಏರುತ್ತಾ ಹೋಗಿ, ಎಲ್ಲ ಪ್ರಶ್ನೆಗಳನ್ನೂ ಉತ್ತರಿಸಿ ಪರೀಕ್ಷೆಯಲ್ಲಿ ಉತ್ತೀರ್ಣನಾದಾಗ;

'ಮುಗಿದ ಕೈ, ಮುಚ್ಚಿದ ಕಣ್ಣು' ಈ ಪ್ರಕಾರದ ಭಕ್ತಿಭಾವದ ಸಂದರ್ಭದಲ್ಲಿ—

ಆ ಉಪಾಸಕ ಅಂತರಂಗ ಬಹಿರಂಗ ಇಂದ್ರಿಯಗಳು ಪರಿಶುದ್ಧವಾಗಿಬಿಟ್ಟವೆ; ಮಸ್ತಿಷ್ಕದ ಅಶುಭಗುಣ ತರಂಗಪಂಕ್ತಿ ತಲೆ ಕೊಡವಿಬಿಟ್ಟದೆ; ಸದಿಚ್ಛಾ ಗಂಗೆಯಿಂದ ತೊಳೆಯಲ್ಪಟ್ಟು ದೇಹ–ಮನ–ಪ್ರಾಣಗಳಲ್ಲಿನ ಮಲತ್ರಯ ಜಾರಿಹೋಗಿದೆ; ಬಾಳಿನ ಎಲ್ಲೆಡೆಯಲ್ಲೂ ಸ್ವಚ್ಛತೆ. ಸರ್ವೋಪಾಧಿ ವಿರಹಿತವಾದ ಆ ಆತ್ಮಸಾಮರ್ಥ್ಯದ ಎದುರಿಗೆ ಲಿಂಗಾಂಗ ವಿಲಯನ, ಮುಗಿದ ಪ್ರಶ್ನೆ!

ಸದ್ಗುರುವಿನ ಹಸ್ತಸ್ಪರ್ಶ ಪ್ರಭಾವದಿಂದ, ಮನದ ಪ್ರಫುಲ್ಲತೆಯಿಂದ, ತತ್ವಜ್ಞಾನ ದೃಷ್ಟಿಯಿಂದ ದೊರಕೊಂಡ ಶಿವಪ್ರಸಾದ ಬಲದಿಂದ–ಜೀವಾತ್ಮನು ಸರ್ವೋಪಾಧಿ ವಿರಹಿತನಾಗಿದ್ದಾನೆ ಎಂದರೆ, ಆ ಶುಭ ಸಂದರ್ಭವು ಅವನ ಅನಂತ ಜನ್ಮದ ಸುಸ್ಥಿತಿಯಿಂದ ಉದ್ಭವಿಸಿದುದು—ಉದ್ದೀಪಿತವಾದುದು ಎನ್ನಲಡ್ಡಿಯಿಲ್ಲ.

ಬಹು ಜನ್ಮಕೃತೈಃ ಪುಣ್ಯೈಃ ಪ್ರಕ್ಷೀಣೇ ಪಾಪಪಂಜರೇ
ಶುದ್ಧಾಂತಃಕರಣೋ ದೇಹೀ ಪಿಂಡಶಬ್ದೇನ ಗೀಯತೇ ॥ ೩೧ ॥
ಶಿವಶಕ್ತಿಸಮುತ್ಪನ್ನೇ ಪ್ರಪಂಚೇಽಸ್ಮಿನ್ ವಿಶಿಷ್ಯತೇ ।
ಪುಣ್ಯಾಧಿಕಃ ಕ್ಷೀಣಪಾಪಃ ಶುದ್ಧಾತ್ಮಾ ಪಿಂಡನಾಮಕಃ ॥ ೩೨ ॥
ಸ್ವಕರ್ಮ ಪರಿಪಾಕೇನ ಪ್ರಕ್ಷೀಣಮಲವಾಸನಃ ।
ಶಿವಪ್ರಸಾದಾಜ್ಜೀವೋಽಯಂ ಜಾಯತೇ ಶುದ್ಧಮಾನಸಃ ॥ ೪೯ ॥
ಶುದ್ಧಾಂತಃಕರಣೇ ಜೀವೇ ಶುದ್ಧಕರ್ಮವಿಪಾಕತಃ ।
ಜಾಯತೇ ಶಿವಕಾರುಣ್ಯಾತ್ ಪ್ರಸ್ಫುಟಾ ಭಕ್ತಿರೈಶ್ವರೀ ॥
ಜಂತುರಂತ್ಯಶರೀರೋಽಸೌ ಪಿಂಡಶಬ್ದಾಭಿಧೇಯಕಃ ॥ ೫೧ ॥

(ಸಿ.ಶಿ. ಪರಿ–೫.)

*    *    *    *

ಇನ್ನೂ ಅತಿಶಯವೆಂದರೆ—ಸಾಂಘಿಕ, ವೈಯಕ್ತಿಕ ಹಾಗೂ ಆತ್ಮಶಕ್ತಿ ಸಂಯುಕ್ತವಾದ ಪ್ರತಿಯೊಂದು ಸಮಾಜವೂ ತನ್ನ ತನವನ್ನು ಪ್ರಥಮತಃ ಉಳಿಸಿಕೊಳ್ಳಬೇಕು. ಆ ಗುರುತರ ಕಾರ್ಯವನ್ನು ಸಾಧಿಸುತ್ತಿದ್ದ ಹಾಗೆಯೇ, ವಿಶ್ವಬಾಂಧವ್ಯವನ್ನು ಗಳಿಸಲೂ ಎದೆಚಾಚಬೇಕು; ಸರ್ವ ಜೀವಿ ಹಿತಾಚರಣೆಗೆ ಅಣಿಯಾಗಬೇಕು; ಮಾನವೀಯತೆಗೆ ಮಂಕು ತರುತ್ತಿರುವ ಹಸಿವು, ದಾರಿದ್ರ್ಯ, ಅನಕ್ಷರತೆ, ಅವಿಶ್ವಾಸ, ಅನಾಚಾರ, ಅಪಾರ್ಥ ಕಲ್ಪನಾ ಪರಂಪರೆಗಳನ್ನು ಹತ್ತಾರು ಉಪಾಯಗಳಿಂದ ಹತ್ತಿಕ್ಕಿ ತುಳಿಯಬೇಕು. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂಬ ತ್ರಿವಿಧ ವಿಘ್ನಗಳ ಉಪಶಮನಕ್ಕಾಗಿ ಅನವರತ ಶ್ರಮಿಸಬೇಕು. ಗೆದ್ದು ನಿಶ್ಚಿಂತನಾಗಬೇಕು.

ಶರೀರ, ಮನಸ್ಸು ಮತ್ತು ಆತ್ಮಾನಾತ್ಮ ವಿವೇಕ ಒಂದುಗೂಡಿದರೇನೇ ಅಂತಹ ಕೃತಕೃತ್ಯತೆ ಸಾಧ್ಯ. ಪರಮೇಶ್ವರನ ಕೃಪೆ ಆಯತ್ತವಾದರೇನೇ ಅಂತಹ ಕರ್ತವ್ಯಗಳನ್ನು ನಿರ್ವಹಿಸಲು ಶಕ್ಯ. 'ಶಿವ ಏವ ಕೇವಲಃ' ಎಂಬ ಸದಭಿಮಾನ ಸ್ವಾಯತ್ತವಾದರೇನೇ ಆ ದಿವ್ಯಕೃಪೆಯ ಕುರುಹಿನ ಸುಸ್ಥಿರತೆ. ಆ ಎಲ್ಲ ಬಗೆಯ ಸುಯೋಗದಿಂದ ಸನ್ನಿಹಿತವಾದುದಾವುದೆಂದರೆ— ಅದು ವಿಶ್ವಪ್ರಜ್ಞೆ (Collective unconscious.)

ಅದೇ ಅಧಿಲೋಕವು; ಅದೇ ಅಧಿಜ್ಯೌತಿಷವು; ಅದೇ ಅಧಿವಿದ್ಯೆಯು; ಅದೇ ಅಧಿಪ್ರಜೆಯು; ಅದೇ ಅಧ್ಯಾತ್ಮವು ಎನ್ನುತ್ತಿದೆ ಶ್ರುತಿ ವಚನ. ಅದನ್ನು ಉಪಾಸಿಸುವುದರಿಂದಲೇ ಸತ್ಪ್ರೇರಣೆ—ಸಹಬಂಧುತ್ವ ಸೋದರತ್ವ ಸಹಜೀವನ ಸರ್ವಸ್ವ!

ಸಹ ನೌ ಯಶಃ। ಸಹ ನೌ ಬ್ರಹ್ಮವರ್ಚಸಮ್।
ಅಥಾತಃ ಸಗ್‌ಂ ಹಿತಾಯಾ ಉಪನಿಷದಂ
ವ್ಯಾಖ್ಯಾಸ್ಯಾಮಃ। ಪಂಚಸ್ವಧಿಕರಣೇಷು।
ಅಧಿಲೋಕಮಧಿಜ್ಯೌತಿಷಮಧಿವಿದ್ಯಮಧಿಪ್ರಜ-
ಮಧ್ಯಾತ್ಮಮ್।...............................

(ತೈ.ಉ. ೧-೩.)

ಸಾಧಕ ಜೀವನದಲ್ಲಿ, ಇಂಥ ಅಭ್ಯಾಸವೆಲ್ಲವೂ ಒಟ್ಟೊಟ್ಟಿಗೇ ನಡೆಯುತ್ತಿರಬೇಕು; ಇಹ—ಪರ ಶ್ರೇಯಸ್ಸು ಹಾಸುಹೊಕ್ಕಾಗಬೇಕು. ಜನ ಸೌಹಾರ್ದತೆ ಸ್ವಭಾವ ಜನ್ಯವಾಗಬೇಕು, ಅಂತರ್ವ್ಯಾಸಿತವಾಗಬೇಕು. ಲೋಕಾನುಭವದ ಆಸರೆಯಲ್ಲಿ ಶುಭ ಪರಿಣಾಮಕಾರಿ ಶಿವಾನುಭವವು ಅಭಿವರ್ಧಿಸಬೇಕು ಎಂಬ ತೀವ್ರ ಆಸ್ಥೆಯಿಂದ, ದೀಕ್ಷಾಸಮಯದಲ್ಲಿ ಶ್ರೀಗುರುವು ಶಿಷ್ಯನಿಗೆ ನೀಡುವ ಪ್ರೇಮದ ಅನುಶಾಸನೆ:

"ನಿನ್ನ ಮತ್ತು ನಿನಗೆ ಆಶ್ರಯವಿತ್ತ ಲೋಕದ ಕಲ್ಯಾಣದ ಸಲುವಾಗಿ, ಆತ್ಮೈಕತ್ವ ವಿಜ್ಞಾನವನ್ನು-ಸತ್ಯವನ್ನು ಯಾವಾಗಲೂ ಆಶ್ರಯಿಸು. ಮೂಲಭೂತ ಶಿಷ್ಟಾಚಾರಕ್ಕೆ ಕೊರತೆ ತಾರದಿರು. ಧರ್ಮಜ್ಞರು ಎತ್ತಿ ತೋರಿಸಿದ ನೀತಿ-ಕ್ರಿಯೆಗಳನ್ನು ಅನುಸರಿಸು. ಪ್ರಪಂಚ ಸೌಂದರ್ಯವನ್ನು ಮೆಚ್ಚು. ಎದುರುಬರುವ ಹೊಸಹೊಸ ಸಮಸ್ಯೆಗಳನ್ನು ಕುರಿತು ಚೆನ್ನಾಗಿ ವಿಚಾರಿಸು; ನಿರ್ದಿಷ್ಟ ಸ್ಥಿತಿ ಕಂಡುಬಂದರೆ, ಆಗ ಅದರೊಡನೆ ಹೊಂದಿಕೊ. ವ್ಯಷ್ಟಿ-ಸಮಷ್ಟಿ-ಚೈತನ್ಯ-ಯಾವುದನ್ನೂ ಹೀಂಕರಿಸಬೇಡ. ಅಲ್ಲೆಲ್ಲಾ ಒಳ್ಳೆಯ ಕಲೆಯಿದೆ–ಕೌಶಲ್ಯವಿದೆ.

ಪರಹಿತಕ್ಕಾಗಿ ಸ್ವಾರ್ಥವನ್ನು ತ್ಯಾಗಮಾಡು. ಸ್ವಯಂ ನಿಕೃಷ್ಟತಾ ಭಾವನೆಯನ್ನು (Inferiarity complex) ತಳೆಯಬೇಡ. ವ್ಯಕ್ತಿತ್ವದ ಪರಿಮಿತಿಯನ್ನು ದಾಟಿಹೋಗಬೇಡ. ಅಧರ್ಮವನ್ನು ನಿಗ್ರಹಿಸು.

ಸದ್ಧರ್ಮವನ್ನು ಅನುಗ್ರಹಿಸು. ಅಕೃತ್ಯಕ್ಕೆ ಕೈ ಹಾಕಬೇಡ. ಪೂರ್ವಾಚಾರ್ಯರ ಹಾಗೂ ಅಭಿಮಾನಿ ಹಿರಿಯರ ಉಪದೇಶವನ್ನು ನಿಷ್ಠೆಯಿಂದ ಮನನಮಾಡು. ನಡೆಸು ತೋರಿಸು.

ಆ ಅನಿರ್ವಾಚ್ಯ! ಸಮಗ್ರ ಸ್ಥಲ ಸಂವೇದನೆಗೆ ಅನುರೂಪನಾಗಿ ನಿಂತರೇನೇ, ಆ ತಾತ್ತ್ವಿಕ ಪ್ರತಿಭೆಗೆ ಜನ್ಮದಾತನಾಗಿ ಪಪ್ಪುವಿ–ಎಂದರೇನೇ, ಆಗ ನೀನು ಶಿವಧರ್ಮಕ್ಕೆ ಅಧಿಕಾರಿ—ಅಭಿಖುಣಿ ಆದರಲ್ಲಿ ಎಲ್ಲವೂ ಅಡಗಿದೆ.” ಇತ್ಯಾದಿ.

ಈ ಹೇಳಿಕೆಗೆ ಪೋಷಕವಾಗಬಲ್ಲ; ‘ತತ್’ ಸಮಾನಾರ್ಥಕ ಪರಂಪರಾಗತ ವಾಕ್ಯಪ್ರಮಾಣ :

೧. ಸತ್ಯಂ ವದ । ಧರ್ಮಂ ಚರ । ಸ್ವಾಧ್ಯಾಯಾನ್ಮಾ
ಪ್ರಮದಃ । ಆಚಾರ್ಯಾಯ ಪ್ರಿಯಂ ಧನಮಾ
ಹೃತ್ಯ ಪ್ರಜಾ ತಂತುಂ ಮಾ ವ್ಯವಚ್ಛೇತ್ಸೀಃ ॥

(ತೈ.ಉ. ೧-೧೧)

೨. ವರ್ಣಾಶ್ರಮಸದಾಚಾರಾಃ ಶಿವೇನ ಕಥಿತಾಃ ಪುರಾ ।
ಯೇ ತಾನುಲ್ಲಂಘ್ಯ ವರ್ತಂತೇ ಶಿವಸ್ಯಾಜ್ಞಾಪಲಾಪಿನಃ ॥
ರಾಜಾಜ್ಞಾಭಂಗಕೃನ್ನೄಣಾಂ ಯಥಾದಂಡೋ ಭವಿಷ್ಯತಿ ।
ಶಿವಾಜ್ಞಾಭಂಗಕೃನ್ನೄಣಾಂ ದಂಡೋ ಹಿ ನರಕಸ್ತಥಾ ॥

(ಶ.ಸಂ.ಅ. ೮೬.)

೩. ಪ್ರಾಣಿನೋ ಯಸ್ಯ ಕಸ್ಯಾಪಿ ಬಾಧಾಸ್ಯಾಕರಣಂ ಹಿ ಯತ್ ।
ಅಹಿಂಸಾಖ್ಯಮಿದಂ ಶೀಲಮಷ್ಟತ್ರಿಂಶಂ ಸಮೀರಿತಂ ॥ ೯೭ ॥

(ಚಂಪ್ರ–ಪರಿ ೯.)

೪. ಜ್ಞಾನಾಚಾರೇಣ ಯುಕ್ತೇನ ಪ್ರಸೀದತಿ ಮಹೇಶ್ವರಃ ।
ತಸ್ಮಾದಾಚಾರವಾನ್ ಜ್ಞಾನೀ ಭವೇದಾದೇಹಪಾತನಂ ॥ ೧೪ ॥
ನೈರಂತರ್ಯೇಣ ಸಂಪನ್ನೇ ಭಾವೇ ಧ್ಯಾತುಂ ಶಿವಂ ಪ್ರತಿ ।
ತದ್ಭಾವೋ ಜಾಯತೇ ಯದ್ವತ್ ಕೀಟೇ ಭ್ರಮರಚಿಂತನಾತ್ ॥ ೨೨ ॥

ಶಾಸ್ತ್ರಾಭ್ಯಾಸಾದಿಯತ್ನೇನ ಸದ್ಗುರೋರುಪದೇಶತಃ ।
ಜ್ಞಾನಮೇವ ಸಮಭ್ಯಸ್ಯೇತ್ ಕಿಮನ್ಯೇನ ಪ್ರಯೋಜನಮ್ ॥ ೨೯ ॥
(ಸಿ–ಶಿ–ಪರಿ ೧೬)

೫. ವೇದಾಂತಾರ್ಥವಿಚಾರೋಽಯಂ ಕಾರ್ಯಃ ಪಾಶನಿವೃತ್ತಯೇ ।
ವೇದಾಂತಾರ್ಥವಿಚಾರೋಽಪಿ ಶ್ರುತಿಭಿಃ ಶ್ರವಣಂ ಭವೇತ್ ॥
ಶ್ರುತಿಃ ಪಂಚಾಕ್ಷರೋ ಮಂತ್ರೋ ಮಂತ್ರಾರ್ಥಸ್ಯೈವ ಚಿಂತನಮ್ ।
ತಚ್ಚಿಂತನಾನುಕೂಲಾಸ್ತಾಃ ಶ್ರುತಯಃ ಸಕಲಾ ಅಪಿ ॥
ಶಾಸ್ತ್ರಾಣಿ ಸ್ಮೃತಯಶ್ಚೈವ ಪುರಾಣಾನಿ ದಶಾಷ್ಟ ಚ ॥
(ಕ್ರಿಯಾ. ಉ-೨೭. P. ii P. 156)

* * * *

ಊಹೆಗೆ ನಿಲುಕದಷ್ಟು ಅಲ್ಪತ್ವವುಳ್ಳ—ಹೀನಸುಳಿಯ—ಸಾಧಾರಣ ಮನುಷ್ಯನನ್ನು ಸರ್ವಜ್ಞನಾಗಲು ಪ್ರೇರಿಸಿದ, ಅದಕ್ಕಾಗಿ ಶುದ್ಧ ವಿದ್ಯಾಭ್ಯಾಸ ಕ್ರಮವನ್ನು ಅಣಿಗೊಳಿಸಿದ, ಅವನನ್ನು ಸಾಕ್ಷಾತ್ ಶಿವದರ್ಶನಕ್ಕೆ ಯೋಗ್ಯವಸ್ತುವನ್ನಾಗಿ ಮಾಡಿದ, ಅವನಿಗೆ ವಿಪುಲ ದೈವೀ ಭಾಗ್ಯವನ್ನು ನೀಡಿದ, ಆದ್ಯ ಪ್ರಸ್ಥಾನದ ಆ ಆವಶ್ಯಕ ಪ್ರಣಾಳಿಕೆಯಲ್ಲಿ—

ಪರಿಶುದ್ಧ ತ್ರಿಪುಂಡ್ರಧಾರಣ, ರುದ್ರಾಕ್ಷಧಾರಣ, ಶಿವಮಂತ್ರ ಜಪ, ಶಿವಪೂಜೆ, ಶಿವಪ್ರಸಾದ ಸೇವನ-- ಈ ಐದು ತೆರನಾದ ಮಹಾ ಪಾಶುಪತ ವ್ರತಾಚರಣೆಗೆ ಅತಿ ಪ್ರಾಮುಖ್ಯತೆ ಈಯಲಾಗಿದೆ. ಜೊತೆಗೆ ಪಾರಮಾರ್ಥಿಕ ಪ್ರಜ್ಞೆ (Consciousness ಕಾನ್‌ಸೆಸ್‌ನೆಸ್), ಜೈವಿಕ–ದೈವಿಕ ಏಕೋಭಾವ, — ಹೀಗೆ ಸಾರ್ಥಕ್ಯ ಜೀವನದತ್ತಲೂ ವಿಶೇಷ ಗಮನವಿತ್ತುದಾಗಿದೆ. ಪ್ರಸಿದ್ಧ ಸಂಗೀತಗಾರನು ಗೋಷ್ಠಿ ನಡೆಸಲು ತಕ್ಕ ವಿವಿಧ ವಾದ್ಯ ವೃಂದವನ್ನು ಜೊತೆ ಮಾಡಿಕೊಳ್ಳುವಂತೆ—ಇಲ್ಲಿ ಈ 'ಕೃತ್ಸ್ನಕರ್ಮಕೃತ್' ವ್ಯವಸ್ಥೆ ಮಾಡುವ ಮಾಟದೊಳಗೆ ತಾನಿಲ್ಲದಿರುವ--ನಿರ್ವಿಕಾರಿಯ, ನಿಜ ಗುಣಿಯ ವರ್ತನೆ—ಅದು.

ಪವಿತ್ರ ಧರ್ಮಾಚರಣೆ, ತತ್ಸಂಬಂಧ ಅನುಸಂಧಾನ, ಅನುಭಾವ, ಇವೆಲ್ಲ ತಾನೇ ತಾನಾಗಿ ಹದವಾಗಿ ಬೆಳೆದು ಬಂದರೇನೇ, ಆಗ ಸಾಧಕ

ಹೃದಯದಲ್ಲಿ ಲೋಕಕಲ್ಯಾಣದ ಅಪೇಕ್ಷೆ ಹುಟ್ಟುತ್ತದೆ; ಅಖಿಲ ಜೀವಾನುಕಂಪ, ಶಮದಮಾದಿ ಸದ್ಗುಣ ಪರಿಪಾಕ, 'ಸತ್ಯಂ-ಶಿವಂ-ಸುಂದರಂ' ಸುಂದರತಮ ನಿರ್ಭಾವ ಮೊಳೆತು ಫಲ ಬಿಡುತ್ತದೆ. ಮನಸ್ಸು ಶಾಂತಿಯ-ಮಾತೃಭೂಮಿಯಾಗುತ್ತದೆ. ಇಂಥ ಸುವ್ಯವಸ್ಥಿತ ಮಾನವೀಯತೆಯನ್ನು ಆಲಂಗಿಸಿ–ಆಮಳೈಕ್ಯ ಮಾಡಿಕೊಂಡ ಬಳಿಕ, ಪರಬ್ರಹ್ಮ ಸಾಕ್ಷಾತ್ಕಾರವು. (ಸರ್ವೋನ್ನತಿ) ಕರತಲ ಬಿಲ್ವವತ್ ಪ್ರತ್ಯಕ್ಷ–ನಿಷ್ಪನ್ನ.

ಭೂತಿ-ರುದ್ರಾಕ್ಷಸಂಯುಕ್ತೋ ಲಿಂಗಧಾರೀ ಸದಾ ಶುಚಿಃ ।
ಪಂಚಾಕ್ಷರಜಪೋದ್ಯೋಗೀ ಶಿವಭಕ್ತ ಇತಿ ಸ್ಮೃತಃ ॥೧॥
ಪ್ರಸಾದಪೂರ್ವಿಕಾ ಯೇಯಂ ಭಕ್ತಿರ್ಮುಕ್ತಿವಿಧಾಯಿನೀ ।
ನೈವ ಸಾ ಶಕ್ಯತೇ ಪ್ರಾಪ್ತುಂ ನ ರೇಣೈಕೇನ ಜನ್ಮನಾ ॥೧೨॥
ಅನೇಕಜನ್ಮಶುದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಂ ।
ವಿರಕ್ತಾನಾಂ ಪ್ರಬುದ್ಧಾನಾಂ ಪ್ರಸೀದತಿ ಮಹೇಶ್ವರಃ ॥೧೩॥
ಪ್ರಸನ್ನೇ ಸತಿ ಮುಕ್ತಃ ಸ್ಯಾನ್ಮುಕ್ತಃ ಶಿವಸಮೋಭವೇತ್ ।
(ಸಿ. ಶಿ. ಪರಿ–೯.

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾ ಕ್ಷಮಾ ।
ದಾನಂ ಪೂಜಾ ಜಪೋ ಧ್ಯಾನಮಿತಿ ಧರ್ಮಸ್ಯ ಸಂಗ್ರಹಃ ॥೫೯॥
ಶಿವೇನ ವಿಹಿತೋ ಯಸ್ಮಾದಾಗಮೈರ್ಧರ್ಮಸಂಗ್ರಹಃ ।
ತಸ್ಮಾತ್ತಮಾಚರನ್ ವಿದ್ವಾನ್ ತತ್ಪ್ರಸಾದಾಯ ಕಲ್ಪತೇ ॥೬೦॥
ಅಧರ್ಮಂ ನ ಸ್ಪೃಶೇತ್ ಕಿಂಚಿದ್ವಿಹಿತಂ ಧರ್ಮಮಾಚರೇತ್ ।
ತಂ ಚ ಕಾಮವಿನಿರ್ಮುಕ್ತಂ ತಮಪಿ ಜ್ಞಾನಪೂರ್ವಕಂ ॥೬೧॥
ಆತ್ಮವತ್ಸರ್ವಭೂತಾನಿ ಸಂಪಶ್ಯೇದ್ಯೋಗವಿತ್ತಮಃ ।
ಜಗದೇಕಾತ್ಮತಾಭಾವಾನ್ನಿಗ್ರಹಾದಿವಿರೋಧತಃ ॥೬೨॥
ಏಕ ಏವ ಶಿವಸ್ಸಾಕ್ಷಾಜ್ಜಗದೇತದಿತಿ ಸ್ಫುಟಂ ।
ಪಶ್ಯತಃ ಕಿಂ ನ ಜಾಯೇತ ಮಮಕಾರೋ ಹಿ ವಿಭ್ರಮಃ ॥೬೩॥
ಧರ್ಮ ಏವ ಸಮಸ್ತಾನಾಂ ಯತಃ ಸಂಸಿದ್ಧಿಕಾರಣಂ ।
ನಿಃಸ್ಪೃಹೋಽಪಿ ಮಹಾಯೋಗೀ ಧರ್ಮಮಾರ್ಗಂ ಹಿ ನ ತ್ಯಜೇತ್ ॥೬೪॥
(ಸಿ. ಶಿ. ಪರಿ–೧೬

ಶಮೋದಮಸ್ತಿತಿಕ್ಷೋಪರತಿಶ್ರದ್ಧಾಸಮಾಧಯಃ ।
ಷಡಂಗಾನಿ ಮಹಾದೇವಿ ವೀರಶೈವಸ್ಯ ಲಿಂಗಿನಃ ॥ ೧ ॥
ಯದ್ಯೇಕೇನಾಪಿ ಚೈತೇಷಾಂ ವಿಹೀನೋ ಹೀನ ಏವ ಸಃ ।
ಅಂಗಹೀನೋ ಭವೇದಂಗೀ ತೇನಾಂಗಂ ನಿಪತೇದ್ಭುವಿ ॥ ೨ ॥
ನ ಪುಷ್ಪಹರಣಾ ಯಾಸೋ ನ ಶದ್ಧಾ್ವರಾತ್ಮಪೀಡನಮ್ ।
ಭಾವನೈವ ಪರಂ ಕರ್ಮ ದಯೈಕಾ ವೀರಶೈವಿನಃ ॥ ೩ ॥
ದ್ವೈವಿಧ್ಯವ್ಯವಹಾರಸ್ಯ ಯದಾ ನಾಶಸ್ಸವಾ ಸನಮ್ ।
ಯದ್ವೈವಾಖಂಡವಿಜ್ಞಾನಂ ವೀರಶೈವಸ್ತಥಾ ಭವೇತ್ ॥ ೪ ॥
ಸಾಧುಷ್ವಪಿ ಚ ಪಾಪೇಷು ದುರ್ಜನೇ ಸುಜನೇಪಿ ಚ ।
ಸ್ವಮತೇ ವಿಮತೇ ಮೂರ್ಖೇ ಪರಾರ್ಥೇಚಾಪಕರ್ತರಿ ॥ ೫ ॥
ಸರ್ವತ್ರ ಭಾವಯೇದೇಕಃ ವೀರಶೈವಸ್ಸ ಉಚ್ಯತೇ ।
ತ್ರಿಕಾಲಂ ಭಸ್ಮನಾ ಸ್ನಾನಂ ಶಕ್ತಿತೋ ಲಿಂಗಪೂಜನಮ್ ॥ ೬ ॥
ಭೈಕ್ಷಂ ಚ ಶಿವಭಕ್ತೇಷು ವೀರಶೈವಸ್ಯ ಲಕ್ಷಣಮ್ ।
............... ಇತ್ಯಾದಿ ಶಿವಾಗಮೋದಾಹೃತ ಶ್ಲೋಕಾನಿ ॥

(ವೀ. ಧ. ಪುಟ–೮೮

ತ್ರಿಪುಂಡ್ರಮುದ್ಧೂಳನ ಮಾಸ್ತಿಕೋತ್ತಮಾಃ
ಸ ಚಾಚರೇಚ್ಛಂಕರವೇದನೇ ರತಃ ॥
ಶಿವಾದಿಶಬ್ದಂ ಚ ಜಪೇದ್ವಿಶೇಷತ-
ಸ್ಸಪೂಜಯೇದ್ಭಕ್ತಿಪುರಸ್ಸರಂ ಹರಮ್ ॥ ೪೮ ॥
ಸಾಧನೈಸ್ಸಕಲೈಸ್ಸಹಿತಸ್ಸುರಾಃ
ವೇದನೇನ ಸಮಸ್ತಮಿದಂ ಜಗತ್ ॥
ದೇವರೂಪತಯೈವ ಸುನಿಶ್ಚಿತಂ
ವೇದಹಸ್ತತಲಬಿಲ್ವವತ್ ಇತ್ಯಾದಿ. ॥ ೪೯ ॥

(ಬ್ರಹ್ಮಗೀತೆ. ಅ ೧೦.

ತದನುಗುಣ್ಯ ನಿತ್ಯ ನೈಮಿತ್ತಿಕ ಸತ್ಕಾಮ್ಯ ಭಕ್ತಿ ಬಲದಿಂದ ಜಡ ಜೀವನು ಅಮೃತಪುತ್ರನಾಗಬೇಕು. ಅವನ ಕರ್ಮಕ್ಷೇತ್ರ–ಧರ್ಮಕ್ಷೇತ್ರ

ಗಳಲ್ಲಿ ಅನ್ಯೋನ್ಯ ಸಮನ್ವಯವೇರ್ಪಡಬೇಕು. ನಿಷ್ಕ್ರಿಯ–ನಿರ್ವಿಕಾರ ಅವಸ್ಥೆಗೆ ತಲುಪಿದ್ದರೂ ಕರ್ಮಯೋಗದ ಪೂರ್ವಭೂಮಿಕೆಯತ್ತ ನಿರೀಕ್ಷಿಸುತ್ತಲೇ ಇರಬೇಕು; ಸ್ವಾರ್ಥತ್ಯಾಗಿಯಾಗಿ, ಮಮತೆಯನ್ನು ತೊರೆದು, ಕರ್ತವ್ಯಬುದ್ಧಿಯಿಂದ ನಿಯತ ಕರ್ಮಗಳನ್ನು ನಿರ್ವಹಿಸುತ್ತಿರಬೇಕು— ಆ ಶಿವಯೋಗಿ.

ಗಂಡಸು--ಹೆಂಗಸು, ಬಡವ--ಬಲ್ಲಿದ, ಸ್ವಮತ--ವಿಮತ, ಇಂಥ ಸಂಕುಚಿತ ಸನ್ನಿಪಾತಜ್ವರ ಅಂಟಬಾರದು; ಭಾಷಾಭೂತ ವಿತ್ತವಿಕಾರ ಕಾಡಬಾರದು; "ನನ್ನ ಅಭಿಮತವೇ ಸರ್ವಾಭಿಮತ" ಎನ್ನುವ ದುರ್ವಾದಕ್ಕೆ— ಕೂಪ ಮಂಡೂಕ ವೃತ್ತಿಗೆ ಅವಕಾಶವಿರಲೇಬಾರದು. ಅಲ್ಲಿ ಎಲ್ಲ ಗುಂಪಿನ, ಎಲ್ಲ ಆತ್ಮವರ್ಗದ ಜೀವನ ಸಮಸ್ಯೆಗಳನು ಅಲ್ಲಿರಬಹುದಾದ ಅಸ್ವಾಭಾವಿಕ ನಡೆ-ನುಡಿಗಳನ್ನು ತಿದ್ದಿ ಕ್ರಮಗೊಳಿಸಿ, ಆತ್ಮಾನಂದದ ಆಸ್ವಾದನೆಗಾಗಿ, ಅರ್ಥಾತ್ ವಿಶ್ವೈಕ್ಯ ಕರ್ತವ್ಯಕ್ಕಾಗಿ ಎಲ್ಲರನ್ನೂ ಸಿದ್ಧಗೊಳಿಸಬೇಕು. ಯಾವ ಪ್ರಕಾರದಲ್ಲೇ ಆದರೂ ಜನ ಜನರ ನಡುವೆ ತಿಕ್ಕಾಟ ಹುಟ್ಟದಂತೆ ಎಚ್ಚರಿಕೆ ವಹಿಸಬೇಕು. ಇದೆಲ್ಲವೂ ಶಿವಸಿದ್ಧಾಂತದ ಅಭೀಷ್ಟ—ಅನ್ವಯ.

ಅದರ ಉಗಮ, 'ಜಗತ್-ಜೀವ-ಈಶ್ವರ' ಪ್ರಮೇಯದಂತೆಯೇ ರಹಸ್ಯವಾದೀ, ನಿಶ್ಯಂಕ, ನ್ಯಾಯ ನಿಷ್ಠುರ, ನಿಗಮಾಗಮಾದಿ ಪ್ರಾಚೀನ ಪ್ರಮಾಣ ಸಮ್ಮತ; ಆದಿಗೆ ಆದಿ-ಅನಾದಿ. ಇವೊತ್ತಿನ ವೈಚಾರಿಕಯುಗವೂ ಮೂದಲಿಸಿ ನುಡಿಯುವಂತಿಲ್ಲ—ಆ ವಿಷಯದಲ್ಲಿ.

*　　　*　　　*　　　*

ಸಾಮಾನ್ಯ ಜನರು ಕೂಡ, ತಂತಮ್ಮ ಜೀವನವನ್ನು ನಿತ್ಯವಿನೂತನ ಪ್ರಪಂಚಕ್ಕೆ ಒಪ್ಪುವಂತೆ ಸುಲಭವಾಗಿ ಸರಲವಾಗಿ ಬೆಳಸಿಕೊಳ್ಳಲಿ; ಎಲ್ಲರೂ ಸುಧಾರಕರಾಗಲಿ, ಸೌಂದರ್ಯವಂತರಾಗಲಿ, ಅಜ್ಞಾನಾಂಧಕಾರದಲ್ಲಿ ಸಿಕ್ಕಿಕೊಳಲುತ್ತಾ, ನಾನಾವಿಧ ಕ್ಲೇಶಗಳಿಂದ ಬಳಲುತ್ತಾ ಇರುವ ಮಾನವನು— ಕಡೆಯ ಪಕ್ಷ, ಭಾಕ್ತಿಕ ಉಪಾಯವೊಂದನ್ನಾದರೂ ಮೈಗೂಡಿಸಿಕೊಂಡು ಪ್ರಕಾಶಮಾನವಾಗಲಿ; ಒಳ್ಳೆಯ ರಾಷ್ಟ್ರಿಕನಾಗಲಿ; ನೆರೆಯವರನ್ನು ತನ್ನಂತೆಯೇ ಆದರಿಸಿ–ಕೂಡಿಬಾಳಲಿ; ಲೋಕಕ್ಕೆ ಪೂರ್ಣ ನೆಮ್ಮದಿ ದೊರಕಲಿ—ಎನ್ನುವ ಸದಿಚ್ಛೆಯಿಂದ ಶಿವಧರ್ಮಸಿದ್ಧರು ತಮ್ಮ ಆ ನಿಲುವನ್ನು

ಮಂಡಿಸಿದರು. ಸಮರ್ಥಿಸಬೇಕಾದುದೆಲ್ಲವನ್ನೂ ಅನಂತಮುಖವಾಗಿ ಸ್ಪಷ್ಟವಾಗಿ ಸಮರ್ಥಿಸಿಯೂ ಸಮರ್ಥಿಸಿದರು.

ಆ ವ್ಯೋಮಸಂದೇಶವನ್ನು ಕೇಳಿ, ತರ್ಕಿಸಿ–ತಿಳಿದುಕೊಂಡು,—ಪಶುವೃತ್ತಿಯಿಂದ ಉಚ್ಚತಮ ದೇವವೃತ್ತಿಗೆ ಗಮಿಸಲಿಚ್ಛಿಸಿದ ಸಾಧಕನ ಅದೃಷ್ಟವೇನುಂಟೋ—ಅದುವೇ, ಕಾಲಕ್ರಮದಲ್ಲಿ ದೃಷ್ಟಾಂತ ಶಿವಧರ್ಮ ವಾಗಿಬಿಡುತ್ತದೆ. ಅವನು ಶಿವಾಂಶವೇ ಆಗಿ ಉಳಿಯುತ್ತಾನೆ. ಕತ್ತಿಯ ಮೊನೆಯಿಂದ ಸ್ಥಿರಗೊಳಿಸಲು ಸಾಧ್ಯವಾಗದ ಸಮಗ್ರ ವಿಶ್ವಶಾಂತಿಯನ್ನು ಪೂರ್ವಾಚಾರ್ಯರಿಂದ ಅಭಿಪ್ರೇತವಾದ ಶಿವಸಂಸ್ಕಾರವು—ಬಹುಸುಲಭ ವಾಗಿ ಅಧಿಕ ಶ್ರಮವಿಲ್ಲದಲೆ ಸ್ಥಿರಗೊಳಿಸಿಬಿಡುತ್ತದೆ—ಎನ್ನುವ ಸಂಗತಿ ಯನ್ನು ಸಂದರ್ಭಾನುಸಾರವಾಗಿ, ಈ ಮುಂದಿನ ಪ್ರಕರಣಗಳಿಂದ ಅರಿಯು ವಣ ; ಪುಣ್ಯವಂತರಾಗೋಣ ! ಸದ್ಯದ ಪ್ರಸ್ತಾವನೆ ಇಷ್ಟಕ್ಕೆ ಸಾಕು.

* * * *

## ೨

ಅದು ಎಷ್ಟೇ ಸಣ್ಣಗಿರಲಿ, ಎಷ್ಟೇ ಗಾತ್ರವಾಗಿರಲಿ—ಜಗತ್ತಿನ ಪ್ರತಿ ಯೊಂದು ಜಂತುವಿಗೂ ಅದರದರ ಉನ್ನತಿಯ ಚಿಂತೆ—ಬೆನ್ನು ಹತ್ತಿದ್ದು ಸುಪ್ರಸಿದ್ಧ. ಉದ್ದೇಶಸಾಧನೆಗಾಗಿ ಅವೆಲ್ಲ ನಡೆಸುತ್ತಿರುವ ಸರ್ವಸಾಹಸಕ್ಕೂ ಕಡಿಮೆಯಿಲ್ಲ. ಆ ಎಲ್ಲ ಚಿಂತೆ ಮತ್ತು ಸಾಹಸ—ಆಯಾಯ ಪ್ರಾಣಿಗಳ ನೆತ್ತಿಯ ಮಟ್ಟಕ್ಕೆ ಅನುಗುಣವಾಗಿದ್ದು, ಅದಕ್ಕೆಲ್ಲ ಮಿತಿಯುಂಟು—ಮೇರೆ ಯುಂಟು. ಆದರೆ, ಇದಕ್ಕೆ ಮೀರಿದ ವಿಶೇಷ ಸಮಾಚಾರ—ಮಾನವನ ಬುದ್ಧಿಯ ಪರಿಧಿಗೆ ಮಾತ್ರ ಮಿತಿಯಿಲ್ಲ, ಮೇರೆಯಿಲ್ಲವೆಂಬುದು.

ಅದೆಷ್ಟೆಷ್ಟೋ ತಲೆಮಾರಿನಿಂದಲೂ ಪರಿವರ್ತನಾಶೀಲನಾಗಿ ಬೆಳೆಯು ತ್ತಿದ್ದಾನೆ—ಮಾನವ. ತನ್ನ ಸುತ್ತಣ ಭೌತಿಕ ಬಲವನ್ನೆಲ್ಲ ವಸ್ತು ಸಮೂಹವನ್ನೆಲ್ಲ ತನ್ನದನ್ನಾಗಿ ಮಾಡಿಕೊಂಡಿದ್ದಾನೆ. ಅದೆಲ್ಲೆಲ್ಲೋ ಅವಿತು ಕೊಂಡಿದ್ದ ಪೆಟ್ರೋಲಿಯಂ, ರೇಡಿಯೋ ಶಕ್ತಿ, ವಿದ್ಯುಚ್ಛಕ್ತಿ, ಅಣುಶಕ್ತಿ,

ಕಾಸ್ಮಿಕ್ ಶಕ್ತಿ ಇವೆಲ್ಲವೂ ಅವನ ಕೈವಶ. ಯಂತ್ರಗಳೇ ಅವನ ಪರಿಚಾರಿಕರು—ವಂದಿಮಾಗಧರು. ಅಗಾಧವಾದ ಆತ್ಮಶಕ್ತಿಯು ಪರಿಶ್ರಮ, ಅವನನ್ನು ಆಕಾಶದಿಂದ ಇನ್ನೂ ಮೇಲೆ—ಎತ್ತರಕ್ಕೆ ಎತ್ತಿ ನಿಲ್ಲಿಸಿದೆ. ಮಾನವನು ಚತುರಾಸ್ಯನೆನಿಸಿಕೊಂಡುದು ಪುರುಷೋತ್ತಮನೆನಿಸಿಕೊಂಡುದು ಸುಮನಸನೆನಿಸಿಕೊಂಡುದು—ಆ ಒಂದು ಮಹಾಶಕ್ತಿಯ ಅನುಗ್ರಹದಿಂದಲೇ. ಅದನ್ನು ಚೆನ್ನಾಗಿ ಉಪಯೋಗಮಾಡಿಕೊಂಡು ಪೂರ್ಣಕಾಮರಾದವರಿಗೆ 'ಮುಮುಕ್ಷು' ಗಳೆಂದು ಸಂಜ್ಞೆ.

ಇಹಲೋಕದ ಸುಖದುಃಖ, ಹಿಗ್ಗು ಕುಗ್ಗು, ಪ್ರಿಯ ಅಪ್ರಿಯ, ಲೌಕಿಕ ಅಲೌಕಿಕ ವಸ್ತುಪರಿಜ್ಞಾನ—ಈ ಎಲ್ಲ ವಿಷಯಗಳ ಅಂತರ್ಯವನ್ನು ಪರೀಕ್ಷಿಸಿ ಒಂದು ಸರಿಯಾದ ಇತ್ಯರ್ಥಕ್ಕೆ ಬಂದಿದ್ದಾರೆ; ಚಿತ್ ಪ್ರಕೃತಿಗೂ ಅವ್ಯಯವಾದ ಮುಕ್ತವರ್ಗಕ್ಕೂ ಅಕ್ಷಯ ಫಲವುಳ್ಳ ನಿಷ್ಕಾಮ ಕರ್ಮಕ್ಕೂ ಮೋಕ್ಷಾನಂದಕ್ಕೂ ಮುಖ್ಯ ಆಧಾರವಾದ ಪರಮೇಶ್ವರ ಕೃಪೆಯೊಂದಿಲ್ಲದಿದ್ದರೆ, ಪರಬ್ರಹ್ಮದ ಅಖಂಡ ಅನುಭವವಾಗದೆ ಹೋದರೆ, ಮಾನವತ್ವ ಸಂಪೂರ್ಣವಾಗುವುದಿಲ್ಲವೆಂದು ನಿರ್ಣಯಿಸಿಬಿಟ್ಟಿದ್ದಾರೆ—ಅವರು.

ಸೌಜನ್ಯತೆಯನಾದರ, ಸದ್ಗುಣ ಸತ್ಕ್ರಿಯೆಗಳ ಪ್ರೋತ್ಸಾಹ, ಗುರುಭಜನೆ ಸುಕರ್ಮಪ್ರವೃತ್ತಿಗಳನ್ನು ಪ್ರೀತಿಸದ, ಸಮೀಚೀನ ನೀತಿ ನಿಯಮಗಳನ್ನೊಪ್ಪದ, ಶಾಸ್ತ್ರವಾಣಿಯ ನಂಬದ ಮಾನವನು ನಿಜವಾದ ಮಾನವನಲ್ಲ. ಅವನ ಭವಿಷ್ಯ ಭದ್ರವಾದುದಲ್ಲ; ಸ್ವಾತಂತ್ರ್ಯ ಸ್ಥಿರವಾದುದಲ್ಲ. ಆಧ್ಯಾತ್ಮಿಕ ವಿಚಾರಶೂನ್ಯವಾದ ಲೌಕಿಕ ಭೋಗಭಾಗ್ಯ ಶರೀರಾಲಂಕಾರಾದಿಗಳೆಲ್ಲ ಕ್ಷಣಿಕ, ಅನಾಗರಿಕ; ಪ್ರತಿಯಾಗಿ—ಸಕಲ ಬ್ರಹ್ಮಾಂಡವ್ಯಾಪ್ತ ಪರಮಾತ್ಮನ ದಯೆಯನ್ನು ಗಳಿಸಿದ, ಅಹಿಂಸಾ ಸತ್ಯ ಅಸ್ತೇಯಾದಿ ಮಹಾಧರ್ಮ ವಿಶಿಷ್ಟವಾದ ಜೀವನ—ಮಹಾಜೀವನ. ವ್ಯಕ್ತಿಜೀವನದಿಂದ ಹಿಡಿದು, ವಿಶಾಲ ವಿಶ್ವಜೀವನದವರೆಗೆ ಅದು ಸುಖ ಶಾಂತಿಗಳನ್ನೀಯಬಲ್ಲುದು ಎಂಬುದು ಅವರ ಸಮರ್ಥನೆ.

ಪರಮಾರ್ಥ ಜಿಜ್ಞಾಸೆ ಉದಿಸದೆ, ಕೇವಲ ಲೌಕಿಕ ಉಪಾಧಿ ವಿಶಿಷ್ಟನಾಗಿ ಎಲ್ಲಿಯವರೆವಿಗೆ ಉಳಿದಿರುವನೊ, ಆ ಅವಧಿಯ ಪರ್ಯಂತವೂ

ಜೀವನು ದುಃಖಿಯೇ ಆಗಿದ್ದಾನೆ. 'ನಾನು—ನೀನು', 'ಅವನು—ಅವಳು—ಅದು' ಹೀಗೆ ಭೇದಬುದ್ಧಿ ಇರುವತನಕ—ದುರ್ವ್ಯಸನ, ದುರ್ಮೋಹ, ಆಶಾಪಾಶ ಬಂಧನ, ಕಾಮಕ್ರೋಧ ವಿಕಾರವೆಲ್ಲ ಕಾಡುವುದೇ ನಿಜ. ಅಭೇದ ಬುದ್ಧಿ ಜನಿಸಿದ ಬಳಿಕ, ಅರ್ಥಾತ್ 'ವಿಶ್ವಾತ್ಮ ಜ್ಞಾನ ಬೋಧಾ' ಆದ ಮೇಲೆ ಇನ್ನೆಲ್ಲಿಯ ಶೋಕ; ಇನ್ನೆಲ್ಲಿಯ ಭಯ—ಅವನಿಗೆ ?

ಬ್ರಹ್ಮಣೋ ಹಿ ಪ್ರತಿಷ್ಠಾಽಹಮಮೃತಸ್ಯಾವ್ಯಯಸ್ಯ ಚ ।
ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥ ೨೭ ॥
(ಗೀ. ಅ. ೧೪

ನಿರ್ಮಲಂ ಹಿ ಶಿವಜ್ಞಾನಂ ನಿಃಶ್ರೇಯಸಕರಂ ಪರಂ ।
ರಾಗದ್ವೇಷಾದಿ ಕಲುಷಂ ಭೂಯಃ ಸಂಸೃತಿಕಾರಣಂ ॥ ೮೩ ॥
(ಸಿ. ಶಿ. ಪರಿ ೧೭

ಉಪಾಧಿರಹಿತಾ ಭೇದಾ ದೃಶ್ಯಂತೇ ಚೈಕ ವಸ್ತುನಿ ।
ಇತಿ ಯಸ್ಯ ಮತಿಃ ಸೋಽಯಂ ಕಥಂ ದೇಹವಿತೋ ಭವೇತ್ ॥ ೪೨ ॥
ಭೇದಬುದ್ಧಿಃ ಸಮಸ್ತಾನಾಂ ಪರಿಚ್ಛೇದಸ್ಯ ಕಾರಣಂ
ಅಭೇದಬುದ್ಧೌ ಜಾತಾಯಾಂ ಪರಿಚ್ಛೇದಸ್ಯ ಕಾ ಕಥಾ ॥ ೪೩ ॥
(ಸಿ. ಶಿ. ಪರಿ—೧೮

ಊರೊಳಗಣ ಬಯಲು, ಊರ ಹೊರಗಣ ಬಯಲು ಎಂದುಂಟೆ ? ಊರೊಳಗಣ ಬ್ರಾಹ್ಮಣನ ಬಯಲು, ಊರ ಹೊರಗಣ ಹೊಲೆಯನ ಬಯಲೆಂದುಂಟೆ ? ಎಲ್ಲಿ ನೋಡಿದೊಡೆ ಬಯಲೊಂದೇ. ಭಿತ್ತಿಯಿಂದೊಳ ಹೊರಗೆಂಬ ನಾಮವೈಸೆ; ಎಲ್ಲಿ ನೋಡಿ ಕರೆದರೆ 'ಓ' ಎಂಬಾತನೇ ಬಿಡಾಡಿ.

—ಬೊಂತಲದೇವಿಯ ವಚನ.

ಡಾ॥ ಪಿ. ಜಿ. ಹಳಕಟ್ಟಿಯವರ
ಶಿವಶರಣರ ಚರಿತ್ರೆಗಳು. ಭಾಗ 11

* * * *

ಇತಿಹಾಸಜ್ಞರ ಅಭಿಮತದಂತೆ ಕ್ರಿಸ್ತಪೂರ್ವ ಮೂರುಸಾವಿರ ವರುಷಗಳಿಂದ ಹಿಡಿದು ಇವೊತ್ತಿನ ವಿಮರ್ಶಾಯುಗದವರಿಗೂ ಆದ ವಿಶ್ವಾತ್ಮಸಂವೇದನಾಸಂಬಂಧವಾದ ವಿಜ್ಞಾನಸತ್ಯ (Scientific truth) ವೇನುಂಟೋ ಅದರ ವಿಷಯವಾಗಿ, ಮಾನವನ ಆಲೋಚನೆ ನಡೆ-ನುಡಿ ಬಹುಮುಖ. ಅವರವರಿಗೆ ಮೆಚ್ಚಿದ ಆಚಾರ-ವಿಚಾರ ಪರಿಪಾಠ!

ಭಾರತ ಎಂದಿನಿಂದಲೂ ಧಾರ್ಮಿಕರಾಷ್ಟ್ರ. ಸಾಂಖ್ಯ, ಯೋಗ, ಪಾಂಚರಾತ್ರ, ವೇದ, ಪಾಶುಪತ ಮೊದಲಾದ ಶಾಸ್ತ್ರಪರಂಪರೆಯು ಮೂಲತತ್ತ್ವವನ್ನು ಕುರಿತು ಗಾಢವಾಗಿ ವಿವೇಚನೆ ಮಾಡಿದೆ. ಇದರ ಸೆರಗು ಸೋಂಕಿದ ಇಸ್ಲಾಂ-ಕ್ರೈಸ್ತ-ಯಹೂದಿ ಹೃದಯವೂ ಆತ್ಮೋನ್ನತಿಗಾಗಿ ಮಿಡಿಯುತ್ತಿದೆ. ಪ್ರಾಯಿಕವಾಗಿ ಧರ್ಮ ಕುಂಟಿದಾಗ ಅದರ ಪುನರುತ್ಥಾನಕ್ಕಾಗಿ ದೇವಾಂಶವೇ ಅವತರಿಸುತ್ತದೆ—ಎಂದು ಎಲ್ಲರ ನಂಬಿಕೆ. ಎಲ್ಲರೂ ನಿರವಧಿಕ ಸುಖವನ್ನೇ ಉದ್ದೇಶಿಸಿದ್ದಾರೆ. ಅವರವರ ದಾರಿಯಲ್ಲಿ ಅವರವರು ತಜ್ಞರು. ವೀರಶೈವರು ಕೂಡ ಅವರ ಮಾರ್ಗದಲ್ಲಿ ಅವರು ನಿಷ್ಣಾತರು. ಅವರ ಮಾರ್ಗವು ಆದಿಯಲ್ಲಿ ಪರಮೇಶ್ವರನಿಂದಲೇ ಗುರುತಿಸಲ್ಪಟ್ಟಿತು. ಅದುವೇ ಶಿವಸಿದ್ಧಾಂತವು. ಮಾನವನ ಸರ್ವೋನ್ನತಿಗೆ, ಸಮಾಜವಾದದ ಭದ್ರತೆಗೆ, ಜಗತ್ತಿನ ಸರ್ವೋದಯಕ್ಕೆ—ಅದು ಪರಮಕಾರಣವಾದುದು ಎಂದು ಅವರು ತಿಳಿದಿದ್ದಾರೆ. ವೇದವೇದಾಂತ ಸಮಸ್ತಶಾಸ್ತ್ರಪಂಕ್ತಿ ಅದೇ ಮಾತನ್ನು ಪ್ರಸಿದ್ಧಪಡಿಸುತ್ತಿದೆ; ಅನುಭವ ಪ್ರಸಿದ್ಧ!

ಅಗಸ್ತ್ಯಬಹುಧಾಖ್ಯಾತಾಃ ಸಿದ್ಧಾಂತಾ ರುಚಿಭೇದತಃ ।
ಭಿನ್ನಾಚಾರಸಮಾಯುಕ್ತಾ ಭಿನ್ನಾರ್ಥಪ್ರತಿಪಾದಕಾಃ ॥ ೩ ॥
ಸಾಂಖ್ಯಂ ಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ ।
ಏತಾನಿ ಮಾನಭೂತಾನಿ ನ ಹಂತವ್ಯಾನಿ ಯುಕ್ತಿಭಿಃ ॥ ೪ ॥
ವೇದಸಿದ್ಧಾಂತಯೋರೈಕ್ಯಮೇಕಾರ್ಥಪ್ರತಿಪಾದನಾತ್ ।
ಪ್ರಾಮಾಣ್ಯಂ ಸದೃಶಂ ಜ್ಞೇಯಂ ಪಂಡಿತೈರೇತಯೋಃ ಸದಾ ॥ ೫ ॥
ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ ।
ನಿರ್ದಿಷ್ಟಮುತ್ತರೇ ಭಾಗೇ ವೀರಶೈವಮತಂ ಪರಂ ॥ ೧೪ ॥

(ಸಿ. ಶಿ. ಪರಿ—೫)

ಯ ಇದಂ ಶಿವಸಿದ್ಧಾಂತಂ ವೀರಶೈವಮತಾತ್ಮಕಂ ।
ಶೃಣೋತಿ ಶುದ್ಧಮನಸಾ ಸ ಯಾತಿ ಪರಮಾಂ ಗತಿಮ್ ॥ ೮೧ ॥

(ಸಿ. ಶಿ. ಪರಿ—೨೦)

ಶಿವಸಿದ್ಧಾಂತದ ಪ್ರಕಾರ ಆತ್ಮ-ಅಂತರಾತ್ಮ-ಪರಮಾತ್ಮ ಗೀತಾನುಭವವನ್ನು, ಅರ್ಥಾತ್ ತ್ರಿಕಾಲಾಬಾಧಿತ ಅಶೇಷ ತತ್ತ್ವಕೂಟದ ಉಪಲಂಬನಾ ಲಕ್ಷಣವನ್ನು—ಭಸ್ಮಧಾರಣಾ, ರುದ್ರಾಕ್ಷಧಾರಣಾ, ಶಿವಮಂತ್ರ ಜಪ, ಶಿವಲಿಂಗಾರ್ಚನಾ ಮತ್ತು ಶಿವಪ್ರಸಾದ ಸೇವನಾ—ಈ ಐದರ ಆಶ್ರಯದಿಂದ ಸ್ಪಷ್ಟಮಾಡಿಕೊಳ್ಳಬೇಕು. ಅವುಗಳ ಅವಲಂಬನದಿಂದಲೇ ಶೈವನಿಗೆ ನಿಶ್ಶೇಷ ಶಾಂತಿ-ನೆಮ್ಮದಿ-ಆನಂದ ಸಿಕ್ಕುತ್ತದೆ; ದಕ್ಕುತ್ತದೆ ಎಂದು
ಭೂತಿರುದ್ರಾಕ್ಷಸಂಯುಕ್ತೋ ಲಿಂಗಧಾರೀ ಸದಾ ಶುಚಿಃ ।
ಪಂಚಾಕ್ಷರಜಪೋದ್ಯೋಗೀ ಶಿವಭಕ್ತಃ ಇತಿ ಸ್ಮೃತಃ ॥ ೧ ॥
ಪ್ರಸಾದಪೂರ್ವಿಕಾ ಯೇಯಂ ಭಕ್ತಿರ್ಮುಕ್ತಿವಿಧಾಯಿನೀ ।

ಇತ್ಯಾದಿ ವಾಕ್ಯಗಳನ್ನು ಉದಾಹರಿಸಿ, ಈ ಪುಸ್ತಕದ ಮೊದಲನೆಯ ಘಟ್ಟವನ್ನು ಅಲಂಕರಿಸಿ—ಸತ್ಯವನ್ನು ಎತ್ತಿಹಿಡಿಯಲಾಗಿತ್ತಷ್ಟೆ. ಉದ್ದಿಷ್ಟ ಮತ ಸ್ಥಿರೀಕರಣಕ್ಕಾಗಿ—ಇದೀಗ ಆ ಐದು ಮಹಾದ್ರವ್ಯಗಳ ಹಿನ್ನೆಲೆ—ಮುನ್ನೆಲೆಯ ಸ್ಥೂಲ ಚಿತ್ರ ಹಾಗೂ ಅವುಗಳ ಉಪಯೋಗ ವಿವೇಕ. ಪ್ರಕೃತ ಈ ಎರಡನೆಯ ಪ್ರಕರಣದಲ್ಲಿ—ಭಸ್ಮದ ಮಾತುಕತೆ.

ಭಸ್ಮವು ಶಿವಾನುಗ್ರಹದ ಸ್ವಾಸ್ಥ್ಯ ಭೂಮಿಕೆಯಂತಿದೆ. ಅಗ್ನಿ, ಜ್ಯೋತಿ, ರುದ್ರ, ಶಿವ—ಇವೆಲ್ಲವೂ ಅದರ ವಾಸ್ತವ ಪ್ರತೀಕ. ಭೂಮಿಯ ಮೇಲೆ ಬೆಂಕಿಯ ರೂಪದಿಂದಲೂ, ವಾಯುಮಂಡಲದಲ್ಲಿ ವಿದ್ಯುದ್ರೂಪದಿಂದಲೂ, ಅಂತರಿಕ್ಷದಲ್ಲಿ ಆದಿತ್ಯ ರೂಪದಿಂದಲೂ, ದೇಹೇಂದ್ರಿಯ ವ್ಯವಸ್ಥೆಯಲ್ಲಿ ಪ್ರಾಣಾನಿಲ ಸ್ವಭಾವದಿಂದಲೂ ಇದ್ದುಕೊಂಡು ಜೀವಕುಲವನ್ನು ಕಾಪಾಡುವುದು ಅಗ್ನಿಯ ಕಾರ್ಯವು. ದೇವತೆಗಳಲ್ಲಿ ಅಗ್ರಸ್ಥಾನ—ಮಹಾದೇವತ್ವ ಅವನಿಗೆ ಮೀಸಲು.

ವೇದ ಪೂರ್ವಕಾಲದ ಭೃಗು, ಅಂಗಿರ ಮೊದಲಾದ ಅನೇಕ ಋಷಿಗಳು ಅವನನ್ನು ಸ್ತುತಿಸುತ್ತಿದ್ದರು. ತನಗೆ ಹವಿರ್ಭಾಗವನ್ನು ಕೊಟ್ಟವರಿಗೆ

ನಾನಾವಿಧದಿಂದ ಸೇವೆ ಸಲ್ಲಿಸಿದವರಿಗೆ—ಯಜ್ಞಫಲ ರೂಪವಾದ ಆಯುಸ್ಸು, ಐಶ್ವರ್ಯ ಇವೇ ಮುಂತಾದ ಪ್ರಾಪಂಚಿಕ ಸೌಖ್ಯವನ್ನು ಅವನು ದೊರಕಿಸಿ ಕೊಡುತ್ತಿದ್ದನು. ಯಜ್ಞಕಾಲದ ಹೋತೃವೇ ಅವನು. ಯಜ್ಞಶೇಷ ಭಸ್ಮವೂ ಅವನೇ.

ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ ।
ಹೋತಾರಂ ರತ್ನಧಾತಮಂ ॥ ೧ ॥

(ಋಕ್. ಸಂ. ೧—೧—೧)

ಜ್ಯೋತಿಸ್ವರೂಪನಾಗಿ ಇದ್ದಾಗ—ದ್ಯಾವಾಪೃಥಿವಿಗಳ ಹಾಗೂ ಉಪಾಸಕ ಮನಸ್ಸಿನ ಅಂಧಕಾರವನ್ನು ಹೋಗಲಾಡಿಸುತ್ತಲೂ, ಜಡ ಜೀವರನ್ನು ಆವರಿಸಿದ ಮಲ ಮಾಯಾವರಣರೂಪ ದುರಿತವನ್ನು–ಸ್ವೇದಾದಿ ಜನ್ಯ ಕಲ್ಮಷವನ್ನು ನಿವಾರಣೆಮಾಡುತ್ತಲೂ, ಆಶ್ರಿತರ ಅಭ್ಯುದಯದತ್ತ ವಿಶೇಷವಾಗಿ ಗಮನಿಸುತ್ತಲೂ, ಶತ್ರುಜಾಲವನ್ನು ಸದೆಬಡಿಯುತ್ತಲೂ ಆ ಮಹಾದೇವನು ಪ್ರಕಾಶಿಸುವನು.

ಜ್ಯೋತಿರ್ವೃಣೀತ ತಮಸೋ ವಿಜಾನನ್ನಾರೇಸ್ಯಾಮ ದುರಿತಾದಭೀಕೇ ।
ಇಮಾ ಗಿರಃ ಸೋಮಪಃ ವೃದ್ಧಜುಷಸ್ವೇಂದ್ರ ಪುರುತಮಸ್ಯ ಕಾರೋಃ ॥ ೨ ॥

(ಋಕ್. ಸಂ. ೩—೪—೩೯)

ಇದರಂತೆಯೇ ರುದ್ರಾಗ್ನಿ ಶಿವಾಗ್ನಿ ಪ್ರಸ್ತಾಪವು, ವೇದ ಆಗಮ ಪುರಾಣ ಉಪನಿಷತ್ ಶಾಸ್ತ್ರಗಳಲ್ಲಿ ಕಾಣಸಿಗುತ್ತದೆ.

ರುದ್ದುಃಖಂ ದುಃಖಹೇತುರ್ವಾ ತದ್ರಾವಯತಿ ಯಃ ಪ್ರಭುಃ ।
ರುದ್ರ ಇತ್ಯುಚ್ಯತೇ ತಸ್ಮಾಚ್ಛಿವಃ ಪರಮಕಾರಣಂ ॥ ೩೬ ॥

(ವಾ. ಸಂ. ಪೂರ್ವಭಾಗ, ಅಧ್ಯಾಯ ೩೨)

ಸಮಾ ಭವಂತಿ ಮೇ ಸರ್ವೇ ದಾನವಾಶ್ಚಾಮರಾಶ್ಚ ಯೇ ।
ಶಿವೋಽಸ್ಮಿ ಸರ್ವಭೂತಾನಾಂ ಶಿವತ್ವಂ ತೇ ನ ಮೇ ಸುರಾಃ॥ ಇತ್ಯಾದಯಃ।

(ಮಹಾಭಾರತ)

ದಯಾಮಯ ಪರಮೇಶ್ವರನು ಲೋಕಕಲ್ಯಾಣ ಕಾರ್ಯಕ್ಕಾಗಿ, ಭಕ್ತರನ್ನು ಕಾಪಾಡುವ ಸಲುವಾಗಿ ದುಷ್ಟ ಕಾಲ–ಕರ್ಮ–ಕಾಮರನ್ನು ಸುಟ್ಟಿರುಹಿದನೆಂಬುದು ಪುರಾಣಪ್ರಸಿದ್ಧವು. ಅದರ ಕುರುಹಾಗಿ ನಿಂದುದೇ 'ಭಸ್ಮ'ವು. ಭಸ್ಮವು ವಿರತಿಯ ಕುರುಹು.

ವಿಭೂತಿ, ಭಸಿತ, ಭಸ್ಮ, ಕ್ಷಾರ, ರಕ್ಷಾ—ಇವೈದೂ ಭಸ್ಮದ ಆನುಪೂರ್ವೀ ನಾಮಗಳು. ಕ್ರಿಯಾತ್ಮಕ ಧ್ವನಿ ಇಲ್ಲಿ ಅಪರೋಕ್ಷವಾಗಿ ಹುದುಗಿದೆ. ಸಾಧಕ ಜನಮನವನ್ನು ತಿದ್ದಿ ಶುಚಿಗೊಳಿಸಿ, ಸುಸಂಸ್ಕೃತ ಸಮಾಜವನ್ನು ನಿರ್ಮಿಸುವ ಅಗಾಧ ಕರ್ತವ್ಯ ಇದರದು.

ಭಕ್ತರಿಗೆ ಪರಮಾರ್ಥದ ಐಶ್ವರ್ಯವನ್ನು ಈಯುತ್ತಿರುವುದರಿಂದ, ಪರಮಾನಂದ ಪ್ರಜ್ಞೆಯನ್ನು ಹುಟ್ಟಿಸುತ್ತಿರುವುದರಿಂದ, ಲೌಕಿಕ ಅಷ್ಟವಿಧ ಸಂಪತ್ತಿಯನ್ನು ದೊರಕಿಸಿಕೊಡುತ್ತಿರುವುದರಿಂದ 'ವಿಭೂತಿ' ಎಂಬ; ಶಿವತತ್ತ್ವಪ್ರಕಾಶ ಹೇತುವಾಗಿ ಇರೋಣದರಿಂದ 'ಭಸಿತ'ವೆಂಬ; ಸಮಸ್ತ ಪಾಪಗಳನ್ನೂ, ಭೂತ ಪ್ರೇತ ಪಿಶಾಚ ಮಹಾರೋಗ ಭೀತಿಯನ್ನೂ ಧ್ವಂಸಮಾಡುತ್ತಿರೋಣದರಿಂದ 'ಭಸ್ಮ'ವೆಂಬ; ಬಗೆಬಗೆಯ ಆಪತ್ತು ವಿಪತ್ತುಗಳನ್ನು ಬಡಿದೋಡಿಸುವ ಶಕ್ತಿಯುಳ್ಳುವಾಗಿರೋಣದರಿಂದ 'ಕ್ಷಾರ'ವೆಂಬ; ಆಣವಾದಿ ಮಲತ್ರಯದ ಕಟ್ಟಿನಿಂದ, ಆಧ್ಯಾತ್ಮಿಕಾದಿ ತಾಪತ್ರಯ ಭಯದಿಂದ, ಅನಂತಾನಂತ ಅಶುದ್ಧೋಪಾಧಿ ಪರ್ಯಾಯದಿಂದ ಬಿಡಿಸಿ ಜೀವರನ್ನು ಸಂರಕ್ಷಿಸುತ್ತಿರೋಣದರಿಂದ 'ರಕ್ಷೆ' ಎಂಬ ಹೆಸರೂ ಇದಕ್ಕೆ ಅನ್ವಯವಾಗಿದೆ.

ವಿಭೂತಿರ್ಭಸಿತಂ ಭಸ್ಮ ಕ್ಷಾರಂ ರಕ್ಷೇತಿ ಭಸ್ಮನಃ ।
ಏತಾನಿ ಪಂಚನಾಮಾನಿ ಹೇತುಭಿಃ ಪಂಚಭಿರ್ಭೃಶಂ ॥ ೪ ॥

ವಿಭೂತಿರ್ಭೂತಿಹೇತುತ್ವಾದ್ಭಸಿತಂ ತತ್ತ್ವಭಾಸನಾತ್ ।
ಪಾಪಾನಾಂ ಭರ್ತ್ಸನಾದ್ಭಸ್ಮ ಕ್ಷಾರಣಾತ್ ಕ್ಷಾರಮಾಪದಾಂ ॥
ರಕ್ಷಣಾತ್ಸರ್ವಭೂತೇಭ್ಯೋ ರಕ್ಷೇತಿ ಪರಿಗೀಯತೇ ॥ ೫ ॥

(ಸಿ. ಶಿ. ಪರಿ ೭)

ಕಲ್ಪ, ಅನುಕಲ್ಪ, ಉಪಕಲ್ಪ, ಅಕಲ್ಪ—ವಿಧಾನದಿಂದ ಭಸ್ಮವನ್ನು ಸಂಪಾದಿಸಬಹುದು. ಅಥವಾ ನಂದೆ ಮೊದಲಾದ ಹೆಸರುಳ್ಳ ಗೋವುಗಳ ಸಗಣಿಯನ್ನು ಎಚ್ಚರಿಕೆಯಿಂದ ಸಂಗ್ರಹಿಸಿ, ಪಂಚಬ್ರಹ್ಮ ಮಂತ್ರೋಚ್ಚರಣ ಪೂರ್ವಕ ಶಿವಾಗ್ನಿಯಲ್ಲಿ ಸುಟ್ಟು ಭಸ್ಮವನ್ನು ಸಿದ್ಧಗೊಳಿಸಬಹುದು ಎಂದು ಶಿವಾಗಮಗಳಲ್ಲಿ ಹೇಳಿರುತ್ತದೆ. ಕೆಲವು ಮನೆತನದಲ್ಲಿ ಈ ರೂಢಿ ಇಂದಿಗೂ ಇದೆ.

ವೀರಶೈವರ ತತ್ತ್ವದೃಷ್ಟಿಯಲ್ಲಿ—ಭಸ್ಮಸಂಗ್ರಹಣ ಕಾರ್ಯವು, ಜೇನ್ನೊಣವು ಜೇನನ್ನು ಕೂಡಿಹಾಕುವಂತೆ, ಸಾಂಸ್ಕೃತಿಕ ಕ್ರಾಂತಿ ಕರ್ತವ್ಯ ನಿರೀಕ್ಷಣೆಯಿಂದ ಕೂಡಿದ್ದಾಗಿದೆ. ಉಪಾಸಕ ಹೃದಯಾಕಾಶದ ಪರಿಶುದ್ಧ ಚಿತ್ ಚೈತನ್ಯವೇ ಭಸ್ಮವೆಂಬ ಗ್ರಹಿಕೆ ಅಲ್ಲಿದೆ. ಅದೀಕ್ಷಿತರು ಸಾದಾ ಭಸ್ಮವನ್ನೂ, ದೀಕ್ಷಿತರು ಕ್ರಿಯಾಭಸ್ಮವನ್ನೂ, ಪ್ರಸಾದಿಕರು ಜ್ಞಾನಭಸ್ಮವನ್ನೂ ಧರಿಸಬೇಕೆಂಬುದು ಅವರ ನಿತ್ಯ ನಿಯಮ. ಈ ಪ್ರಾಚೀನ ಸಂಪತ್ತಿನ ಮೌಲ್ಯದ ಬಗೆಗೆ, ನಂಬಿಕೆ-ವಿಶ್ವಾಸ ಹರಿದಷ್ಟೂ ಅದರ ವಾಸ್ತವಿಕ ಮಹಿಮೆ ದೃಕ್ ಪ್ರತ್ಯಕ್ಷವಾಗುತ್ತದೆಂಬ ನಿಶ್ಚಯವನ್ನು ಪುರಾತನ ಶಿವಯೋಗಿಗಳ ಚರಿತ್ರೆಯು ನಮಗೆ ಉಂಟುಮಾಡಿಕೊಡುತ್ತದೆ. ಅನೂಚಾನವಾಗಿ ಸರ್ವಧರ್ಮಸಮನ್ವಯ ಸಿದ್ಧಾಂತವನ್ನು ಅವರು ಅನುಮೋದಿಸಿದ್ದಾರೆ. ಧರ್ಮದಿಂದಲೇ ವಿಶ್ವಕ್ಕೆ ಶಾಂತಿ ಎಂದು ಉದ್ಘೋಷಿಸಿದ್ದಾರೆ. ಭಸ್ಮಧಾರಣೆಯ ಪ್ರಭಾವದಿಂದ, ಮಾನವನ ಮನದ ದುರ್ಗುಣ ಭಸ್ಮವಾಗಿ ಹೋಗಿ, ಅಲ್ಲಿ ಸುಗುಣ-ಶಿವಗುಣವರ್ಧಿಸುವದೆಂಬ ಮಾತು ಔಚಿತ್ಯಪೂರ್ಣ!

ಪ್ರಾಯಃ ಸರ್ವಸುಖಾಸ್ಪದ ಶಾಂತವಿಜ್ಞಾನದ ಹಂಗು ತೊರೆದು, ಲೋಕದ ಅಣುಸಂಪತ್ತಿಗೆ ಆಸೆಪಟ್ಟು ಅಪಾರ ವ್ಯಸನಕ್ಕೆ ಒಳಗಾದ ಜೀವನಿಗೆ ಅತಿ ಮಹತ್ತ್ವದ ಪರಮೇಶ್ವರಸಂಬಂಧ ಸದ್ಭಾವವನ್ನು-ನಿರಾಳಪದವಿಯನ್ನು ಒದಗಿಸಿಕೊಡುವ ಉದ್ದೇಶದಿಂದ, ಹಾಗೂ ಸಾಧಕ ತನು-ಮನ-ಭಾವದೋಷ ಪರಿಹಾರಕ್ಕಾಗಿ; ಅನಂತರ—ಅತೀವ ಶುಭಶಿವಭಕ್ತಿಯ ಸಂಪ್ರಧಾರಣಾರ್ಥವಾಗಿಯೂ ಶಿವಧರ್ಮಶಾಸನ ಸಮ್ಮತವಾದ ವಿಭೂತಿಯನ್ನು ಪೂಜಿಸುವುದು, ಧರಿಸುವುದು, ಆನಂದಿಸುವುದು—ಕರ್ತವ್ಯವು.

ಸಮಸ್ತ ಭುಕ್ತಿ ಮುಕ್ತಿಪ್ರದಾಯಕ ಅಷ್ಟಾವರಣಗಳಲ್ಲಿ ಇದೊಂದು ಭವ್ಯ ಆವರಣ ; ದಿವ್ಯನಿಕೇತನ. ಮುಖ್ಯವಾಗಿ ಶೈವಸಂಸ್ಕೃತಿಯ ಶಕ್ತಿ-ವೈಶಿಷ್ಟ್ಯ ಈ ಮಂಗಲದ್ರವ್ಯದಲ್ಲಿ ಸಂಘಟಿತವಾಗಿದೆ ; ಶ್ರೀಮಂತವಾಗಿದೆ !

ವಾಸಿಷ್ಠಲೈಂಗೇ—

ಬಹುನೋಕ್ತೇನ ಕಿಂ ಭಸ್ಮಧಾರಣಂ ಮೋಹಸಾಧನಮ್ ।
ಭಸ್ಮನಾ ನಿತ್ಯಯುಕ್ತಸ್ಯ ಜ್ಞಾನಮುತ್ಪದ್ಯತೇಽಚಿರಾತ್ ॥
ಪಾತಕೀ ಪಾತಕಾನ್ಮುಕ್ತೋ ಭವಿಷ್ಯತಿ ನ ಸಂಶಯಃ ।
ಭಸ್ಮನಾ ಸದೃಶಂ ಬ್ರಹ್ಮ ನಾಸ್ತಿ ಲೋಕತ್ರಯೇಷ್ವಪಿ ॥
ರಕ್ಷಾರ್ಥಂ ಮಂಗಲಾರ್ಥಂ ಚ ಪವಿತ್ರಾರ್ಥಂ ಮಯಾ ಪುರಾ ।
ಭಸ್ಮಸೃಷ್ಟಂ ಮುನೇ ಶ್ರೌತಂ ದತ್ತಂ ದೇವ್ಯಾಃ ಪ್ರಿಯೇಣ ತು ॥

(ಕ್ರಿಯಾ. ಉ ಲ. ಭಾ. II, ಪು. ೮೩.)

ಬೃಹನ್ನಾರದೀಯೇ—

ಶಿವಪ್ರಿಯಾಃ ಶಿವಾಸಕ್ತಾಃ ಶಿವಪಾದಾರ್ಚನೇ ರತಾಃ ।
ತ್ರಿಪುಂಡ್ರಧಾರಿಣೋ ಯೇ ಚ ತೇ ವೈ ಭಾಗವತೋತ್ತಮಾಃ ॥ ಇತಿ,

ಕ್ರಿಯಾ. ಉ–ಲ. ಭಾ II, ಪು. ೧೦೫)

ಶಿವನ ಚಿತ್ಕಳೆಯೇ ಭಸಿತವೆಂದು ನಿಜಗುಣಶಿವಯೋಗಿ ಅನ್ನುತ್ತಾನೆ. ಭಸ್ಮಧಾರಣಮಾತ್ರದಿಂದ ಸಾಧಕನು ಸರ್ವಪಾತಕವಿಚ್ಛೇದಕನೂ ಸತ್ಯಕಾಮನೂ ಶಿವತೇಜಸ್ವಿಯೂ ಆಗುತ್ತಾನೆಂದು ಋಷಿಕುಲ-ಪ್ರಮಥಕುಲ-ಸಾಧುಕುಲ ನಂಬಿತು. ಶಿವಚೈತನ್ಯಸ್ಫುರಣಪ್ರಾಯವಾದ ಭಸ್ಮವನ್ನು ಒಲಿದು ಧರಿಸುವುದಾದರೆ ಸ್ವರ್ಗಾಪವರ್ಗ ಪ್ರಮೋದ ಲಭ್ಯವಾಗುತ್ತದೆಂದು ಅವರು ಒಪ್ಪಿದರು.

ಸ ಏಷ ಭಸ್ಮಜ್ಯೋತಿಃ ।

(ಭಸ್ಮಜಾಬಾಲೋಪನಿಷತ್.)

ಭಸ್ಮಧಾರಣಸಂಯುಕ್ತಃ ಪವಿತ್ರೋ ನಿಯತಾಶಯಃ ।
ಶಿವಾಭಿಧಾನಂ ಯತ್ಪ್ರೋಕ್ತಂ ಭಾಸನಾದ್ಭಸಿತಂ ತಥಾ ॥ ೧ ॥

ಮಹಾಭಸ್ಮೇತಿ ಸಂಚಿಂತ್ಯಂ ಮಹಾದೇವಂ ಪ್ರಭಾಮಯಮ್ ।
ವರ್ತಂತೇ ಯೇ ಮಹಾಭಾಗಾ ಮುಖ್ಯಾಸ್ತೇ ಭಸ್ಮಧಾರಿಣಃ ॥ ೨ ॥

(ಸಿ.ಶಿ. ಪರಿ—೭)

ಅನಾದಿ ಪರಶಿವನಲ್ಲಿ ಅಂತರ್ಗತವಾಗಿರ್ದ ಮಹಾಪ್ರಕಾಶವೇ ಚಿತ್ ಎನಿಸಿತ್ತು. ಆ ಚಿತ್ತೇ ಚಿದಂಗದಲ್ಲಿ ತೋರಿದ ಚಿದ್ವಿಭೂತಿಯನೊಲಿದು ಧರಿಸಿದ ಶರಣ ಜ್ಯೋತಿರ್ಲಿಂಗವಹುದು ತಪ್ಪದುಕಾಣಾ, ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ. (ಉರಿಲಿಂಗಪೆದ್ದಿ.

ಮುನ್ನ ಮಾಡಿದ ಪಾಪವೆಂತು ಹೋಹುದೆಂದು ಚಿಂತಿಸಬೇಡ.
ಕಹಿಸೋರೆಯಕಾಯತಂದು ವಿಭೂತಿಯ ತುಂಬಿದರೆ
ಸಿಹಿಯಾಗದೆ ಮೂರು ದಿವಸಕ್ಕಯ್ಯ! ಹಲವು ಕಾಲ ಕೊಂದ
ಸೊನೆಗಾರನ ಕೈಕತ್ತಿಯಾದರೇನು ? ಪರುಷ ಮುಟ್ಟಲಿಕ್ಕೆ
ಹೊನ್ನಾಗದೆ ಮರುಕ್ಷಣವೆ ಅಯ್ಯಾ! ಎನ್ನ ಲಲಾಟದಲ್ಲಿ
ಶ್ರೀ ವಿಭೂತಿಯು ಬರೆಯಲ್ಕೆ ಪಾಪ ಪಲ್ಲಟವಾಗದೆ
ಕೂಡಲಸಂಗಮದೇವಾ ! (ಬಸವಣ್ಣ)

* * * *

ಪರತತ್ತ್ವದ ಅನುಭವಕ್ಕೆ ಭಸ್ಮೋಪಾಸನೆ ಅತ್ಯಂತ ಸಹಕಾರಿ. ಅದರ ಅಂಗವಾಗಿ—ಭಸ್ಮಸ್ನಾನ, ಭಸ್ಮೋದ್ಧೂಳನ ಮತ್ತು ತ್ರಿಪುಂಡ್ರ ಧಾರಣಾ ಕ್ರಿಯೆಗಳನ್ನು ಶಿವಜ್ಞಾನಿಯು ಸದಾ ಆಚರಣೆಯಲ್ಲಿ ತಂದುಕೊಂಡನು. ತತ್ ಕರ್ತವ್ಯದಲ್ಲಿ ಆಸ್ಥೆ ಬೆಳೆಸಿಕೊಂಡಂತೆಲ್ಲಾ ಜೀವನ ಮೌಲ್ಯಗಳ ನೆನಪು ಸುಲಭವಾಗಿ, ಸರಲವಾಗಿ ಆಯಿತು ; ದೈವಿಕ ಮಹಾ ಶಕ್ತಿ ಉದ್ಬೋಧವಾಯಿತು.

ಪವಿತ್ರವಾದ ಭಸ್ಮಧಾರಣಾ ಪ್ರಭಾವದಿಂದ ತನು, ಮನ, ಭಾವ— ಈ ಮೂರೂ ಶಿವಕಾರುಣ್ಯಕ್ಕೆ ಯೋಗ್ಯವಾಗುತ್ತವೆ. ನಿಜ ತತ್ತ್ವದ ಅರಿವು ಸಮನಿಸುತ್ತದೆ. ದುಷ್ಟ ರೀತಿಯ ಸ್ವಾಭಿಮಾನ, ಸ್ವಪ್ರತಿಷ್ಠೆ, ವಿಷಯಾಸಕ್ತಿ—ಇವೆಲ್ಲವೂ ಮರೆತುಹೋದ ಶುಭ-ಶುಭ್ರ, ತನ್ಮಯಸ್ಥಿತಿ, ಅದು. ಪ್ರಾಕೃತ ಕಾಲ-ಕರ್ಮ-ಮಾಯಾವಿಪಾಕದ ದುರ್ದೆಸೆಯ ಪೊರ್ದದ, ಚಿದ್ಭಸ್ಮ ಪರಿಪಾಕದ ಸಮ್ಯಕ್ ದೃಷ್ಟಾಂತವು ಅದು.

ಉದ್ಧೂಲನಂ ತತಶ್ಚೈವಮವಕುಂಠನಮೇವ ಚ |
ತ್ರಿಪುಂಡ್ರಂ ಚೇತಿ ವಿಖ್ಯಾತಂ ತ್ರಿವಿಧಂ ಭಸ್ಮಧಾರಣಮ್ || ೪೦ ||
ಭಸ್ಮಜ್ಯೋತಿಸ್ಸಮಾಮ್ನಾತಮವಶ್ಯಂ ತಸ್ಯಧಾರಣಾತ್ |
ಸಂಸಾರಸಾಗರಂ ತೀರ್ತ್ವಾ ಕೈವಲ್ಯಫಲಮಶ್ನುತೇ || ೬೪ ||

(ಚಂದ್ರ. ಉ, ಕ್ರಿಯಾಪಾದ-ಪಟಲ ೬.)

ರಕ್ಷಣಾರ್ಥಂ ಮಂಗಲಾರ್ಥಂ ಚ ಶುದ್ಧ್ಯರ್ಥಂ ಚಾಪಿ ಭಾಮಿನಿ |
ಭೂಷಾರ್ಥಂ ಸರ್ವಲೋಕಾನಾಂ ಭಸ್ಮದತ್ತಂ ಮಯಾ ಪುರಾ ||

(ವೀ.ಪ್ರ. ಅಧ್ಯಾಯ ೧೭.)

ಒಮ್ಮೆ ಜನಕ ಮಹಾರಾಜನು ಯಾಜ್ಞವಲ್ಕ್ಯ ಮುನಿಯ ಆಶ್ರಮಕ್ಕೆ ಹೋಗುತ್ತಾನೆ. ಕುಶಲಪ್ರಶ್ನಾನಂತರ, ಜನಕನು—"ಎಲೈ ಮಹಾತ್ಮನೇ! ಭಸ್ಮಸ್ನಾನದಿಂದ ಲಭಿಸುವ ಪ್ರಯೋಜನವಾವುದು?" ಎಂದು ಕೇಳಲು; ಯಾಜ್ಞವಲ್ಕ್ಯನು—"ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ, ಅಥವಾ ಯಾರಾದರೂ ಸರಿಯೆ; ಭಸ್ಮದ ಧೂಳನ್ನು ಶರೀರದ ಮೇಲೆ ಪ್ರೋಕ್ಷಣಮಾಡಿಕೊಳ್ಳುವುದಾದರೆ, ಆತನ ದೇಹದಲ್ಲಿ ಎಷ್ಟು ಕೋಟಿ ರೋಮಕೂಪಗಳುಂಟೋ ಅವೆಲ್ಲವೂ ಶಿವಲಿಂಗಗಳಾಗುತ್ತವೆ" ಎಂದು ಸಮಾಧಾನ ಹೇಳುತ್ತಾನೆ.

ಜನಕೋ ಹ ವೈದೇಹಃ | ಸ ಹೋವಾಚ |
ಯಾಜ್ಞವಲ್ಕ್ಯಂ ಭಸ್ಮಸ್ನಾನೇನ ಕಿಂ ಜಾಯತ ? ಇತಿ ||
ಯಸ್ಯ ಕಸ್ಯಚಿಚ್ಛರೀರೇ ಯಾವಂತೋ ರೋಮ-
ಕೂಪಸ್ತಾವಂತಿ ಲಿಂಗಾನಿ ಭೂತ್ವಾ ತಿಷ್ಠಂತಿ ಇತಿ ||
ಬ್ರಾಹ್ಮಣೋ ವಾ ಕ್ಷತ್ರಿಯೋ ವಾ ವೈಶ್ಯೋ ವಾ
ಶೂದ್ರೋ ವಾ ಇತಿ ||

(ಬೃ.ಜಾ.ಉ.)

ಈಶಾನಾದಿ ಪಂಚಬ್ರಹ್ಮ ಮಂತ್ರವನ್ನು ಪಠಿಸುತ್ತಾ ಶಿರಸ್ಸು, ಮುಖ, ಹೃದಯ, ಗುಹ್ಯ, ಪಾದ—ಈ ಜಾಗಗಳಲ್ಲೂ; ಮಹಾ ಪ್ರಣವೋಚ್ಚಾರಪೂರ್ವಕ ಮಸ್ತಕಾದಿ ಪಾದಪರ್ಯಂತ ಎಲ್ಲ ಅಂಗಗಳಲ್ಲೂ ಭಸ್ಮಧೂಳಿ

ಯನ್ನು ಉದುರಿಸಿಕೊಳ್ಳುವುದೇ ಭಸ್ಮಸ್ನಾನದ ಕ್ರಮವು. ಇದನ್ನು ಆಗ್ನೇಯ ಸ್ನಾನವೆಂದೂ ಕರೆಯುವರು. ಜಲಾದಿ ಸ್ನಾನಗಳಿಗಿಂತ ಇದು ಮಹಿಮಾನ್ವಿತವಾದುದು. ಮಲತ್ರಯ ನಿವಾರಣೆಗೆ ಇದು ಒಳ್ಳೆಯ ಔಷಧ.

ಶಿರ ಈಶಾನಮಂತ್ರೇಣ ಪುರುಷೇಣ ಮುಖಂ ತಥಾ ॥ ೨೦ ॥
ಹೃತ್ಪ್ರದೇಶಮಘೋರೇಣ ವಾಮದೇವೇನ ಗುಹ್ಯಕಮ್ ।
ಪಾದೌ ಸದ್ಯೇನ ಸರ್ವಾಂಗಂ ಪ್ರಣವೇನೈವ ಸೇಚಯೇತ್ ॥ ೨೧ ॥
ಭಸ್ಮನಾ ವಿಹಿತಂ ಸ್ನಾನಮಿದಮಾಗ್ನೇಯಮುತ್ತಮಮ್ ।
ಸ್ನಾನೇಷು ವರುಣಾದ್ಯೇಷು ಮುಖ್ಯಮೇತನ್ಮಲಾಪಹಮ್ ॥ ೨೨ ॥

(ಸಿ. ಶಿ. ಪರಿ—೭)

ಸರ್ವತೀರ್ಥೇಷು ಯತ್ಪುಣ್ಯಂ ಸರ್ವಯಜ್ಞೇಷು ಯತ್ಫಲಮ್ ।
ತತ್ಫಲಂ ಕೋಟಿಗುಣಿತಂ ಭಸ್ಮಸ್ನಾನಂ ನ ಸಂಶಯಃ ॥

(ಅನಾದಿ, ಪುಟ ೪೯)

* * * *

ಭಸ್ಮಸ್ನಾನಾನಂತರ, ಶಾಸ್ತ್ರದಲ್ಲಿ ಭಸ್ಮೋದ್ಧೂಳನ ವಿಧಿಯು ಬರುತ್ತದೆ. ಪದ್ಮಪುರಾಣದ ಒಂದು ಪ್ರಕರಣ :

"ಶಿವಭಕ್ತಿಯು ಹೇಗೆ ಜನಿಸುತ್ತದೆ? ಅದರ ಸ್ವರೂಪವೇನು? ಅದನ್ನು ಪಡೆಯುವ ಉಪಾಯ ಯಾವುದು? ಅದನ್ನು ಉಪದೇಶಿಸು" ಎಂದು ಶ್ರೀರಾಮಚಂದ್ರನು ಬೇಡಿಕೊಳ್ಳಲು ;

"ಯಾರು ವೇದಾಧ್ಯಯನ ಪ್ರಿಯರೋ, ಯಾರು ಸಕಲ ಕರ್ಮಗಳನ್ನೂ ನನಗೆ ಸಮರ್ಪಿಸುವರೋ ಅವರೇ ನನ್ನ ಭಕ್ತರು. ಅವರಾದರೂ ಗಾರ್ಹಪತ್ಯ ಭಸ್ಮವನ್ನು 'ಅಗ್ನಿರಿತಿ ಭಸ್ಮ' ಮುಂತಾದ ಮಂತ್ರದಿಂದ ಯಥಾವಿಧಿ ಅಭಿಮಂತ್ರಿಸಿ ಮೈಮೇಲೆ ಲೇಪಿಸಿಕೊಳ್ಳಬೇಕು. ಅನಂತರ ಆ ಭಸ್ಮದಿಂದಲೇ ನನ್ನನ್ನು ಅರ್ಚಿಸಬೇಕು. ಪೂರ್ವೋಕ್ತ ವಿವಿಧ ಭಕ್ತಿಮಾರ್ಗಕ್ಕಿಂತ ಈ ಭಸ್ಮೋದ್ಧೂಳನ ಉಪಾಯವು ಅತ್ಯಂತ ಶ್ರೇಷ್ಠವಾದುದು. ಇದು ಉತ್ತಮೋತ್ತಮ ಭಕ್ತಿಯನ್ನು ಹುಟ್ಟಿಸುವಂತಹುದೂ ಆಗಿದೆ."

"ತ್ರೇತಾಗ್ನಿ, ಶ್ರೌತಾಗ್ನಿ, ಸ್ಮಾರ್ತಾಗ್ನಿ, ಶೈವಾಗ್ನಿ, ವಿರಜಾಗ್ನಿ ಇವುಗಳಲ್ಲೊಂದರಿಂದ ಪಡೆಯಲ್ಪಟ್ಟ ಭಸ್ಮವನ್ನು ಪ್ರಣವದಿಂದ ಅಭಿಮಂತ್ರಿಸಿ ಅದನ್ನು ಲೇಪಿಸಿಕೊಂಡು, ಆದರಿಂದಲೇ ನನ್ನನ್ನು ಪೂಜಿಸುವವನು ನನ್ನ ಶ್ರೇಷ್ಠ ಭಕ್ತನೆನಿಸುವನು. ಅಡಿಗೆಯ ಒಲೆಯ ಭಸ್ಮ, ಅಥವ ಕಾಡುಕಿಚ್ಚಿನಿಂದಾದ ಭಸ್ಮವನ್ನು ತಂದು ಅಭಿಮಂತ್ರಿಸಿ, ತನ್ನ ದೇಹಕ್ಕೆ ಲೇಪಮಾಡಿಕೊಂಡ ಶೂದ್ರನಿಗು ಸಹ ಮುಕ್ತಿ ದೊರೆಯುತ್ತದೆ" ಎಂದು ಮಹಾದೇವನು ನಿರೂಪಿಸುವನು.

ಭಕ್ತಿಸ್ತ್ರೇ ಕೀದೃಶೀ ದೇವ ! ಜಾಯತೇ ವಾ ಕಥಂ ಚ ಸಾ |
ಯಯಾ ನಿರ್ವಾಣರೂಪತ್ವಂ ಲಭತೇ ಮೋಕ್ಷಮುತ್ತಮಮ್ ||
ತದ್ ಬ್ರೂಹಿ ಗಿರಿಜಾಕಾಂತ ! ಪ್ರಾಪ್ಯತೇ ಯೇನ ನಿರ್ವೃತಿಃ || ೧ ||

ಯೋ ವೇದಾಧ್ಯಯನಂ ಯಜ್ಞಂ ದಾನಾನಿ ವಿವಿಧಾನಿ ಚ |
ಮದರ್ಪಣಧಿಯಾ ಕುರ್ಯಾತ್ಸ ಮೇ ಭಕ್ತಃ ಸ ಮೇ ಪ್ರಿಯಃ || ೨ ||

ನಾರ್ಯಭಸ್ಮ ಸಮಾದಾಯ ವಿಶುದ್ಧಂ ಶ್ರೋತ್ರಿಯಾಲಯಾತ್ |
ಅಗ್ನಿರಿತ್ಯಾದಿಭಿರ್ಮಂತ್ರೈರಭಿಮಂತ್ರ್ಯ ಯಥಾವಿಧಿ || ೩ ||

ಉದ್ಧೂಲಯತಿ ಗಾತ್ರಾಣಿ ತೇನ ಚಾರ್ಚಂತಿ ಮಾಮಪಿ |
ತಸ್ಮಾತ್ ಪರತರಾಭಕ್ತಿರ್ಮಮ ರಾಮ ನ ವಿದ್ಯತೇ || ೪ ||

ತ್ರೇತಾಗ್ನೇಃ ಸ್ಮಾರ್ತವಹ್ನೇರ್ವಾ ಶೈವಾಗ್ನೇರ್ವಾ ಸಮಾಹೃತಮ್ |
ಭಸ್ಮಾಭಿಮಂತ್ರ್ಯ ಯೋ ಮಾಂ ತು ಪ್ರಣವೇನ ಪ್ರಪೂಜಯೇತ್ ||
ತಸ್ಮಾತ್ ಪರತರೋ ಭಕ್ತೋ ಮಮ ಲೋಕೇ ನ ವಿದ್ಯತೇ || ೫ ||

ಶಾಲಾಗ್ನೇರ್ದಾವವಹ್ನೇರ್ವಾ ಭಸ್ಮಾನೀಯಾಭಿಮಂತ್ರಿತಮ್ |
ಯೋ ವಿಲಂಪತಿ ಗಾತ್ರಾಣಿ ಸ ಶೂದ್ರೋಽಪಿ ವಿಮುಚ್ಯತೇ || ೬ ||

(ಶಿವ. ಅ. ೧೫.)

ಅಗ್ನಿರಿತ್ಯಾದಿಭಿರ್ಮಂತ್ರೈ ರ್ಜಾಬಾಲೋಪನಿಷದ್ಗತೈಃ |
ಸಪ್ತಭಿರ್ಧೂಲನಂ ಕಾರ್ಯಂ ಭಸ್ಮನಾ ಸಜಲೇನ ಚ || ೧೮ ||

(ಸ್ಕಾಂದೇ. ಸೂ. ಸಂ. ಯಜ್ಞವೈಭವಖಂಡ. ಅಧ್ಯಾಯ ೩೦.)

ಅಗ್ನಿರಿತ್ಯಾದಿಭಿರ್ಮಂತ್ರೈಃ ಷಡ್ಭಿರಾಥರ್ವಣೈಃ ಕ್ರಮಾತ್ ।
ವಿಸೃಜ್ಯಾಂಗಾನಿ ಮೂರ್ಧಾದಿ ಚರಣಾಂತಾನಿ ತೈಃ ಸ್ಪೃಶೇತ್ ॥ ೨೩ ॥
ತತಸ್ತೇನ ಕ್ರಮೇಣೈವ ಸಮುದ್ಧೃತ್ಯ ಚ ಭಸ್ಮನಾ ।
ಸರ್ವಾಂಗೋದ್ಧೂಲನಂ ಕುರ್ಯಾತ್ಪ್ರಣವೇನ ಶಿವೇನ ವಾ ॥ ೨೪ ॥

(ವಾ. ಸಂ. ಪೂರ್ವಭಾಗ, ಅಧ್ಯಾಯ ೩೩)

ನಮಃ ಶಿವಾಯೇತಿ ಭಸ್ಮ ಕೃತ್ವಾ ಸಪ್ತಾಭಿಮಂತ್ರಿತಮ್ ।
ಉದ್ಧೂಲಯೇತ್ತೇನ ದೇಹಂ ತ್ರಿಪುಂಡ್ರಂ ಚಾಪಿಧಾರಯೇತ್ ॥ ೨೮ ॥
ಸರ್ವಾಂಗೋದ್ಧೂಲನಂ ಚಾಪಿ ನ ಸಮಾನಂ ತ್ರಿಪುಂಡ್ರಕೈಃ ।
ತಸ್ಮಾತ್ತ್ರಿಪುಂಡ್ರಮೇವೈಕಂ ಲಿಖೇದುದ್ಧೂಲನಂ ವಿನಾ ॥ ೨೯ ॥

(ಸಿ.ಶಿ. ಪರಿ—೬)

ಶಿರೋವದನಹೃದ್ಗುಹ್ಯಪಾದೇಷು ಪರಮೇಶ್ವರಿ ॥ ೨೨ ॥
ಈಶಾನಾದಿ ಸಮಾರಭ್ಯ ಸದ್ಯಾಂತಂ ಪಂಚಭಿಃ ಕ್ರಮಾತ್ ।
ಉದ್ಧೂಲ್ಯ ಕೇವಲಂ . . . . . . . . . . . . . ॥

(ಕೈ. ಸಂ. ಅಧ್ಯಾಯ ೪)

ಈಶೇನ ಪಂಚಧಾ ಭಸ್ಮ ವಿಕಿರೇನ್ಮೂರ್ಧ್ನಿ ಯತ್ನತಃ ।
ಮುಖೇಚತುಸ್ತತ್ಪುರುಷೇಣಾಘೋರೇಣಾಷ್ಟಧಾ ಹೃದಿ ॥ ೩೮ ॥
ವಾಮೇನ ಗುಹ್ಯದೇಶೇ ತು ತ್ರಿದಶೇಧಾ ತತಃ ಪುನಃ ।
ಅಷ್ಟಧಾ ಸದ್ಯಮಾತ್ರೇಣ ಪಾದಮುದ್ಧೂಲ್ಯ ಯತ್ನತಃ ॥
ಸರ್ವಾಂಗೋದ್ಧೂಲನಂ ಕುರ್ಯಾತ್ಪಂಚಭಿರ್ಬ್ರಹ್ಮಭಿಃ ಪುನಃ ॥ ೩೯ ॥

(ಚಂದ್ರ. ಉ. ಕ್ರಿಯಾಪಾದ ಪಟಲ—೬)

*　　*　　*　　*

ಭಸ್ಮಸ್ನಾನ, ಭಸ್ಮೋದ್ಧೂಳನವಿಲ್ಲದೆ ಭಸ್ಮಧಾರಣೆ ವಿಹಿತವಲ್ಲ. ಆದಾಗಿ—ಭಸ್ಮಸ್ನಾನ, ಭಸ್ಮೋದ್ಧೂಳನ ಆದ ಮೇಲೆ—ಮಸ್ತಕ, ಹಣೆ, ಕಿವಿಗಳೆರಡು, ಕತ್ತು, ಭುಜಗಳೆರಡು, ಎದೆ, ಹೊಕ್ಕುಳು, ಬೆನ್ನು, ತೋಳು ಗಳೆರಡು, ಹೆಕ್ಕತ್ತು, ಮುಂಗೈಗಳೆರಡು—ಹೀಗೆ ಹದಿನೈದು ಜಾಗಗಳಲ್ಲಿ

ಶಿವ ಪಂಚಾಕ್ಷರೀ ಮಹಾಮಂತ್ರ ಜಪ ಪುರಸ್ಸರ ಜಲಮಿಶ್ರಿತ ಭಸ್ಮವನ್ನು ಧರಿಸಬೇಕು. ಆಸಕ್ತಿಯಿದ್ದವರು ೧೬-೩೨-೪೮ ಸ್ಥಳಗಳಲ್ಲಿ ಭಸ್ಮವನ್ನು ಧರಿಸಿಕೊಳ್ಳಬಹುದು. ಇದು ಭಸ್ಮಧಾರಣವಿಧಾನ.

ಭಸ್ಮವನ್ನು ನೀರಿನಿಂದ ಆಪ್ಲಾವನೆ ಮಾಡಿ ( ನೀರು ಸೇರಿಸಿ ಕಲಸಿ ) ತನ್ನ ಬಲಗೈಯ ಮಧ್ಯದ ಮೂರು ಬೆರಳುಗಳಿಂದ ಹಣೆಯಲ್ಲಿ ಆರು ಅಂಗುಲದ ಅಳತೆಯಲ್ಲಿ ತ್ರಿಪುಂಡ ( ಮೂರು ರೇಖೆಗಳು ) ವನ್ನು ಧರಿಸಬೇಕು. ಅಥವ, ಎರಡು ಹುಬ್ಬುಗಳ ತುದಿಯವರೆಗಾದರೂ ತ್ರಿಪುಂಡವನ್ನು ಧರಿಸಬಹುದು. ಆ ಮೂರು ರೇಖೆಗಳೂ ನೇರವಾಗಿಯೂ ಛಿದ್ರತೆ ವಕ್ರತೆಗಳಿಲ್ಲದೆಯೂ ಇರಬೇಕು. ಶಿವಪೂಜಾಕಾಲದಲ್ಲಿ, ಮುಂಜಾನೆ-ಮಧ್ಯಾಹ್ನ-ಸಂಜೆ ಈ ಮೂರು ಹೊತ್ತೂ ತ್ರಿಪುಂಡ ಧಾರಣೆ ಮಾಡುವುದಾದರೆ, ಉಪಾಸಕ ಜೀವನಿಗೆ ಪ್ರಕೃತಿ ಸಂಬಂಧವಾದ ಮಾಯಾದಿ ದೋಷಗಳ ಸೋಂಕು ಇಲ್ಲದಂತಾಗಿ, ರುದ್ರತ್ವ ಪ್ರಾಪ್ತವಾಗುತ್ತದೆ.

ಅಗ್ನೇರ್ವೀರ್ಯಂತು ಯದ್ಭಸ್ಮ ಸೋಮೇನಾಪ್ಲಾವಿತಂ ಪುನಃ।
ಅಯೋಗಯುಕ್ತ್ಯಾ ಪ್ರಕೃತೇರಧಿಕಾರಾಯ ಕಲ್ಪತೇ ॥ ೧೫ ॥

( ವಾ. ಸಂ. ಅಧ್ಯಾಯ ೨೮. ಪೂ-ಭಾ )

ತ್ರಿಪುಂಡ್ರಂ ಧಾರಯೇನ್ನಿತ್ಯಂ ಭಸ್ಮನಾ ಸಜಲೇನ ಹಿ।
ಸ್ಥಾನೇಷು ಪಂಚದಶಸು ಶರೀರೇ ಸಾಧಕೋತ್ತಮಃ ॥ ೩೦ ॥

ಉತ್ತಮಾಂಗೇ ಲಲಾಟೇ ಚ ಶ್ರವಣ ದ್ವಿತಯೇ ತಥಾ।
ಗಲೇ ಭುಜದ್ವಯೇ ಚೈವ ಹೃದಿ ನಾಭೌ ಚ ಪೃಷ್ಠಕೇ ॥ ೩೧ ॥

ಬಾಹುಯುಗ್ಮೇ ಕಕುದ್ದೇಶೇ ಮಣಿ ಬಂಧದ್ವಯೇ ತಥಾ।
ತ್ರಿಪುಂಡ್ರಂ ಭಸ್ಮನಾಧಾರ್ಯಂ ಮೂಲಮಂತ್ರೇಣ ಸಾಧಕೈಃ॥ ೩೨ ॥

ಮಧ್ಯಾಂಗುಲಿತ, ಯೇಣೈವ ಸ್ವದಕ್ಷಿಣಕರಸ್ಯ ತು।
ಷಡಂಗುಲಾಯತಂ ಮಾನಮಪಿ ವಾಽಲಿಕ ಮಾನಕಮ್ ॥ ೩೫ ॥

ಪ್ರಾತಃಕಾಲೇ ಚ ಮಧ್ಯಾಹ್ನೇ ಚ ತ್ರಿಪುಂಡಕಮ್।
ಕದಾಚಿದ್ಭಸ್ಮನಾ ಕುರ್ಯಾತ್ಸರುದ್ರೋ ನಾತ್ರ ಸಂಶಯಃ ॥ ೩೮ ॥

(ಸಿ.ಶಿ. ಪರಿ-೭.)

ಅಶ್ರೌತ ಗಂಧ, ಕುಂಕುಮಾದಿಗಳನ್ನು ಭಸ್ಮದ ಮೇಲೆ ಧರಿಸಬಾರದು. ಚಂದನದ ಬೊಟ್ಟಿಡುವುದು ಮೊದಲಾದುದೆಲ್ಲ ದೇಹದ ಅಲಂಕಾರಕ್ಕಷ್ಟೇ ಆಗಿದೆ.

ಚಂದನಾದ್ಯುಪರಿ ಪ್ರಾಜ್ಞೋ ಧಾರಯೇದ್ಭಸ್ಮ ವೈದಿಕಮ್ ॥ ೧೪೪ ॥
ಲೌಕಿಕಂ ಚಂದನಾದ್ಯಂತು ಭಸ್ಮೋಪರಿ ನ ಧಾರಯೇತ್ ।
ಭಸ್ಮವಚ್ಚಂದನಾದೀನಾಂ ಕ್ಯಾಗೇಽನಾರ್ಥೋ ನ ವಿದ್ಯತೇ ॥ ೧೪೫ ॥
(ಕ್ರಿಯಾ—ಉಪದೇಶ ೮)

ಭಸ್ಮ ಸ್ನಾನದಿಂದ ಶಿವಜೀವಾನುಭೂತಿ ಉಂಟಾಗುತ್ತದೆ. ಭಸ್ಮಾನುಲೇಪನದಿಂದ ಪರತತ್ತ್ವ ದೃಷ್ಟಾಂತವಾಗುತ್ತದೆ. ಭಸ್ಮ ಧಾರಣೆಯಿಂದ ವಾಸನಾತ್ರಯ ದೋಷವಳಿದು, ಅಂಗ (ಜೀವ) ಗುಣಗಳೆಲ್ಲ ಲಿಂಗ (ಶಿವ) ಗುಣಗಳಾಗಿ ಪರಿವರ್ತನಗೊಳ್ಳುತ್ತವೆ. ಒಂದೇ ಅಖಂಡವನ್ನು—ಅನಂತವನ್ನು—ವಿಶ್ವಧರ್ಮವನ್ನು ತನ್ನೆರಡು ತೋಳುಗಳಿಂದ ಬಾಚಿ ತಬ್ಬಿ—ಅಪ್ಪಿಕೊಂಡಂತೆ ಈ ಕಾರ್ಯ ಸೂಕ್ಷ್ಮ. ಇಹ ಮತ್ತು ಪರ—ಎರಡೂ ದೃಷ್ಟಿಗಳಿಂದ ಈ ಆಲಿಂಗನ ಕ್ರಿಯೆ ಸಾಗಬೇಕು. ಅದುವೇ ವಿರಾಟ್ ದರ್ಶನದ ಅಭಿವ್ಯಕ್ತ ಸ್ಫುರಣೆ; ಅದುವೇ ಪರಬ್ರಹ್ಮ ಸತ್ಯವನ್ನು ಭರಿಸುವ—ಧರಿಸುವ—ಉದ್ಧರಿಸುವ ಸುಸ್ವಭಾವದ ಅಂಗೀಕಾರ !

ಭೂತಿಃ ಪರಾನುಭೂತಿರ್ಹಿ ಸ್ನಾನಂ ತತ್ರಾವಗಾಹನಮ್ ।
ತ್ರಿಪುಂಡ್ರಂ ತ್ರಿಗುಣಾಭಾವೋಽಹ್ಯಲಿಂಗಂ ಲಿಂಗಮೇವ ಚ ॥ ೧೧೧ ॥
(ವಿಶೇ-೩)

ಭವ ದುಃಖವನ್ನು ನಿವಾರಿಸುವಲ್ಲಿ ರುದ್ರಾಗ್ನಿಗೆ ಎಷ್ಟೊಂದು ಬಲವುಂಟೋ, ಅಷ್ಟೇ ಸಾಮರ್ಥ್ಯವು ಆ ಕಾರ್ಯದಲ್ಲಿ ಭಸ್ಮಕ್ಕೂ ಉಂಟೆಂಬುದು ಸಹಜವು. ಹೀಗಾಗಿ, ಭಸ್ಮನಿಷ್ಠನು ಯಾವಾಗಲೂ ಆತ್ಮಸ್ಫುರಣ (Supreme Universal Power) ಪಟುವಾಗಿ, ದೈವೀ ಬಲವಂತನಾಗಿ ಉಳಿಯಬಲ್ಲನೆನ್ನಲು ಅಡ್ಡಿಯಿಲ್ಲ.

ಆತ್ಮಸ್ಪಂದ (ಸ್ಫುರಣ) ವು ಐಂದ್ರಿಯಕ ಸ್ಪಂದ, ಮಾನಸಿಕ ಸ್ಪಂದ, ಆಧ್ಯಾತ್ಮಿಕ ಸ್ಪಂದವೆಂದು ಮೂರು ರೀತಿಯಲ್ಲಿ ಅನುಭೂತವಾದುದನ್ನು ಕಾಶ್ಮೀರ

ಶೈವ ಸಿದ್ಧಾಂತವು ಸ್ಪಷ್ಟಮಾಡುತ್ತಿದ್ದು—ಈ ಮೂರರ ವಿಸ್ತಾರ ದೆಸೆಯಲ್ಲಿ ಭಸ್ಮನಿಷ್ಠನು ವಿವಿಧ ಉಪಾಧಿರಹಿತನೂ, ಸಮಸ್ತ ಭೀತಿ ವಿದೂರನೂ, ಪವಿತ್ರಾತ್ಮನೂ, ಮಹಿತಾತ್ಮನೂ, ಶಿವಧರ್ಮಜ್ಞನೂ ಆಗಿ ಬೆಳಗಬಲ್ಲನೆಂದು ಶಿವಾಗಮ ವಾಕ್ಯವಿದೆ. ಎಲ್ಲ ಶಿವಯೋಗಿಗಳೂ ವಿಭೂತಿಧಾರಣಾ ವ್ರತದಿಂದಲೇ ತಮ್ಮ ಜೀವನಕ್ಕೆ ಬೆಳಕು ತಂದುಕೊಂಡರು; ಮಹಾನ್ ವಿಭೂತಿಗಳಾದರು. ಧರ್ಮ ಮತ್ತು ಸಮಾಜಗಳ ಉಚ್ಚ ಅಧ್ಯಯನ ಕೇಂದ್ರವೇ ತಾವಾಗಿ ನಿಂತರು.

ರುದ್ರಾಗ್ನಿರ್ಯತ್ಪರಂ ವೀರ್ಯಂ ತದ್ಭಸ್ಮ ಪರಿಕೀರ್ತಿತಮ್ ।
ತಸ್ಮಾತ್ಸರ್ವೇಷು ಕಾಲೇಷು ವೀರ್ಯವಾನ್ಭಸ್ಮ ಸಂಯುತಃ ॥ ೯೧ ॥

ಭಸ್ಮ ನಿಷ್ಠಸ್ಯ ನಶ್ಯಂತಿ ದೋಷಾ ಭಸ್ಮಾಗ್ನಿ ಸಂಗಮಾತ್ ।
ಭಸ್ಮಸ್ನಾನ ವಿಶುದ್ಧಾತ್ಮಾ ಭಸ್ಮನಿಷ್ಠ ಇತಿ ಸ್ಮೃತಃ ॥ ೯೨ ॥
ಭಸ್ಮನಾ ದಿಗ್ಧ ಸರ್ವಾಂಗೋ ಭಸ್ಮದೀಪ್ತ ತ್ರಿ ಪುಂಡ್ರಕಃ ।
ಭಸ್ಮ ಸ್ನಾಯೀ ಚ ಪುರುಷೋ ಭಸ್ಮ ನಿಷ್ಠ ಇತಿ ಸ್ಮೃತಃ ॥ ೯೩ ॥

ಭೂತ ಪ್ರೇತ ಪಿಶಾಚಾಶ್ಚ ರೋಗಾಶ್ಚಾತೀವ ದು ಸ್ಸಹಾಃ ।
ಭಸ್ಮ ನಿಷ್ಠಸ್ಯ ಸಾನ್ನಿಧ್ಯಾದ್ವಿದ್ರವಂತಿ ನ ಸಂಶಯಃ ॥ ೯೪ ॥

(ವಾ—ಸಂ ; ಪೂರ್ವಭಾಗ, ಅಧ್ಯಾಯ ೩೩)

ಹಿತವಿದೆ, ಸಕಲ ಲೋಕದ ಜನಕೆ ಮತವಿದೆ,
ಶ್ರುತಿ ಪುರಾಣದ ಗತಿಯಿದೆ, ಬಕುತಿಯ ಬೆಳಗಿಸುನ್ನತಿಯಿದೆ,
ಶ್ರೀ ವಿಭೂತಿಯನೊಲಿದು ಧರಿಸಿದೊಡೆ ಭವಡ ಹರಿಸುವುದು—
ಹರನ ಸಾಲೋಕ್ಯ ಸಾಮೀಪ್ಯದಲ್ಲಿರಿಸುವುದು—
ನಿರುತವಿದ ನಂಬು ಮನುಜಾ !
ಜನನ ಭೀತಿಯಂ, ಮರಣ ಭೀತಿಯಿಂದೀ ವಿಭೂತಿಯ
ಕಶ್ಯಪ ಜಮದಗ್ನಿಗಳು ಧರಿಸುವರು ನೋಡಾ,
ಚೆನ್ನಮಲ್ಲಿಕಾರ್ಜುನನೊಲಿಸುವ ಶ್ರೀ ವಿಭೂತಿ.

(ಅಕ್ಕ ಮಹಾದೇವಿ.)

* * * *

ಭಸ್ಮದ ಉತ್ಪತ್ತಿ ಮತ್ತು ಅದರ ಉಪಯೋಗದ ಬಗೆಗೆ ಈ ವರಿವಿಗೆ ಆದ ವಿವರಣೆ,—ಮಹಾ ವಟವೃಕ್ಷದಲಿದ್ಯಂತ ಚಿತ್ರವನ್ನು ಅದಿರುವ ಸನ್ನಿವೇಶ ಲಕ್ಷಣದ ಸಮೇತ, ಅತ್ಯಂತ ಸಣ್ಣ ಪ್ರಮಾಣದ ಚಿತ್ರದಲ್ಲಿ ಮೂಡಿಸುವ ಪ್ರಯತ್ನದಂತೆ ಎನ್ನೋಣ! ಶಿವಯೋಗತಜ್ಞರ ಆ ಕೌಶಲ್ಯ, ಎನೋ ಒಂದು ಬಗೆಯ ಐಂದ್ರ ಜಾಲವಲ್ಲ; ಬರಿಯ ಮೇಧಾ ಶಕ್ತಿಯ ಪ್ರದರ್ಶನವೂ ಅಲ್ಲ. ಲೋಕ ಸಮ್ಮತ ರೀತಿಯಲ್ಲಿ, ತ್ರಿಕಾಲಾಬಾಧಿತ ಸತ್ಯ ಸಂಪ್ರದಾಯದ ಪ್ರಕಾರ—ಆ ನಿಲುವು.

"ಅನಾದಿ ಭಸ್ಮವು ಅಗ್ನಿ—ವಾಯು—ಜಲ—ಭೂಮಿ—ಆಕಾಶ ರೂಪವಿದ್ದಂತೆಯೇ ಸ್ಫುಟವಾಗಿ ಇದೆ. ವ್ಯಕ್ತ ನಿಸರ್ಗವೆಲ್ಲವೂ ಭಸ್ಮದ ಗುಣಕ್ಕೆ ಅನುಗುಣವಾಗಿಯೇ ಒಪ್ಪುತ್ತಿರುತ್ತದೆ. ಜೀವನಿಗೆ ಆಶ್ರಯವಾದ ಬುದ್ಧಿ, ಮನ, ಇಂದ್ರಿಯ ಪ್ರಭಾವವೆಲ್ಲವೂ ಭಸ್ಮಧರ್ಮ (ಆತ್ಮಧರ್ಮ) ಕ್ಕೆ ತಕ್ಕ ವಿಕಾಸ ಸ್ವಭಾವದಿಂದ ವಿಶಿಷ್ಟವಾದುದೇ ಆಗಿದೆ. ಬ್ರಹ್ಮಾಂಡ ಮತ್ತು ಪಿಂಡಾಂಡದ ರಚನೆ—ವೃದ್ಧಿ—ವಿನಾಶ ಲಕ್ಷಣವೆಲ್ಲವೂ ಭಸ್ಮತತ್ವ (ಈಶ್ವರ ಶಕ್ತಿ) ದ ಇತಿ—ಮಿತಿಯ ಸ್ವಯಂಭೂ ಆಧಾರದ ಮೇಲೆಯೇ "ಸಾಕ್ಷಾತ್ಕೃತ" ಎಂದು ಅವರು ತಿಳಿಯ ಹೇಳಿದರು.

ಅಗ್ನಿರಿತಿ ಭಸ್ಮ ವಾಯುರಿತಿ ಭಸ್ಮ
ಜಲಮಿತಿ ಭಸ್ಮ ಸ್ಥಲಮಿತಿ ಭಸ್ಮ
ವ್ಯೋಮೇತಿ ಭಸ್ಮ ಭಸ್ಮೇತಿ ಭಸ್ಮ
ಸರ್ವಗ್ಂ ಹ ವಾ ಇದಂ ಭಸ್ಮ ಮನ
ಇತ್ಯೇತಾನಿ ಚಕ್ಷೂಗ್ಂಷಿ ಭಸ್ಮಾನಿ ॥

(ಅಥರ್ವ—ಉ. ೫)

'ಪ್ರಾಣ' ವೆಂಬ ಜೀವ ವಸ್ತುವಿನಲ್ಲಿ ದೇಹೇಂದ್ರಿಯಾದಿ ಸರ್ವಾವಯವ ಅಂತಃಕರಣ ಚೈತನ್ಯವೆಲ್ಲವೂ ಹೇಗೆ ಏಕೀಭವಿಸಿಕೊಂಡಿರುತ್ತದೆಯೋ—ಅದೇ ಮೇರೆಗೆ ಭಸ್ಮಧಾತುವೊಂದರಲ್ಲಿ ಜಗದ ಸೃಷ್ಟಿ— ವ್ಯಷ್ಟಿ ದೃಷ್ಟಿ—ರಿಷ್ಟ— ಅರಿಷ್ಟ ಕ್ರಿಯೆಗಳೆಲ್ಲವೂ ಸ್ಥಾಯಿಯಾಗಿ ನಿಂತಿವೆ. ಅದೇ ಉಮಾಪತಿಯ ಮೂಲ ಅಂಶವು, ಯೆಂದೆನ್ನುವ ಆ ಶಿವಸಿದ್ಧಾಂತ ಹೃದಯವು, ಬಹಳ ಗಂಭೀರ; ಬಲು ಮನೋಹರ!

ಇಷ್ಟವಿದ್ದವರು ವಿಶೇಷ ಎಚ್ಚರಿಕೆಯಿಂದ ಅದನ್ನು ಅಭ್ಯಸಿಸಬೇಕು; ಪರೀಕ್ಷಿಸಿ ಆನಂದಿಸಬೇಕು. ಪರಮೇಶ್ವರನ ಪ್ರೇಮಾನುಭವವೆಂಬ ಗುರಿಯ ದಿಕ್ಕಿನಲ್ಲಿ, ಅಕುಟಿಲ ಭಾವನೆಯಿಂದ—ಆತ್ಮೀಯ ಜಿಜ್ಞಾಸೆಯಿಂದ ಮುನ್ನಡೆವ ನಿಷ್ಠಾವಂತ ಸಾಧಕನು ಆ ಉನ್ಮನಿಯ ಸತ್ಯವನ್ನು ಸ್ವತಃ ಏವ ಕಂಡು ಕೊಳ್ಳುವನು; ಅದರೊಳಗೆ ಸಂಪೂರ್ಣವಾಗಿ ಬೆರೆತುಹೋಗಿ ನಿಜ ಸುಖಿಯೂ ಆಗುವನು.

"ಶ್ರೀ ಗುರುವಿನ ಕೃಪೆಯಿಂದ ದೊರಕಿದ ವಿಭೂತಿಯನ್ನು ಕ್ರಮವರಿತು ಧರಿಸುವುದರಿಂದ, ಮೈಗೆಲ್ಲಾ ಪೂಸಿಕೊಳ್ಳುವುದರಿಂದ—ಜೀವಾತ್ಮನ ಪಾಶ ಬಂಧ ಬಿಟ್ಟು ಹೋಗುತ್ತದೆ. ಅಲ್ಪ ಜೀವಗುಣಗಳಾದ—ಕೋಪ, ದುರಾಶೆ, ಮೋಹ ಇಂಥವೆಲ್ಲ ಇಲ್ಲದಂತಾಗುತ್ತವೆ. ನಿಜವಾದ ಮಾನವೀಯ ಆಶಾ—ಆಕಾಂಕ್ಷೆ ಫಲಿಸಿ, ಅಂತರಾಳದ ಕೆಟ್ಟ ಕನಸು ತಪ್ಪಿಹೋಗಿ, ಜೀವಿಯು ಆಯುಷ್ಮಂತನಾಗುತ್ತಾನೆ; ಧೈರ್ಯ—ಸ್ಥೈರ್ಯ—ಆರೋಗ್ಯ ಭೋಗ—ಭಾಗ್ಯ—ಸತ್ಪ್ರತಿಭಾವಂತನಾಗುತ್ತಾನೆ. ಪರಮಾತ್ಮನ ನಿಜ ಸ್ವರೂಪ(God realisation)ದರ್ಶನವಾಗುತ್ತದೆ. ಮಾನವನ ಆಯುಷ್ಯದ ಗುರಿ—ವ್ಯಕ್ತಿ ಶಕ್ತಿಯನ್ನು ಮೀರಿ, ವಿಶ್ವ ಶಕ್ತಿಯ ಸಂಘಟ್ಟವಾಗಿ ಬಿಡುತ್ತದೆ. ಎಂದ ಬಳಿಕ, ಆ ಮಹಾವಸ್ತುವನ್ನೇ ಆಶ್ರಯಿಸಿ ಬದುಕು" ಎಂಬಿದು ಶ್ರುತಿಯ ಆಶೀರ್ವಚನ.

ಮಾನಸ್ತೋಕೇ ತನಯೇ ಮಾನ ಆಯುಷಿ
ಮಾನೋ ಗೋಷು ಮಾನೋ ಅಶ್ವೇಷು ರೀರಿಷಃ ।
ವೀರಾನ್ಮಾನೋ ರುದ್ರಭಾಮಿತೋ ವಧೀರ್ಹ—
ವಿಷ್ಮಂತೋ ನಮಸಾ ವಿಧೇಮ ॥ ಇತಿ ।

(ತೈತ್ತಿ—ಸಂ. ೪/೫/೧೦)

ವೀರಭದ್ರ, ನಂದಿಕೇಶ್ವರ ನೀಲಲೋಹಿತ ಮೊದಲಾದ ಪ್ರಮಥರ—ಜಮದಗ್ನಿ, ಕಶ್ಯಪ, ಅತ್ರಿ, ಜಾಬಾಲ ಮೊದಲಾದ ಮಹರ್ಷಿಗಳ ತಪಶ್ಶಕ್ತಿಯ ಪ್ರತೀಕವಾದ, ಸಾಕ್ಷಾತ್ ರೌದ್ರ ಧರ್ಮವಾದ ಭಸ್ಮದ ಸ್ನಾನ—ಭಸ್ಮೋದ್ಧೂಳನ—ಭಸ್ಮಧಾರಣಾ ಕರ್ತವ್ಯದಿಂದ ಮಾನವನ ಮನದ ಅಜ್ಞಾನಾಂಧಕಾರವು ಸಂಪೂರ್ಣವಾಗಿ ಅಳಿಸಿ ಹೋಗಿ, ಶಿವಜ್ಞಾನದ

ಪ್ರಭಾವ ಉಂಟಾಗುವುದಲ್ಲದೆ ಅಲ್ಲಿ ಶಿವಜ್ಞಾನವು ದೇದೀಪ್ಯಮಾನವಾಗುತ್ತದೆ. ಆದರಿಂದಾಗಿ ಸಾಧಕನ ಆಸೆ–ಆಕಾಂಕ್ಷೆ ಈಡೇರುತ್ತದೆ. ಭುಕ್ತಿ ಮುಕ್ತಿಗಳು ಆಪ್ತವಾಳಿಕೆಯಾಗುತ್ತವೆ. ನಾಸ್ತಿಕನಿರಲಿ, ಮಾನರಹಿತನಿರಲಿ, ಅನಾಚಾರಿಯೇ ಆಗಿರಲಿ––ಭಸ್ಮಧಾರಣ ಮಾತ್ರದಿಂದ ಆಸ್ತಿಕನಾಗುತ್ತಾನೆ. ಸತ್ಯಕಾಮನಾಗುತ್ತಾನೆ; ದೇವತತ್ವಪರಿಣತನಾಗುತ್ತಾನೆ; ಮಹಾರುದ್ರನಂತೆ ಸ್ಥಿರತರ—ಚಿರತರ ಶುದ್ಧ ಚಾರಿತ್ರ ಸಂಯುಕ್ತನಾಗುತ್ತಾನೆ—ಅಭೀಪ್ಸು.

ಏವಂ ಧರ್ಮಂ ವಿಭೂತ್ಯಾ ಹಿ ಕುರುತೇ ಯಸ್ತ್ರಿಪುಂಡ್ರಕಂ |
ಸ ರೌದ್ರ ಧರ್ಮ ಸಂಯುಕ್ತ ಸ್ತ್ರಯಿಮಯ ಇತಿ ಶ್ರುತಿಃ || ೩೯ ||
ನಾಸ್ತಿಕೋ ಭಿನ್ನಮರ್ಯಾದೋ ದುರಾಚಾರ ಪರಾಯಣ ಃ |
ಭಸ್ಮ ತ್ರಿಪುಂಡ್ರ ಧಾರೀ ಚೇನ್ಮುಚ್ಯತೇ ಸರ್ವಕಿಲ್ಬಿಷೈ ಃ ||೪೩ ||

(ಸಿ. ಶಿ. ಪರಿ — ೭)

* * * *

ಶಿವಾಗಮಗಳಲ್ಲಿ, ವೇದಗಳಲ್ಲಿ, ಮಹಾಪುರಾಣ—ಉಪಪುರಾಣಗಳಲ್ಲಿ, ಯಾಜ್ಞವಲ್ಕ್ಯ — ಮನು — ಅತ್ರಿ — ನಾರದ — ಕಾತ್ಯಾಯನ ಸ್ಮೃತಿಗಳಲ್ಲಿ ಇತಿಹಾಸ (ಇತಿ—ಹ—ಆಸ) ಗಳಲ್ಲಿ, ಕಲ್ಪಗಂಥ (ನಿಯೋಗ ಶಾಸ್ತ್ರ) ಗಳಲ್ಲಿ, ನ್ಯಾಯ — ನೀತಿ ಪ್ರಕರಣದಲ್ಲಿ, ಭಸ್ಮ ಸಾಧನಾನುಭವ ವಿಶೇಷ ಮೈದಾಳಿ ನಿಂತಿದೆ. ಮಾನವೀಯತೆಯು ಸರ್ವಾಂಗ ಸುಂದರವಾಗಿ ಕೂಡಿರಬೇಕಾಗಿದ್ದರೆ, ಆ ಮಹಾದ್ರವ್ಯದ ಸಂಸರ್ಗ–ಸದುಪಯೋಗ ಆಗತ್ಯವೇ ಸರಿ, ಎಂದು ಪೂರ್ವಾಚಾರ್ಯರು ನಿರ್ಣಯಿಸಿದರು. ಆ ವಸ್ತು ವಿಶೇಷವನ್ನು ಸಂಗ್ರಹಿಸಿ ಉಪಯೋಗಿಸುವ ಕ್ರಮವನ್ನು ತಿಳಿಸಿಕೊಟ್ಟರು. ಲೋಕಕ್ಕೆ ಶ್ರೇಯಸ್ಸು ಕೋರಿ ಮಹೋಪಕಾರ ಮಾಡಿದರು.

ಉಪಾಯೇಚ್ಛೆಯನ್ನು ನಿಮಿತ್ತ ಮಾಡಿಕೊಂಡು ಲೌಕಿಕ ಜಾಗೃತಿಯ ಘನತೆಯನ್ನು ಭೋಧಿಸಿದ, ಮತ್ತು ವಿವೇಕ ವೈರಾಗ್ಯಾದಿ ಶ್ರೇಯಃ ಫಲಾನುಭವಕ್ಕೆ ಹುಟ್ಟು ಹಾಕಿದ—ಭಸ್ಮೋಪಸಂಗಯೋಗದಿಂದ 'ಅಸಂಗ ಚಿದಾನಂದ ಸ್ವರೂಪ' ವನ್ನು ಪ್ರತ್ಯಕ್ಷಮಾಡಿಕೊಳ್ಳಲು ಪ್ರೇರಿಸಿದ, ಆ ಹಿರಿಯರ ಸಮ್ಯಕ್ ದೃಷ್ಟಿಗೆ—

" ಆತ್ಮಾನಂ ಚೇದ್ ವಿಜಾನೀಯದಾತ್ ಅಯಮಸ್ಮೀತಿ ಪುರುಷಃ |
ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಜ್ವರೇತ್ ‖ "

ಎಂಬ ಸದ್‌ವಾಕ್ಯ ಪ್ರತಿಪಾದಕ ಆತ್ಮತತ್ತ್ವವಿದ್ಯೆಗೆ ಮಾರು ಹೋಗಿ, ಆ ಸದಭಿಮಾನದಲ್ಲಿ ಪ್ರವರ್ಧಮಾನನಾಗುವ ಮನುಷ್ಯನೇ ಕೃತಕೃತ್ಯನು. ಅವನ ಲೋಕ ಸಂಗ್ರಹ ಕಾರ್ಯ ವಿಶ್ವಶಾಂತಿಗೆ ಮುಡುಪು—ಎಂದೆನ್ನುತ್ತಾ, ಸದ್ಯಕ್ಕೆ ಈ ಪ್ರಕರಣವನ್ನು ವಿರಮಿಸುವಣ !

* * * *

೩

ಭಸ್ಮಧಾರಣಾದಿ ಸತ್ಕರ್ಮಗಳಿಗೆ ಯಥೋಚಿತ ಪುರಸ್ಕಾರವೀಯುವು ದಾದರೆ, ಅದರಿಂದ ಆಧ್ಯಾತ್ಮಿಕ ವಿದ್ಯೆ ದೀಪ್ತಿಮಂತವಾಗುತ್ತದೆ; ಸತ್ಯ ಜೀವನವು ಸಾಧ್ಯವಾಗುತ್ತದೆ; ಭಾವ ಸ್ಪಂದನವಾಗುತ್ತದೆ. ತತ್ವಶಃ ಮಾನವೋಚಿತ ಸ್ವತಂತ್ರ ಹಾಗೂ ಪವಿತ್ರವರ್ತನೆ ಸಾಧಕನಲ್ಲಿ ಬೆಳೆಯುತ್ತಾ ಹೋಗೋಣ, ಅವನು ಸಮಸ್ತ ದುಃಖ ವಿಮುಕ್ತನಾಗಲು ಸಾಧ್ಯ.

ಇದರ ಮೊದಲನೆಯ ಹೆಜ್ಜೆಯಲ್ಲಿ—ಮಾನವನು ದಾನವ ಗುಣಕ್ಕೆ ಕಾಲಿಡದಲೆ, ಅರ್ಥಾತ್ ಆಸುರೀ ಸಂಪದಗಳಾದ ದಂಭ, ದರ್ಪ, ಅಹಂಕಾರ, ಸಿಟ್ಟು, ನಿಷ್ಠುರವಾಗಿ ನುಡಿಯುವುದು ಮೊದಲಾದ ದುಸ್ಥಿತಿಗೆ ಮನಗೊಡದಲೆ ಇರುವುದು; ತನ್ನ ಅಂತರಂಗ ಬಹಿರಂಗ ಕಲ್ಮಷಗಳು ನಾಶ ವಾಗುವಂತೆ ನೋಡಿಕೊಳ್ಳುವುದು, ಗುರುಹಿರಿಯರ ಆಜ್ಞೆಯನ್ನು ಉಲ್ಲಂಘಿ ಸದಿರುವುದು, ಸದ್ಧರ್ಮಕ್ಕೆ ಶರಣಾಗುವುದು—ಇದೆಲ್ಲಾ ಪ್ರಧಾನ ಕರ್ತವ್ಯ. ಗಣಿಯಿಂದ ಹೊರತೆಗೆದ ಹೊನ್ನಿನಲ್ಲಿರುವ ಮಣ್ಣಿನ ಸಂಬಂಧದ ಜಡ್ಡನ್ನು ಹೋಗಲಾಡಿಸುವ ಪ್ರಪ್ರಥಮ ಪ್ರಯತ್ನದಂತೆ, ದೈಹಿಕ ಕಿಲ್ಬಿಷ ನಿರಾಸಕ— ಅಂಗಸಂಸ್ಕಾರದ ಈ ಆವಶ್ಯಕ ವ್ಯವಸ್ಥೆ.

ದೈಹಿಕ ಬಲಸಂವರ್ಧಕ, ಸ್ವಧರ್ಮಶಕ್ತಿ ಸಂವಾಹಕ ಸುಗುಣ— ಸುಸ್ವಭಾವಗಳಷ್ಟನ್ನೂ ಜೀವನಿಗೆ ರೂಢಿಸಿಕೊಡುವ ಈ ಬಗೆಯ ವ್ಯವಸ್ಥೆ ಆಜ್ಞಾ ದೀಕ್ಷಾಮುಖದಿಂದ ಪ್ರಾರಂಭವಾಗುತ್ತದೆ. ನವ್ಯ ಪ್ರಪಂಚದ ನವೋ ನವೀನ ಜೀವನಸ್ಥಿತಿಯನ್ನು ವ್ಯವಸಾಯಾತ್ಮಕ ಬುದ್ಧಿಯಿಂದ ವಿಚಾರಿ

ಸುತ್ತಾ, ಕ್ರಿಯಾಮೂರ್ತಿಯಾಗಿ ಚರಿಸಲು ಸಾಧಕನು ಈ ಹಂತದಿಂದ ಶುರುಮಾಡುತ್ತಾನೆ.

**ಎರಡನೆಯುದು :** ರೋಚಕ ರೋಚಮಾನ ನೈತಿಕ ಬಲಾನುಕೂಲತ್ವ. ಇದಾದರೂ ಮಾನವನು ನಡುಹರೆಯದ ವಯಸ್ಸಿಗೆ ಮುನ್ನ ಸಮಯದೀಕ್ಷಾಮುಖದಿಂದ ಪ್ರಾರಂಭವಾಗಬೇಕಾದ ಕಾರ್ಯ. ದೀಕ್ಷಿತನು ಸಚ್ಚರಿತ್ರನಾಗಿ, ಸದಾಚಾರಿಯಾಗಿ, ಸದ್ಭಾವಿಯಾಗಿ, ಕಾಲೋಚಿತವ ಬಲ್ಲಾತನಾಗಿ, ತ್ರಿಕರಣಶುದ್ಧನಾಗಿ ಇರಲು ಕಲಿಯುತ್ತಾನೆ—ಈ ಹೆಜ್ಜೆಯಲ್ಲಿ. ಅಸಂಸ್ಕೃತಿಯನ್ನು ತ್ಯಾಜ್ಯಮಾಡಿ, ಸುಸಂಸ್ಕೃತಿಯನ್ನು ಸಂಪಾದಿಸಿಕೊಳ್ಳಲು ಆಗ ಒಳ್ಳೆಯ ಅವಕಾಶ.

ಅಪ್ಪಟ ಚಿನ್ನದ ಗಟ್ಟಿಯನ್ನು ಕಾಯಿಸಿ—ತಟ್ಟಿ, ಸುಂದರ ಆಭರಣವನ್ನಾಗಿ ಸಿದ್ಧಗೊಳಿಸುವುದು ಹೇಗೋ ಹಾಗೆ ಇಲ್ಲಿ ದೈವೀಸಂಪದ ಅಥವ ಜನತಾ ಕಲ್ಯಾಣಗುಣರೂಪದಾಯಕ ಮನೋನಿಗ್ರಹದ ಈ ಶಿವಸಂಸ್ಕಾರ. ಬುದ್ಧಿಯ ಹಾಗೂ ಆತ್ಮಶಕ್ತಿಯ ಪ್ರಕಾಶಕ್ಕೆ ಬೀಜವಾಗಿ ನಿಂತ, ಈ ಬಗೆಯ ಪರಿಶುದ್ಧ ಜೀವನದಿಂದ ಮನುಷ್ಯನಿಗೆ ಶಿವಸಾರೂಪ್ಯ ಸಂಪತ್ತಿ-ಶಿವಾನುಭೂತಿ ಮುಂತಾದ ಹೆಚ್ಚಿನ ಅನುಕೂಲ ದೊರಕೊಳ್ಳುತ್ತದೆಂಬುದು ನಿಶ್ಚಯ.

**ಮೂರನೆಯುದು :** ಸರ್ವ ಅವಯವಪೂರಕ ಸದ್‌ಭಾವ (ಕಾರಣ) ಸಂಸ್ಕಾರ. ಶಿವಸಾಯುಜ್ಯದ ಅನುಭವಕ್ಕಾಗಿ ಅಥವ ಶ್ರೀ ಸಾಮಾನ್ಯ ಜೀವನವನ್ನು ಅಸಾಧಾರಣವಾದ ಪಾರಮಾರ್ಥಿಕ ಲಕ್ಷ್ಯಕ್ಕೆ ಏರಿಸಿ, ಶಾಶ್ವತವಾದ ನೆಮ್ಮದಿಯನ್ನು ಪಡೆಯುವ ಆಕಾಂಕ್ಷೆಯಿಂದ ಸಾಧಕನು ಈ ಬಗೆಯ ಸಂಸ್ಕಾರಕ್ಕೆ ಒಳಗಾಗಬೇಕಾಗಿದೆ. ನಕಾಸೆ ಕೆಲಸದ ಚಿನ್ನದ ಒಡವೆಗಳಿಗೆ ವಜ್ರವೇ ಮೊದಲಾದ ರತ್ನಗಳನ್ನು ಸೇರಿಸಿ ಹೆಚ್ಚು ಸೊಗಸು ತರುವಂತೆ—ಅಧಿಕ ಮೌಲ್ಯ ಪಡೆಯುವಂತೆ ಇಲ್ಲಿ ಈ ಸಂಸ್ಕಾರದ ಪ್ರಯೋಜನ.

ಅಂತಃಕರಣ ಪರಿಶುದ್ಧ ಯಾಜ್ಞಿಕನು—'ನೀನು-ನಾನು', 'ಘಟಾಕಾಶ-ಮಠಾಕಾಶ', 'ಪ್ರವೃತ್ತಿ-ನಿವೃತ್ತಿ' ಇಂಥ ಸೂಕ್ತ ಸ್ಥಲನಿರ್ದೇಶನದ ಗುಟ್ಟನ್ನು ಚೆನ್ನಾಗಿ ಅರಿಯಬಲ್ಲನು—ಈ ಹಂತದಲ್ಲಿ. ಜನ್ಮ–ಸಂಸ್ಕಾರ–ವಿದ್ಯಾ ಈ ಮೂರನ್ನೂ ಪೂರ್ಣಗೊಳಿಸಿಕೊಳ್ಳಲೂ, ಅದಕ್ಕೆ ತಕ್ಕಂತೆ ಗುಣತ್ರಯಾತೀತ ಪರಮಾವಸ್ಥೆಯಲ್ಲಿಯೇ ಸರ್ವದಾ ಇರುತ್ತಾ, ತನ್ನ ಜೀವಮಾ

ನಕ್ಕೆ ಅಧಿಕ ಗೌರವ-ಶಾಂತಿ ತಂದುಕೊಳ್ಳಲೂ ಆಗ ಅವಕಾಶವಾಗುತ್ತದೆ. ಅತ್ತಿಂದಿತ್ತ-ಇತ್ತಿಂದತ್ತ ಓಲಾಡುತ್ತಿದ್ದ ಉಯ್ಯಾಲೆಯ ಕ್ರಿಯೆ (ಒಲೆತ) ಅಡಗಿದ ನಿಶ್ಚಲ ಭರದಂತೆ ಅಲ್ಲಿ ಜೀವಾತ್ಮನಿಗೆ ಆಗುವ ವಿಶ್ವಾತ್ಮ ಪ್ರಬೋಧನಾ ಸಂಭ್ರಮ!

ಹೇಗೆ, ಮೈ-ಮನ-ಮಾತು ಈ ಮೂರರ ಬೆಳವಣಿಗೆಗೆ, ಆಹಾರ ವಿಹಾರ ವ್ಯವಹಾರ ಪಥ್ಯ ಅಗತ್ಯವೆಂಬುದನ್ನು ಎಲ್ಲರೂ ಒಪ್ಪುತ್ತೇವೆಯೋ ಅದೇ ಪ್ರಕಾರ, ಕರಣತ್ರಯದ ವಿಮಲತೆಗೆ ಹಾಗೂ ಅಂತರಾತ್ಮ ಸ್ಫುರಣೆಗೆ ಆದಿಯಲ್ಲಿ ವರ್ಣಿಸಲ್ಪಟ್ಟ ವೇಧಾ-ಮನು-ಕ್ರಿಯಾ ದೀಕ್ಷೆಯೂ, ಅದರ ಮೂರ್ತ ಪ್ರಕೃತಿಯೆನಿಪ—ಭಸ್ಮ ರುದ್ರಾಕ್ಷಧಾರಣ, ಶಿವತತ್ತ್ವೋಪಾಸನಾ ಉದ್ಯಮವೂ ಅಗತ್ಯವೆಂದೂ ಒಪ್ಪಬೇಕು. ಶಾಸ್ತ್ರನಿಬಂಧನೆ, ದಾರ್ಶನಿಕರ ಪ್ರತಿಪಾದನೆ ಸಹ ಈ ರೀತಿಯಲ್ಲೇ ಇದೆ ಎಂಬುದು ಇಲ್ಲಿಯವರಿವಿಗೆ ಆದ ವಿಚಾರ ವಿಮರ್ಶೆಯ ತಾತ್ಪರ್ಯ.

ಅವುಗಳಲ್ಲಿ ಭಸ್ಮದ ವೈಶಿಷ್ಟ್ಯವನ್ನು ಕುರಿತು ಈ ಮೊದಲೇ ಒಂದಿಷ್ಟು ಹೇಳಿದಂತೆ, ಈಗ ರುದ್ರಾಕ್ಷ ಸಂಬಂಧವಾಗಿ ಕೆಲವು ಪ್ರಮಾಣ ವಾಕ್ಯಗಳ ವಿವರ—ಸ್ಥಾಲೀ ಪುಲಾಕ ನ್ಯಾಯಾನುಸಾರ. ಎಂದರೆ, ರುದ್ರಾಕ್ಷದ ಮಹಿಮೆಯನ್ನು ಅದರ ಅಂತರಾಂತರ ರಹಸ್ಯ ಸರ್ವಸ್ವವನ್ನೂ ಬಿತ್ತರಿಸುವ ಸೂಕ್ತಿಗಳೆಲ್ಲವನ್ನೂ ಇವೊಂದು ಚಿಕ್ಕ ಪುಸ್ತಕದಲ್ಲಿ ಉದಾಹರಿಸುವುದು ತರವಲ್ಲ.—ಅದಕ್ಕಾಗಿಯೇ ಪ್ರತ್ಯೇಕ ಬೃಹದ್ಗ್ರಂಥ ರಚನೆಯಾಗಿರುವಾಗ ಇಲ್ಲೇಕೆ ಆ ಪ್ರಯತ್ನ? ಅಷ್ಟೇ ಅಲ್ಲದೆ, ರುದ್ರನ ಅಕ್ಷಿ(ಕಣ್ಣು) ಗಳ ಮರ್ಮವನ್ನು ಅರಿದುಕೊಳ್ಳಲು ಸಾಧಕನಿಗೆ—'ರೌದ್ರ ಅಕ್ಷ', 'ಚಿದಚಿದಕ್ಷಿ' ಇದ್ದಿರಬೇಕು. ಮಹಾದೇವನೇ ಕೃಪೆಮಾಡಿ ಅದನ್ನು ಅನುಗ್ರಹಿಸಬೇಕು. ಎಂದರೇನೇ ಅಂತರಾತ್ಮ ಪರಿಜ್ಞಾನ ಸಾಧ್ಯ. ಅಂತರಂಗದ ಕಣ್ಣು ಅರಳದಲೆ ಶಿವ ಸಿದ್ಧಾಂತದ ಅನುಭವ ಸಿಕ್ಕುವುದಿಲ್ಲ—ಎಂದು ಅಭಿಪ್ರಾಯವು.

"ಎಂದೆಂದಿಗೂ ವಿನಾಶವನ್ನೇ ಕಾಣದುದೂ, 'ಇದೋ ಈ ಪ್ರಕಾರವಾಗಿ ಇದೆ' ಎಂದು ಎಲ್ಲರಿಗೂ ತೋರಿಸಲಾಗದುದೂ, ಸರ್ವ ವ್ಯಾಪ್ತವೂ, ಸುಲಭ ಸಾಧನಗಳಿಂದ ತಿಳಿಯಲಾಗದ್ದೂ, ನಿರ್ವಿಕಾರವೂ, ಅಚಲವೂ, ನಿತ್ಯವೂ, ಅವ್ಯಕ್ತವೂ ಆದ ಈಶ್ವರತತ್ತ್ವದಲ್ಲಿಯೇ—ತದ್ರೂಪವಾದ ನನ್ನ

ಲ್ಲಿಯೇ ಮನಸ್ಸಿಡು. ನನ್ನಲ್ಲಿಯೇ ಬುದ್ಧಿಯನ್ನು ನೆಲೆಗೊಳಿಸು. ಹೀಗಾದ ಮೇಲೆ ನಿಶ್ಚಯವಾಗಿಯೂ ನೀನು ನನ್ನನ್ನೇ ಸೇರುವೆ. ಒಂದುವೇಳೆ ಚಂಚಲ ವಾದ ಮನಸ್ಸನ್ನು ನನ್ನಲ್ಲಿ ಸ್ಥಿರವಾಗಿ ನೆಲೆಗೊಳಿಸಲು ಕಷ್ಟವಾಗುವುದಾದರೆ, ಅಭ್ಯಾಸ ಬಲದಿಂದ ನನ್ನನ್ನು ತಿಳಿಯಲು ಇಚ್ಛಿಸು. ವಿಹಿತ ಕರ್ಮಗಳನ್ನು ಮಾಡು. ಸುಸ್ಥಿತಿಯನ್ನು ಹೊಂದುವೆ. ”

“ ಅಜ್ಞಾನದಿಂದ ಮಾಡುವ ಬರಿಯ ಅನುಷ್ಠಾನಕ್ಕಿಂತ ಜ್ಞಾನವು ಮೇಲಾದದ್ದು. ಕೇವಲ ಜ್ಞಾನಕ್ಕಿಂತಲೂ ಜ್ಞಾನದಿಂದ ಕೂಡಿದ ಅನುಷ್ಠಾನವು ಮೇಲೆನಿಸಿದೆ. ಫಲಾಪೇಕ್ಷೆಯಿಲ್ಲದ ಅರ್ಥಾತ್ ಸ್ವಾರ್ಥವಿರಹಿತಕರ್ಮಾನುಷ್ಠಾನದಿಂದ ಅಪರೋಕ್ಷ ಜ್ಞಾನವುಂಟಾಗಿ ಮೋಕ್ಷ ದೊರೆಯುವುದು. ” ಎಂದು ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿದ ಮಾತನ್ನು ಇಲ್ಲಿ ಜ್ಞಾಪಕಕ್ಕೆ ತಂದುಕೊಳ್ಳುವುದು ವಾಸಿ.

ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।
ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥ ೩ ॥
ಸಂನಿಯಮ್ಯೇಂದ್ರಿಯ ಜ್ಞಾನಂ ಸರ್ವತ್ರ ಸಮಬುದ್ಧಯಃ ।
ತೇ ಪ್ರಾಪ್ನುವಂತಿ ಮಾಮೇವ ಸರ್ವ ಭೂತಹಿತೇ ರತಾಃ ॥ ೪ ॥
ಮಯ್ಯೇವ ಮನ ಆದತ್ಸ್ವ ಮಯಿ ಬುದ್ಧಿಂ ನಿವೇಶಯ ।
ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ ೮ ॥
ಅಭ್ಯಸೇಽಪ್ಯಸಮರ್ಥೋಽಸಿ ಮತ್ಕರ್ಮ ಪರಮೋ ಭವ ।
ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ । ೧೦ ॥
ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಞಾನಾದ್ಧ್ಯಾನಂ ವಿಶಿಷ್ಯತೇ ।
ಧ್ಯಾನಾತ್ಕರ್ಮ ಫಲಂ ತ್ಯಾಗ ಸ್ತ್ಯಾಗಾಚ್ಛಾಂತಿ ರನಂತರಮ್ ॥೧೨ ॥
(ಗೀ—ಅಧ್ಯಾಯ ೧೨ (

ಎಂತಲೇ, ಅಪರೋಕ್ಷಾನುಭವಕ್ಕಾಗಿ, ಅರ್ಥಾತ್ ಪರಮಶಿವನ ಆಶೀರ್ವಾದವನ್ನು ಪಡೆಯುವುದಕ್ಕೋಸ್ಕರ, ಅತಿವರ್ಣಾಶ್ರಮಿಯು ಎಂತಹ ಗಂಭೀರತಮ ವಿಶ್ವಾಸದಿಂದ ಭಸ್ಮವನ್ನು ಧರಿಸುವನೋ, ಎಷ್ಟೊಂದು ಎಚ್ಚರದಿಂದ ಪರಾಮರ್ಶಿಸಿ ಅದರ ಹೆಚ್ಚುಗಾರಿಕೆಯನ್ನು ತಿಳಿದುಕೊಳ್ಳುವನೋ, ಅದಷ್ಟೇ ಶ್ರದ್ಧೆಯಿಂದ—ಅನುರಾಗದಿಂದ ಅವನು ವಿಚಾರಿಸ

ಬೇಕಾದ ಇನ್ನೊಂದು ವಸ್ತು 'ರುದ್ರಾಕ್ಷ' ಅದರ ಸದುಪಯೋಗದ ಪ್ರಯೋಜನವನ್ನು ಸಾಧಕನು ನಿಜವಾಗಿ ಕಂಡು, ನಿರ್ವಿಕಲ್ಪ ಶಿವಕಾರುಣ್ಯವಂತನಾಗಿ ಆನಂದಿಸಲಿ ಎನ್ನುವ ಪ್ರಿಯ ಧ್ವನಿಯಿಂದ ಪ್ರಾರಂಭ ಈ ಮೂರನೆಯ ಪ್ರಕರಣ.

ಭಸ್ಮೋದ್ಧೂಲಿತ ಸರ್ವಾಂಗಾ ಧೃತರುದ್ರಾಕ್ಷ ಮಾಲಿಕಾಃ |
ಯೇ ಭವಂತಿ ಮಹಾತ್ಮಾನೋ ರುದ್ರಾಸ್ತೇ ನಾತ್ರ ಸಂಶಯಃ || ೬೪ ||

(ಸಿ.ಶಿ. ಪರಿ—೭)

* * * *

ಮಾನವ ಚಿತ್ತವು ಊಹಿಸಲಾರದಷ್ಟು ಕ್ರೂರ ಸ್ವಭಾವದ್ದೇ ಆಗಿರಲಿ, ಅತನ ಆಚರಣೆ ಕಡು ಹೀನವೆಂದೇ ಎನಿಸಿಕೊಳ್ಳಲಿ, ಬುದ್ಧಿಬಲ ಲಘುತಮ ಕನಿಷ್ಟ ದುರ್ಬಲಕ್ಕೇ ಇಳಿದಿರಲಿ—ರುದ್ರಾಕ್ಷಧಾರಣ ಮಾತ್ರದಿಂದ, ಆ ಅನಂತ ವ್ಯಸನಗಳಿಂದ ಬಿಡುಗಡೆ ಪಡೆಯುತ್ತಾನೆ—ಆತ. ಇದು ಅಂದಿನಿಂದ ಇಂದಿನವರೆಗೆ ಉಳಿದು ಬಂದಿರುವ ನಂಬಿಕೆ. ನಿಜವೆಂದರೆ—ಜೀವ ಮೀಮಾಂಸೆಯು ದೇವ ಮೀಮಾಂಸೆಯಾಗಿ ಪರಿವರ್ತನೆಗೊಳ್ಳುತ್ತದೆ; ಜಡ ಹೃದಯವು ಸಸ್ಯ ಶಾಲಿನೀ ಕ್ಷೇತ್ರವಾಗುತ್ತದೆ—ರುದ್ರಾಕ್ಷಾನುಭವದಿಂದ.

ರುದ್ರಾಕ್ಷಧಾರಣಾದೇವ ಮುಚ್ಯಂತೇ ಸರ್ವಪಾತಕೈಃ |
ದುಷ್ಟಚಿತ್ತಾ ದುರಾಚಾರ ದುಷ್ಪ್ರಜ್ಞಾ ಅಪಿ ಮಾನವಾಃ || ೪೫ ||

(ಸಿ.ಶಿ. ಪರಿ—೭.)

ಇಂತು, ರುದ್ರಾಕ್ಷಿಯ ಮಹತ್ತನ್ನು ಬೃಹಜ್ಜಾಬಾಲೋಪನಿಷತ್, ರುದ್ರಾಕ್ಷ ದರ್ಶನೋಪನಿಷತ್, ಬ್ರಹ್ಮವೈವರ್ತ, ಸ್ಕಾಂದ ಮಹಾಪುರಾಣ, ಶಿವಮಹಾಪುರಾಣ, ಶಿವಧರ್ಮೋತ್ತರ, ಶಿವರಹಸ್ಯ, ಕ್ರಿಯಾಸಾರ, ಸಿದ್ಧಾಂತ ಪಾರಿಜಾತ, ಸಿದ್ಧಾಂತಶಿಖಾರತ್ನ, ಶಿವಸಿದ್ಧಾಂತ ಪಯೋನಿಧಿ, ವೀರಶೈವಾಚಾರ ಪ್ರದೀಪಿಕೆ ಮುಂತಾದ ನೂರಾರು ಗ್ರಂಥಗಳಲ್ಲಿ ಸವಿಸ್ತಾರ ಹೇಳಿದೆ. ಶಿವಾಗಮಗಳಲ್ಲಂತೂ ನಾಲ್ಕಾರು ಪಟಲಗಳೇ ಅದಕ್ಕಾಗಿ ಮೀಸಲು.

ತ್ರಿಪುರದಹನ ಸಮಯದಲ್ಲಿ ಜಗದೀಶ್ವರನು ತ್ರಿಪುರದ ಕಡೆಗೆ ನಿರೀಕ್ಷಿಸ ತೊಡಗಿದಾಗ, ಅವನ ಉಗ್ರನೇತ್ರಗಳಿಂದ ಉದುರಿದ ಕಂಬನಿಯಿಂದ

ರುದ್ರಾಕ್ಷಿಗಳು ಉತ್ಪತ್ತಿಯಾದುವೆಂದೂ, ಅಂದಿನ ಕಲಕು ಮಲಕು ಹಾಗೂ ದೂಷಿತ ವಾತಾವರಣವನ್ನು ಆ ಅಧ್ಯಾಯವು ಶೀತಲಗೊಳಿಸಿತೆಂದೂ, ಜೀವ ರಸ-ದೇವರಸ ಸಮಾಗಮಕ್ಕೆ ಆ ಕೃತ್ಯ ಯೋಗ್ಯ ಉದಾಹರಣೆಯೆಂದೂ ಪುರಾಣಗಳು ಒಕ್ಕಣಿಸುತ್ತವೆ.

ದಿವ್ಯವರ್ಷ ಸಹಸ್ರಾಣಿ ಚಕ್ಷುರುನ್ಮೀಲಿತಂ ಮಯಾ ।
ಭೂಮಾವಕ್ಷಿಪುಟಾಭ್ಯಾಂ ತು ಪತಿತಾ ಜಲಬಿಂದವಃ ॥
ತತ್ರಾಶ್ರು ಬಿಂದವೋ ಜಾತಾ ಮಹಾರುದ್ರಾಕ್ಷ ವೃಕ್ಷಕಾಃ ।
ಸಾ ವರತ್ವಮನುಪ್ರಾಪ್ಯ ಭಕ್ತಾನುಗ್ರಹಕಾರಣಾತ್ ॥

(ರುದ್ರಾಕ್ಷ-ಉ.)

ತ್ರಿಪುರ ಸಂಹಾರವ ಮಾಡುವಲ್ಲಿ ಶಿವನ ಉನ್ಮೀಲನ ದೃಷ್ಟಿಯಿಂ ಪುಳಕಬಿಂದು ಧರೆಯಮೇಲೆ ಬೀಳಲುಣ್ಮಿದ ರುದ್ರಾಕ್ಷಿ ಸರ್ವಕಾರಣಾಧಿಕ್ಯ ವೆಂಬುದನರಿದು, ರುದ್ರಾಕ್ಷಿಯ ಧರಿಸಿದಾತನೇ ಸರ್ವತೋರುಪ್ರಸಪ್ಪುದು ತಪ್ಪದು ಇದಕ್ಕೆ ಶ್ರುತಿಃ

" ಪುರಾತ್ರಿಪುರವಧಾರ್ಥಮಹಮುನ್ಮೀಲಿತಾಕ್ಷೋಽಭವಮ್ ।
ತೇಭ್ಯೋ ಜಲಬಿಂದವೋ ಭೂಮೌ ಪತಿತಾಃ । ತೇ ರುದ್ರಾಕ್ಷಾ ಜಾತಾಃ ಸರ್ವಾನುಗ್ರಹಾರ್ಥಾಯ ॥ "

" ಅತ ಏವ ರುದ್ರಾಕ್ಷಧಾರಣಾತ್ ರುದ್ರತ್ವಂ ಭವತಿ । ಶಿವಸಾಯುಜ್ಯಮೇತಿ । ನ ಸ ಪುನರಾವರ್ತತೇ । ನ ಸ ಪುನರಾವರ್ತತೇ । ಓಂ ಸತ್ಯಮಿತಿ ॥"

ಎಂದುದಾಗಿ, ಇಂತಪ್ಪ ರುದ್ರಾಕ್ಷಿಯ ಧರಿಸಿದಾತ ಸೌರಾಷ್ಟ್ರ ಸೋಮನಾಥಲಿಂಗವಲ್ಲದೆ ಬೇರೆ ಅಲ್ಲ.

(ಆದಯ್ಯನ ವಚನ ೨೭.)

ಇದರಂತೆಯೇ—ಸ್ವತಂತ್ರನೂ ಲೋಕೋಪಕಾರಶೀಲನೂ ಆದ ಪರಮೇಶ್ವರನು, ಒಮ್ಮೆ ಮನಸ್ಸನ್ನು ನಿಯಮನಮಾಡಿ ದೇವಮಾನ ರೀತಿಯಿಂದ ಸಾವಿರವರ್ಷ ತಪಸ್ಸನ್ನಾಚರಿಸಿದನು. ಕಡೆಗೆ ಲೀಲಾರ್ಥವಾಗಿ ಸ್ವಲ್ಪ ಕಣ್ಣನ್ನು ತೆರೆದನು. ಆಗ ಸುಂದರವಾದ ಅವನ ನೇತ್ರಪುಟಗಳಿಂದ

ಜಲಬಿಂದುಗಳು ಬಿದ್ದುವು. ಆ ಜಲಬಿಂದುಗಳೇ ರುದ್ರಾಕ್ಷತರುಗಳಾದುವು. ಆ ವೃಕ್ಷಗಳನ್ನು ವಿಷ್ಣುಭಕ್ತರೇ ಮೊದಲಾದ ನಾಲ್ಕು ವರ್ಣದವರಿಗೂ ಕೊಟ್ಟನು. ಮತ್ತು ಗೌಡದೇಶ, ಮಧುರೆ, ಅಯೋಧ್ಯೆ, ಲಂಕೆ, ಮಲಯ ದ್ವೀಪ, ಸಹ್ಯಾದ್ರಿ, ಕಾಶೀ ಮುಂತಾದ ಸ್ಥಳಗಳಲ್ಲಿ ಆ ಗಿಡಗಳು ಬೆಳೆಯು ವಂತೆಯೂ ಧಾರಕರ ಮಹಾಪಾಪಗಳನ್ನು ಹೋಗಲಾಡಿಸುವಂತೆಯೂ ಮಾಡಿದನು ಎಂದು ಅಲ್ಲಲ್ಲಿ ಕಲ್ಪಭೇದದಿಂದ ಹೇಳಿದೆ. ಇದು ರುದ್ರಾಕ್ಷ ಉತ್ಪತ್ತಿ ಕಥನ.

ದಿವ್ಯವರ್ಷ ಸಹಸ್ರಾಣಿ ಮಹೇಶಾನಿ ಪುನಃ ಪುರಾ ।
ತಪಃ ಪ್ರಕುರ್ವತಸ್ತ್ರಸ್ತಂ ಮನಃ ಸಂಯಮ್ಯ ವೈ ಮಮ ॥ ೫ ॥

ಸ್ವತಂತ್ರೇಣ ಪರೇಶೇನ ಲೋಕೋಪಕೃತಿಕಾರಿಣಾ ।
ಲೀಲಯಾ ಪರಮೇಶಾನಿ ಚಕ್ಷುರುನ್ಮೀಲಿತಂ ಮಯಾ ॥ ೬ ॥

ಪುಟಾಭ್ಯಾಂ ಚಾರುಚಕ್ಷುರ್ಭ್ಯಾಂ ಪತಿತಾ ಜಲಬಿಂದವಃ ।
ತತ್ರಾಶ್ರುಬಿಂದುತೋ ಜಾತಾ ವೃಕ್ಷಾ ರುದ್ರಾಕ್ಷಸಂಜ್ಞಕಾಃ ॥ ೭ ॥

ಸ್ಥಾವರತ್ವಮನುಪ್ರಾಪ್ಯ ಭಕ್ತಾನುಗ್ರಹಕಾರಣಾತ್ ।
ತೇ ದತ್ತಾ ವಿಷ್ಣುಭಕ್ತೇಭ್ಯಶ್ಚತುರ್ವರ್ಣೇಭ್ಯ ಏವ ಚ ॥ ೮ ॥

ಭೂಮೌ ಗೌಡೋದ್ಭವಾಂಶ್ಚಕ್ರೇ ರುದ್ರಾಕ್ಷಾನ್ ಶಿವವಲ್ಲಭಾನ್ ।
ಮಧುರಾಯಾಮಯೋಧ್ಯಾಯಾಂ ಲಂಕಾಯಾಂ
ಮಲಯೇ ತಥಾ ॥ ೯ ॥

ಸಹ್ಯಾದ್ರೌ ಚ ತಥಾ ಕಾಶ್ಯಾಂ ದೇಶೇಷ್ವನ್ಯೇಷು ವಾ ತಥಾ ।
ಪರಾನಸಹ್ಯ ಪಾಪೌಘಭೇದನಾನ್ ಶ್ರುತಿನೋದನಾನ್ ॥ ೧೦ ॥

(ವಿದ್ಯೇ. ಸಂ. ಅಧ್ಯಾಯ ೨೫.).

* * * *

ರುದ್ರಾಕ್ಷಿಗಳು ಮೂವತ್ತೆಂಟು ತೆರನಾಗಿವೆ. ಸತ್ವ-ರಜ-ತಮೋಗುಣ ವಿಶೇಷವು ಅಲ್ಲುಂಟು. ಅವುಗಳ ಮುಖಗಳು ಒಂದರಿಂದ ಹದಿನಾಲ್ಕರವರೆಗೆ.

ರುದ್ರಾಕ್ಷಿಯ ಹಿಂಭಾಗವು ಓಂಕಾರರೂಪ; ಮುಂಭಾಗ ಪಂಚಾಕ್ಷರ

ಸ್ವರೂಪ. ಅದರ ನಾಳವೆ ಭಕ್ತರ ಹೃನ್ನಾಳ; ಅದರ ಸೂತ್ರವೇ ಜ್ಞಾನ ಸೂತ್ರ.

ರುದ್ರಾಕ್ಷ ಮೂಲಮೋಂಕಾರಂ ಮುಖಂ ಪಂಚಾಕ್ಷರಂ ವಿದುಃ |
ತನ್ನಾಲಂ ಭಕ್ತ ಹೃನ್ನಾಲಂ ತತ್ಸೂತ್ರಂ ಜ್ಞಾನಸೂತ್ರವತ್ ||

(ಅನಾದಿ ವೀರಶೈವ ಸಾರಸಂಗ್ರಹೇ—ಸ್ಕಾಂದೋಕ್ತಿಃ)

ಮುತ್ತು, ಹವಳ, ವಜ್ರ ಮುಂತಾದ ಅಮೂಲ್ಯ ರತ್ನಗಳನ್ನು ಜನರು ಎಷ್ಟೊಂದು ಪ್ರೀತಿಯಿಂದ ಧರಿಸುತ್ತಾರೆಯೋ, ಅಷ್ಟೇ ಪ್ರೀತಿಯಿಂದ ರುದ್ರಾಕ್ಷಿಗಳನ್ನು ಧರಿಸುವುದು ಉತ್ತಮ. ರುದ್ರಮುದ್ರಾ ಆಖ್ಯಾತವಾದ ರುದ್ರಾಕ್ಷಿಗಳನ್ನು ಧರಿಸಿಕೊಳ್ಳುವುದಾದರೆ, ಅಂಥವರಿಗೆ ಮಹಾ ರುದ್ರತ್ವ ಕಟ್ಟಿಟ್ಟದ್ದು. ಸೂರ್ಯನುದಯಕ್ಕೆ ಕತ್ತಲೆ ಕಂಪಿಸುವಂತೆ, ಅಣ್ವಸ್ತ್ರಕ್ಕೆ ಗುರಿಯಾದ ಭೂಭಾಗ ಭಸ್ಮೀಭೂತವಾಗಿ ಹೋಗುವಂತೆ – ರುದ್ರಾಕ್ಷ ಧಾರಕನನ್ನು ಕಂಡು ಪೂರ್ವಾರ್ಜಿತ ಕರ್ಮ ಬೆನ್ನು ತೋರಿಸುತ್ತದೆ; ದೂರ ದೂರ ಸರಿಯುತ್ತದೆ. ಮೊದಲೇ ಭಸ್ಮಧಾರಣಾ ಶೀಲಕ್ಕೆ ಹೆದರಿ ದಂಡವತ್ ಪ್ರಣಾಮ ಗೈದಿದ್ದ ಆಣವಮಲ, ಇದೀಗ ಶಿವಭಕ್ತನ ಮೈಮೇಲಿನ ರುದ್ರಾಕ್ಷ ಹಾರವನ್ನು ಕಂಡು—ಹೆದರಿ ಕಂಗೆಟ್ಟು, ನಾಗಾಲೋಟ ಓಡಿ, ವಿಶ್ರಾಂತ ಭಂಗಿಯನ್ನು ಆಶ್ರಯಿಸಿಬಿಡುತ್ತದೆ. ವಿಪುಲತರ ಅರಳೆಯ ಗುಡ್ಡೆಯ ಮೇಲೆ ಸಣ್ಣದೊಂದು ಬೆಂಕಿಯ ಕಡ್ಡಿ ಕುಳಿತರೆ ಏನಾಗುತ್ತದೆ? ಇಲ್ಲೂ ಅದೇ ಪರಿಣಾಮ. ಒಂದೇ ಒಂದು ಸಣ್ಣ ರುದ್ರಾಕ್ಷ ಧಾರಣದಿಂದ ಮಹತ್ತರ ಪಾಪ ರಾಶಿಯ ನಿರ್ಮೂಲನ ಕಾರ್ಯ! ಬಹು ಕಾಲದಿಂದ ಭಾರತೀಯ ಸಂಸ್ಕೃತಿ ಈ ಸಿದ್ಧಾಂತವನ್ನು ಅನುಮೋದಿಸಿದೆ.

ಮುಕ್ತಾ ಪ್ರವಾಲ ಸ್ಫಟಿಕ ರೌಪ್ಯ ವೈಡೂರ್ಯ ಕಾಂಚನೈಃ |
ಧಾರಯೇದ್ಯಸ್ತು ರುದ್ರಾಕ್ಷಾನ್ ಸ ರುದ್ರೋ ನಾತ್ರ ಸಂಶಯಃ|| ೪೩ ||
ಕೇವಲಂ ವಾಽಪಿ ರುದ್ರಾಕ್ಷಾನ್ ರುದ್ರಮುದ್ರಾನ್ ಬಿಭರ್ತಿ ಯಃ |
ತಂ ನ ಸ್ಪೃಶಂತಿ ಪಾಪಾನಿ ತಮಾಂಸೀವ ವಿಭಾವಸುಮ್ || ೪೪ ||

(ಚಂದ್ರ. ಪುಟ ೪೩.)

ಇಷ್ಟವಿದ್ದವರು ೨-೩-೫-೭-೧೦ ರುದ್ರಾಕ್ಷಿ ಸರಗಳನ್ನು ಕೊರಳಲ್ಲಿ ಹಾಕಿಕೊಳ್ಳಬಹುದು. ಕಿರೀಟ, ಕುಂಡಲ, ಪದಕ, ಹಸ್ತಕಡಗಗಳಂತೆ ಆಭ

ರಣ ರೂಪವಾಗಿ ಉಪಯೋಗಿಸಬಹುದು. ನಿದ್ದೆ ಮಾಡುವಾಗಲೂ ಭೋಜನಸಮಯದಲ್ಲೂ ಆವಾವ ಕಾಲದಲ್ಲೂ—ಅನವರತ ರುದ್ರಾಕ್ಷಧಾರಣೆ ಯೋಗ್ಯ.

ದ್ವಿಸರಂ ತ್ರಿಸರಂ ವಾऽಪಿ ಸರಾಣಾಂ ಪಂಚಕಂ ತು ವಾ ।
ಸಪ್ತಕಂ ದಶಕಂ ವಾऽಪಿ ಬಿಭ್ರಯಾತ್ಕಂಠದೇಶತಃ ॥ ೫೨ ॥
ಮಕುಟೇ ಕುಂಡಲೇ ಚೈವ ಕರ್ಣಿಕಾಹಾರಕೇಷು ಚ ।
ಕೇಯೂರ ಕಟಕೇ ಚೈವ ಕಕ್ಷಬಂಧೇ ವಿಶೇಷತಃ ॥
ಸುಪ್ತೇ ಪೀತೇ ಸದಾಕಾಲಂ ರುದ್ರಾಕ್ಷಂ ಧಾರಯೇನ್ನರಃ ॥ ೫೩ ॥

(ಕಾರ. ಪುಟ ೩೦.)

ಎಷ್ಟೆಷ್ಟು ಮುಖದ, ಎಷ್ಟೆಷ್ಟು ರುದ್ರಾಕ್ಷಿಗಳನ್ನು ದೇಹದ ಯಾವ ಯಾವ ಜಾಗಗಳಲ್ಲಿ ಧಾರಣೆ ಮಾಡಿಕೊಳ್ಳಬೇಕು? ಅದರಿಂದಾಗುವ ಪ್ರಯೋಜನವೇನು? ಇದಕ್ಕೆಲ್ಲ ತಕ್ಕ ಸಮಾಧಾನ ಶಿವಾಗಮಗಳಲ್ಲಿ ಇರುತ್ತದೆ.

ಒಂದಿಷ್ಟಾದರೂ ಭಸ್ಮತ್ರಿಪುಂಡ್ರವನ್ನು ಧರಿಸದಿರುವವನ ಜನ್ಮವು ಹೇಗೆ ವ್ಯರ್ಥವೋ ಹಾಗೆಯೇ, ಬಹು ಪುಣ್ಯಪ್ರದವಾದ ಒಂದು ರುದ್ರಾಕ್ಷಿಯನ್ನಾದರೂ ಶರೀರದಮೇಲೆ ಧಾರಣೆ ಮಾಡದಿರುವವನ ಜನ್ಮವು ನಿರರ್ಥಕ. ಅವನಿಗಿದ್ದಿರಬಹುದಾದ ಇನ್ನಿತರ ವಿಶಿಷ್ಟ ಭೋಗಭಾಗ್ಯ ಪ್ರಭುತ್ವವು ಶಿವಸಾಯುಜ್ಯದ ಘನತೆಗೆ ಏರತಕ್ಕುದಲ್ಲ; ಮನಸ್ಸಿಗೆ ಅಖಂಡ ಶಾಂತಿಯನ್ನೀಯತಕ್ಕುದಲ್ಲ; ಕ್ಷಣಿಕ.

ಯಸ್ಯಾಂಗೇ ನಾऽಪಿ ರುದ್ರಾಕ್ಷ ಏಕೋऽಪಿ ಬಹು ಪುಣ್ಯತಃ ।
ತಸ್ಯ ಜನ್ಮ ನಿರರ್ಥಂ ಸ್ಯಾತ್ತ್ರಿಪುಂಡ್ರ ರಹಿತಂ ಯಥಾ ॥

(ಸ್ಕಾಂದೇ, ಶಂಕರಸಂಹಿತಾ.)

ರುದ್ರಾಕ್ಷಗಳನ್ನು ಧರಿಸದಲೆ ಶಿವಪೂಜೆ ಮಾಡಬಾರದು, ಒಂದುವೇಳೆ ಹಾಗೇನಾದರೂ ಮಾಡಿದ್ದಾದರೆ, ಆ ಪೂಜೆ ನಿಷ್ಫಲವೇ ಆದೀತು.

ನಾ ರುದ್ರಾಕ್ಷಧರೇಣ ಪೂಜಿತಮುಮೇ
ಲಿಂಗಂ ನ ಮುಕ್ತಿ ಪ್ರದಮ್ ।

ಕುರ್ವನ್ ತೇನ ವಿವರ್ಜಿತೋತ್ರ ಮನುಜೋ
ನೋ ತಸ್ಯ ವಿಂದೇಶ್ಫಲಮ್ ॥ ೧೮ ॥

(ಶಿ.ರ. ೨೦೦ಶ ೧೦ ಅಧ್ಯಾಯ ೨೫)

ಮುಂಜಾನೆ ಏಳುವುದು, ಶೌಚ, ಸ್ನಾನ, ಭಸ್ಮ, ರುದ್ರಾಕ್ಷ ಧಾರಣ, ಶಿವಪೂಜೆ, ಶಿವಮಂತ್ರ ಜಪ, ಪ್ರಸಾದ ಸೇವನ, ಯೋಗ್ಯತೆಗೆ ತಕ್ಕ ಕಾಯಕ ಪರಿಶ್ರಮ, ಗುರು ಜಂಗಮ ಸೇವೆ-ಸತ್ಕಾರ, ಸ್ವಾಧ್ಯಾಯಾನುಸರಣ, ಎಡರಿನಲ್ಲಿ ಧೃತಿಗುಂದದಿರುವುದು, ದುರ್ವ್ಯಸನಗಳಿಗೆ ಒಳಗಾಗದಿರುವುದು, ಸತ್ಯವನ್ನೆ ನುಡಿಯುವುದು, ಸರ್ವಜೀವ ದಯಾಪರತೆ, ಸಮಕಾಲೀನ ಪ್ರಗತಿ ಪಥದಲ್ಲಿ ನಡೆಯುವುದು—ಇಂಥ ಪವಿತ್ರ ಧರ್ಮದಲ್ಲಿ ನಿರತನಾದವನ ಜೀವನ ಅಮರ. ಆತ ಮೃತ್ಯುಂಜಯ !

ಛಿದ್ರವಾಗದಿರುವ, ಚಿನ್ನದಂತೆ ಹೊಳಪುಳ್ಳ, ಇತರರಿಂದ ಉಪಯೋಗಿಸಲ್ಪಡದ ರುದ್ರಾಕ್ಷಗಳನ್ನು ಧರಿಸಿಕೊಳ್ಳಲು ಶಿವಭಕ್ತರು ಇಷ್ಟಪಡುವರು. ಗಂಡಸರು ಹೆಂಗಸರು ಮಕ್ಕಳು ಕೂಡ ಯಾವಾಗಲೂ ರುದ್ರಾಕ್ಷಿಗಳಿಂದ ಅಲಂಕೃತರಾಗಿರಲು ಬಯಸುವರು. ರುದ್ರಾಕ್ಷ ಧಾರಣೆಗೆ ವರ್ಣಾಶ್ರಮದ ಕಟ್ಟುಕಟ್ಟಳೆ ಅಡ್ಡಿಬರುವುದಿಲ್ಲ. ಸದಾಚಾರ ನಿಷ್ಠರು ಹೆಚ್ಚೆಚ್ಚು ರುದ್ರಾಕ್ಷಿಗಳನ್ನು ಸದಾ ಧರಿಸಿಕೊಳ್ಳುವುದಾದರೆ ಅದರಿಂದ ಮಹತ್ಫಲವುಂಟು. ಅದು ಚಿದಂಗಕ್ಕೆ ಒಪ್ಪುವ ಒಡವೆ.

ಅಚ್ಛಿದ್ರಂ ಕನಕಪ್ರಖ್ಯಮನನ್ಯಧೃತ ಮುತ್ತಮಮ್ ।
ರುದ್ರಾಕ್ಷಂ ಧಾರಯೇತ್ ಪ್ರಾಜ್ಞಃ ಶಿವಪೂಜಾ ಪರಾಯಣಃ ॥ ೫೧ ॥
ಸರ್ವೇಷು ವರ್ಣಾಶ್ರಮ ಸಂಗತೇಷು
ನಿತ್ಯಂ ಸದಾಚಾರ ಪರಾಯಣೇಷು ॥
ಶ್ರುತಿಸ್ಮೃತಿಭ್ಯಾಮಿಹ ಚೋದ್ಯಮಾನೋ
ವಿಭೂತಿ ರುದ್ರಾಕ್ಷಧರಃ ಸಮಾನಃ ॥ ೬೬ ॥

(ಸಿ. ಶಿ. ಪರಿ ೭.),

ರುದ್ರಾಕ್ಷಮಾಲಾಭರಣಾ ಅಂತ್ಯಜಾ ಅಧಮಾ ಅಪಿ ।
ಸದಾ ಸರ್ವತ್ರ ಸಂಪೂಜ್ಯಾಃ ಸರ್ವೈರಪಿ ನ ಸಂಶಯಃ ॥

(ಅನಾದಿ ಪ್ರಕರಣ ೧.).

ರುದ್ರಾಕ್ಷ ತಾನೆ ಚಿನ್ನಾದಮಯ ಗುರುರೂಪು
ರುದ್ರಾಕ್ಷ ಮುಖವೆ ಚಿದ್ ಬಿಂದುಮಯ ಲಿಂಗಗಳು
ರುದ್ರಾಕ್ಷ ವದನ ಪುಷ್ಪದೊಳೊಪ್ಪುತಿಹ ನಾಳ ಚಿತ್ಕಳಾಮಯ ಜಂಗನು ||
ರುದ್ರಾಕ್ಷ ಪೂರಿತದ ಸೂತ್ರ ಚಿನ್ಮಯ ಭಕ್ತ
ನಿರ್ಧರದೊಳಿಂತು ಚತುರ್ವಿಧ ಚಿತ್ ಸ್ವರೂಪಾದ
ರುದ್ರಾಕ್ಷಗಳೆ ಚಿದಂಗಾಭರಣವಾಗಿರ್ಪ ಶರಣರಿಂಗೆಣೆಗಾಣೆನು || ೨೮ ||

(ವೀರಶೈವ ಷಟ್‌ಸ್ಥಲ ಸಿದ್ಧಾಂತ, ಪ್ರಕರಣ–೧.)

* * * *

ಈಗ ರುದ್ರಾಕ್ಷಿಯ ಸ್ವರೂಪ ಸತ್ತ್ವಿಯನ್ನು ಕುರಿತ ವಿಚಾರವಾಣಿ, ಸ್ವಲ್ಪ ಮಟ್ಟಿಗೆ :—

ಮುನ್ನ ಈರೇಳು ಭುವನಗಳಿಗೆ ಶುಭವೀಯಲು ಮಹಾದೇವನು ಸಂಕಲ್ಪಿಸಿದನು ಅದರ ಸಂಕೇತವಾಗಿ ರುದ್ರಾಕ್ಷಿಗಳು ಜನಿಸಿದುವು. ಆತ್ಮಾನಂದದ ಆಸ್ವಾದನೆಗಾಗಿ, ಲಿಂಗ ಭಕ್ತತ್ವ ಸಂಸಿದ್ಧಿಗಾಗಿ ಭಕ್ತರು ಅದನ್ನು ಧರಿಸಿ ಫಲ ಪಡೆದರು. ರುದ್ರತೇಜ ಸಂಪನ್ನರಾದರು—ಎಂದು ಈ ವರಿವಿಗೂ ಹೇಳಿದುದರ ಯೌಗಿಕಾರ್ಥ :—

ನಿರಾಕಾರ ಸದಾಶಿವನಿಗೆ ಕರ್ಮಸಂಬಂಧ ಸುಖದುಃಖ ಭೋಗಾನುಭವ ಹೇಗೆ ಬಂತು? ಎಲ್ಲವನ್ನೂ ಅನುಗ್ರಹಿಸಬಲ್ಲ ಶಿವನು ಕೆಲವು ಸಂದರ್ಭಗಳಲ್ಲಿ ನಿಗ್ರಹ ಕೃತ್ಯಕ್ಕೇಕೆ ಕೈ ಹಾಕಬೇಕು? ಎಂಬ ಸಂದೇಹ ಯಾರ ಮನಸ್ಸಿಗೂ ಹತ್ತುವುದು ಬೇಡ.

ತೇಪಿ ಲೋಕಹಿತಾಯೈವ ಕೃತಾಃ |

ಶಂಕರನ ಲೀಲಾ ವಿಶೇಷವೆಲ್ಲವೂ ಲೋಕಗಳ ಹಿತಕ್ಕಾಗಿಯೇ ನಡೆದಿರುವುವು. ನಿಗ್ರಹವೂ ಕೂಡ ಅನುಗ್ರಹದಷ್ಟೇ ಆವಶ್ಯಕ. ತಪ್ಪು ಮಾಡಿದವರು ತನಗೆ ಸ್ವಕೀಯರೇ ಆದಾಗ್ಯೂ ಅವರು ನಿಗ್ರಹಕ್ಕೆ ಅರ್ಹರು. ನಿಗ್ರಹಾನುಗ್ರಹ ಕರ್ತವ್ಯದಲ್ಲಿ ಈಶ್ವರನಿಗೆ ಪಕ್ಷಪಾತವೆಂಬುವುದಿಲ್ಲ. ಪಕ್ಷಪಾತವಿರುತ್ತಿದ್ದರೆ ಅವನು ಲೋಕೇಶ್ವರನೆಂದು ಹೇಗೆ ಪ್ರಸಿದ್ಧನಾಗುತ್ತಿದ್ದನು? ಎಂಬ ಸಮಾಧಾನ ಸದ್ಯಕ್ಕೆ ಸಾಕು.

ಸದೋಷಾ ಏವ ದೇವಾದ್ಯಾ ನಿಗೃಹೀತಾ ಯಥೋದಿತಂ ।
ತತಸ್ತೇಽಪಿ ವಿಪಾಪ್ಮಾನಃ ಪ್ರಜಾಶ್ಚಾಪಿ ಗತಜ್ವರಾಃ ॥ ೨೫ ॥

ನಿಗ್ರಹೋಽಪಿ ಸ್ವರೂಪೇಣ ವಿದುಷಾಂ ನ ಜುಗುಪ್ಸಿತಃ ।
ಅತ ಏವ ಹಿ ದಂಡ್ಯೇಷು ದಂಡೋ ರಾಜ್ಞಾಂ ಪ್ರಶಸ್ಯತೇ ॥ ೨೬ ॥

ಯತ್ಸಿದ್ಧಿರೀಶ್ವರತ್ವೇನ ಕಾರ್ಯವರ್ಗಸ್ಯ ಕೃತ್ಸ್ನಶಃ ।
ನ ಸ ಚೇದೀಶತಾಂ ಕುರ್ಯಾಜ್ಜಗತಃ ಕಥಮೀಶ್ವರಃ ॥ ೨೭ ॥

ಈಶೇಚ್ಛಾ ಚ ವಿಧಾತೃತ್ವಂ ವಿಧಿರಾಜ್ಞಾಪನಂ ಪರಂ ।
ಆಜ್ಞಾವಶ್ಯಮಿದಂ ಕುರ್ಯಾನ್ನ ಕುರ್ಯಾದಿತಿ ಶಾಸನಂ ॥ ೨೮ ॥

(ವಾ. ಸಂ ಪೂರ್ವ ಭಾಗ. ಅಧ್ಯಾಯ ೩೧.)

ಸಕಲ ನಿಷ್ಕಲ ಭಾವದಿಂದಿರುವ ಅನಾದಿ ರುದ್ರನಾದರೋ ತನಗುಳ್ಳ ಇಚ್ಛಾ–ಕ್ರಿಯಾ– ಜ್ಞಾನಶಕ್ತಿ ಕರಣದಿಂದ ಮರ್ತ್ಯದ ಸಮಸ್ತ ಜೀವಿಗಳಿಗೆ ಬಗೆಬಗೆಯ ಐಶ್ವರ್ಯವನ್ನು ಕರುಣಿಸುವನು ; ಸಂಮ್ಮೋದ ಶ್ರೀಯನ್ನು ದಯಪಾಲಿಸುವನು. ದೇವಲೋಕದ ಮೇಲ್ಮಟ್ಟದ ಆಧಿಕಾರಿಯು ಅವನೇ ಆಗಿದ್ದಾನೆ. ಅರ್ಥಾತ್ ವಿಶ್ವ ಪ್ರಭುತ್ವದಿಂದ ದಿವ್ಯಾತ್ಮರನ್ನೆಲ್ಲ ಈಕ್ಷಿಸುವ ಮಹಾ ಪ್ರಭು–ಅವನು. ಮತ್ತು, ಸ್ವರ್ಗ ಮರ್ತ್ಯಗಳ ಕಲ್ಯಾಣ ಕಾರಕ ವ್ಯವಹಾರವನ್ನು ನಿಯಮಿಸುವುದರಲ್ಲಿ ನಿಯಂತ್ರಿಸುವುದರಲ್ಲಿ ಅವನು ಚತುರನು. ಎಲ್ಲ ಜೀವರುಗಳನ್ನು ಪೀಡಿಸುತ್ತಿರುವ ನಾನಾವಿಧ ರೋಗ ಗಳನ್ನು ನಿವಾರಣೆ ಮಾಡುವುದರಲ್ಲೂ ಭವದುಃಖದ ಹುಟ್ಟನ್ನು ಸಂಪೂರ್ಣ ವಾಗಿ ತೊಡೆದು ಹಾಕುವುದರಲ್ಲೂ ಅವನು ಬಹು ಕುಶಲನು.

ಸ ಹಿ ಕ್ಷಯೇಣ ಕ್ಷಮ್ಯಸ್ಯ ಜನ್ಮನಃ
ಸಾಮ್ರಾಜ್ಯೇನ ದಿವ್ಯಸ್ಯ ಚೇತತಿ ।
ಅವನ್ನವಂತೀರುಪ ನೋ ದುರಶ್ಚರಾ—
ನಮೀವೋ ರುದ್ರ ಜಾಸು ನೋ ಭವ ॥ ೨ ॥

ಯಾ ತೇ ದಿದ್ಯುದವಸೃಷ್ಟಾ ದಿವಸ್ಪರಿಕ್ಷ್ಮಯಾ
ಚರತಿ ಪರಿ ಸಾ ವೃಣಕ್ತು ನಃ ।

ಸಹಸ್ರಂ ತೇ ಸ್ವಪಿ ವಾತಭೇಷಜಾ
ಮಾನ ಸ್ತೋಕೇಷು ತನಯೇಷು ರೀರಿಷಃ ॥ ೩ ॥

(ಋಕ್ ಸಂ. ೭/೩/೪೬)

ಅಂಥ ಸರ್ವ ಸೌಭಾಗ್ಯ ಸಂವರ್ಧನ ಚರಿತನಾದ ಶ್ರೀರುದ್ರನ ಒಲುಮೆಗಾಗಿ ಕಾತರಿಸುವ ಉಪಾಸಕ ತನುವು ರುದ್ರ ತನುವಾಗುತ್ತದೆ ; ಮನವು ರುದ್ರ ಮನವಾಗುತ್ತದೆ; ಭಾವವು ಮಹಾರುದ್ರನಲ್ಲಿ ಲಿಪ್ತವಾಗುತ್ತದೆ ಎಂಬುದು ಶಿವ ಸಿದ್ಧಾಂತದ ಭಾಷೆ.

ಒಟ್ಟಿನಲ್ಲಿ—ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ, ಅಭಿನಿವೇಶ ಹಾಗೂ ಕ್ಲೇಶರೂಪ ದೈತ್ಯಸ್ವಭಾವವು—ಸಾಧಕ ದೇಹ, ಚಿತ್ತ ಜೀವಾತ್ಮರ ಮೇಲೆ ಧಾಳಿಮಾಡದಂತಾಗಬೇಕು. ಸಾಧಕನು ಕೈಕೊಂಡ ಇಂದ್ರಿಯ ಸಂಯಮ, ಹೃದಯ ಸ್ವಚ್ಛತೆ, ಮತ್ತು ಲೋಕ ಸಂಗ್ರಹ—ಈ ಮೂರು ಬಗೆಯ ಮಹಾವ್ರತಗಳು ಪೂರ್ತಿಯಾಗಿ ಉದ್ಯಾಪನೆ ನಡೆಯಬೇಕು. ಶಾಂತಿಸಾಗರದಂತೆ ಅಗಾಧ ಅನುಪಮ ಅತಿಗಂಭೀರ ತಾದಾತ್ಮ್ಯ ಆ ವ್ರತದ ಬಲದಿಂದ ಅವನಿಗೆ ದೊರಕೊಳ್ಳಬೇಕು. ವೈಯಕ್ತಿಕ, ಸಾಮಾಜಿಕ, ರಾಷ್ಟ್ರಿಕ ಈ ಎಲ್ಲ ಅಂಗದಲ್ಲೂ ಸಮಗ್ರ ಶಾಂತಿ ಕಂಗೊಳಿಸಬೇಕು ಎನ್ನುವ ಆಸೆಯಿಂದ ಪವಿತ್ರ ರುದ್ರಾಕ್ಷಗಳ ಪೂಜೆ-ಧಾರಣೆ ಮುಂತಾದ ಕರ್ತವ್ಯಗಳು. ಇಂಥ ಕರ್ತವ್ಯನಿಷ್ಠೆಯಾದರೂ ಪರಮಶಿವನ ದಯೆಯಿಂದಲೇ ಹುಟ್ಟಿ ವಿಸ್ತರಿಸಿ, ಸ್ಥಿರವಾಗಬೇಕು. ಅದುವೇ ಜೀವಿಯ ಪೂರ್ವ ಪುಣ್ಯದ ಉದಯ; ಸುಕೃತ ವಿಶೇಷ !

ಅಸ್ಮಿನ್ ಮಹತ್ಯರ್ಣವೇಽಂತರಿಕ್ಷೇ ಭವಾ ಅಧಿ ।
ನೀಲಗ್ರೀವಾಶ್ಶಿತಿಕಂಠಾಶ್ಶರ್ವಾ ಅಧಃ ಕ್ಷಮಾಚರಾಃ ॥

(ತೈತ್ತಿ. ಸಂ. ೪/೫/೧೧/೨೬)

ಯಾವ ಸಪ್ತ ಮಹಾ ಸಾಗರಗಳಲ್ಲಿ, ಅಂತರಿಕ್ಷದಲ್ಲಿ, ಸಮಸ್ತ ಪ್ರಾಣಿಗಳ ಅಂತರಾಳದಲ್ಲಿ, ಪಾತಾಳ ಲೋಕದಲ್ಲಿ, ದಿಗಂತದ ತುಂಬಾ ಎಲ್ಲೆಲ್ಲೂ ಸತ್ಯ ಸ್ವರೂಪನಾಗಿ ಬೆಳ್ಳನೆ ಬೆಳಗುತ್ತಿರುವನೋ ಆ ರುದ್ರದೇವನ ಸರ್ವತೋಭಾವ ಸರ್ವತೋಚಕ್ಷು ಲಕ್ಷಣವನ್ನು ಮಾನವನು ಅಚ್ಚುಗಟ್ಟಾಗಿ

ತಿಳಿದುಕೊಳ್ಳಬೇಕು. ನೀಲಕಂಠ, ಶರ್ವ, ಕಪರ್ದಿ, ವೃಷಭಧ್ವಜ, ತ್ರಿಪು ರಾರಿ—ಇತ್ಯಾದಿ ಅಸಂಖ್ಯ ಹೆಸರುಗಳನ್ನು ಕಾರ್ಯಾನುಸಾರವಾಗಿ ಧರಿಸಿ ಮೆರೆಯುವ ಆ ಮೂಲ ಚೈತನ್ಯದ ಉಪಾಸನೆಯಿಂದ ಚತುರ್ವಿಧ ಪುರು ಷಾರ್ಥ ಸಿದ್ಧಿಯಾಗುವುದಕ್ಕೆ ಪ್ರತಿಯಿಲ್ಲ.

ಅದೇ ಆ ರುದ್ರ ಶಕ್ತಿಯೆಂದೆಂಬ—ರುದ್ರಾಕ್ಷಧಾರಣೆಯೆಂದೆಂಬ ಹರಿ ಗೋಲನೇರಿ, ಸದ್ಭಕ್ತಿ, ಸತ್ಕ್ರಿಯೆ, ಶಿವಜ್ಞಾನ ವೀಧಿಯಲ್ಲಿ ನಡೆದು ಮುಂದುವರಿಯೆ; ದಿಟವಾಗಿ ಭವಾಂಬುಧಿಯನ್ನು ದಾಟಬಹುದು. ಹಮ್ಮು ಬಿಮ್ಮು ಅಷ್ಟಮದ ವಿಕಾರರೂಪ ಕ್ರೂರ ಜಲಚರದ ಭೀಕರ ಧ್ವನಿಗೆ ಹೆದರದೆ, ಮನದ ಶಿವಶಕ್ತಿಯ ಧ್ಯಾನದಿಂದ ಪರಾಙ್ಮುಖನಾಗದೆ ಸ್ಥಿರಗತಿಯಿಂ ಚರಿಸಿ ಉನ್ಮನಿಯನೇರಿದಾತಂಗೆ ಇನ್ನಾವ ವಿಪ್ರಪತ್ತಿಗಳು ಎದುರುಬಿದ್ದಾವು? ಇನ್ನಾವ ವಿಪರ್ಯಾಸ (ವ್ಯತಿಕ್ರಮ ಸ್ವಭಾವ) ಕಾಡೀತು—ಶಿಖಾಮಂಡಲದ ಆ ಅಮೃತಾಹಾರಿಯನ್ನು?

ಶುಭಕ್ಕೆ ಶುಭ, ಮಾಂಗಲ್ಯಕ್ಕೆ ಮಾಂಗಲ್ಯವಾಗಿ ಪರಿಶೋಭಿಸುವ ಅರೆದೆರೆದ ರುದ್ರಾಕ್ಷಾವಲೋಕನದ ಆ ಉದಾತ್ತ ಸ್ಥಿತಿ ಏಕೇಶ್ವರಾನುಗ್ರಹ ಪ್ರೇಮಿಗಳೆಲ್ಲರಿಂದಲೂ ಆದರಣೀಯ—ಆಲಿಂಗ್ಯನೀಯ ಅಲ್ಲವೇ?

* * * *

ಳ

ಶಿವಾತ್ಮವಿದ್ಯೆಯ ಅಭಿವೃದ್ಧಿಯನ್ನು ಬಯಸಿದ ಲಿಂಗಧಾರಿಯು ವಿಭೂತಿ ರುದ್ರಾಕ್ಷ ಸಂಯುಕ್ತನಾಗಬೇಕು. ಜೊತೆಗೆ ಶಿವಮಂತ್ರ ಜಪ ನಿಷ್ಠನೂ ಆಗಬೇಕು. ಹಾಗಿದ್ದರೇನೇ ಅವನು ಶಿವಭಕ್ತನು ಎಂದು ಮಹಾ ಚಾರ್ಯರು ಉಪದೇಶಿಸಿದರು.

ಭೂತಿರುದ್ರಾಕ್ಷಸಂಯುಕ್ತೋ ಲಿಂಗಧಾರೀ ಸದಾ ಶುಚಿಃ |
ಪಂಚಾಕ್ಷರಜಪೋದ್ಯೋಗೀ ಶಿವಭಕ್ತ ಇತಿ ಸ್ಮೃತಃ ||೧||

(ಸಿ.ಶಿ. ಪರಿ-೯

ಲೋಕ ಜೀವನಕ್ಕೆ ಪೃಥ್ವಿ ಮತ್ತು ಅಪ್ಪುವಿನ ಆಶ್ರಯ ಎಷ್ಟಿದ್ದರೆ ತಾನೆ ಏನು ... ಯೋಗವಿಲ್ಲದ ... ಜೀವಿಯ ಉಳಿ

ಕಾಲವೇ ಇಲ್ಲ. ಇಲ್ಲಿಯೂ ಹಾಗೆಯೇ. ಪೃಥ್ವಿತತ್ತ್ವ ನಿಯಮವಾದ ಭಸ್ಮ, ಜಲತತ್ತ್ವ ನಿಯಮವಾದ ರುದ್ರಾಕ್ಷ—ಇವೆರಡರ ಕಾರ್ಯಕಾರಣ ಧರ್ಮವನ್ನು ಸ್ಪಷ್ಟವಾಗಿ ಉಪಾಸನ ಮಾಡಿದರೂ ಕೂಡ, ಮೂರನೆಯದಾದ ತೇಜಸ್ಸಿನ ಅನುಭವ ಪಡೆಯದೆ ಹೋದರೆ—ತತ್ಪೂರ್ವ ಶಿವಧರ್ಮದ ಸೂಕ್ಷ್ಮಭಾಗದ ಪರಿಚಯ ಸಾಧಕನಿಗೆ ಆಗುವುದೇ ಇಲ್ಲ. ಅಂತ ಬಳಿಕ ತೇಜಸ್ತತ್ತ್ವಧರ್ಮವನ್ನು (Energy of Oxygen) ಪ್ರತಿಪಾದಿಸುವ ಮಂತ್ರಸಾಧನಾ ವಿವೇಚನೆ, ಈಗ ಈ ನಾಲ್ಕನೆಯ ಪ್ರಕರಣದಲ್ಲಿ ಸಾಮಾನ್ಯವಾಗಿ ಆಗುವುದು.

ಪ್ರಾರಂಭದಲ್ಲಿ ಮಂತ್ರವೆಂದರೇನು ? ಎಂಬ ವಿಷಯ ನಿರೂಪಣ—
ಮನನತ್ರಾಣ ರೂಪತ್ವಾನ್ಮಂತ್ರ ಇತ್ಯಭಿಶಬ್ದಿತಃ |
(ಸೂ. ಸಂ. ಯಜ್ಞವೈಭವಖಂಡ ಅಧ್ಯಾಯ ೪.

' ಮನನಾತ್ತತ್ತ್ವಪದಸ್ಯ ತ್ರಾಯತೇ ' ಇತಿ ತಾತ್ಪರ್ಯ ದೀಪಿಕಾ ವ್ಯಾಖ್ಯಾ ||

ಜಗತ್ಪತಿಯ ಪೂರ್ಣದಯೆ ತನ್ನ ಕಡೆಗೆ ಹರಿದು ಬರಬೇಕು ; ತನ್ನ ಬಾಳು ಹೊನ್ನಬಾಳಾಗಿ ಎಲ್ಲರಿಂದ ಮರ್ಯಾದಿಸಲ್ಪಡಬೇಕು ; ತನ್ನ ಮನದಾಸೆ ಮಲ್ಲಿಗೆಯಂತೆ ಕುಡಿಯಿಟ್ಟು ಹೂಗಟ್ಟಬೇಕು ; ತನ್ನ ನೆನಪಿನ ಈ ಲೋಕ—ಆ ಲೋಕಗಳ, ಭೋಗ-ಮೋಕ್ಷ ಫಲ ಪದವಿರೂಪ ಚಟುವಟಿಕೆಗಳ ಸಸಿ, ಸಸಿನೆ ನೇರವಾಗಿ ಬೆಳೆದು ಚಿಗುರೊಡೆದು—ತನಗೊಬ್ಬನಿಗೇ ಅಲ್ಲದೆ ವಿಶ್ವದ ಸ್ಥಾವರ ಜಂಗಮಕುಲಕ್ಕೆ ಪ್ರಿಯತರವಾದ ತಂಬೆಲರ ನೀಡಬೇಕು ; ದುಃಖದ ಸೋಂಕೇ ಇಲ್ಲದ ಪರಿನಿರ್ವಾಣ ಸುಸ್ಥಿತಿ ಎಲ್ಲರ ಪಾಲಿಗೂ ದಕ್ಕಬೇಕು—ಹೀಗೆಂದು ಸ್ವಯಂ ಜಾಗೃತ ಮನುಷ್ಯನು ಅಪೇಕ್ಷಿಸುತ್ತಾನೆ.

ಹೀಗೆ ಎಲ್ಲವೂ ಆದರೆ ತಾನೇ ತನ್ನಬಾಳಿಗೆ ಉಳಿಗಾಲವೆಂದುಕೊಳ್ಳುತ್ತಾನೆ ; ಕನವರಿಸುತ್ತಾನೆ. ಉದ್ದೇಶ ಸಿದ್ಧಿಯಾಗುವವರೆವಿಗೂ ತನ್ನ ಮನಸ್ಸು ಹೊಸ ರೇಡಿಯೋ ಯಂತ್ರದಂತೆ ಕೆಲಸಮಾಡುತ್ತಾ ಹೋಗಲು ಅವಕಾಶ ಮಾಡಿಕೊಡುತ್ತಾನೆ. ಭಾವಾಭಿವ್ಯಕ್ತ ಕರಣಶಕ್ತಿಯ ಮಿಡಿತ

ಅಡಗಿ, ಮನಸ್ಸಿನ ಅಲೆತ ನಿಂತ ಮರುಗಳಿಗೆಯಲ್ಲಿ ತೀರ್ವಾನಕ್ಕೆ ಬರುತ್ತಾನೆ: ಭೌತಿಕವೆಲ್ಲವೂ ತಾತ್ತ್ವಿಕದ ಪರಿವೇಧನೆಯೇ ಸರಿಯೆಂದು, ಪರಿಷ್ಕೃತ ಮನವು ಮೂಲ ಶಿವತೇಜವನ್ನು ಸೇರಿ, ಅದರ ದಿವ್ಯ ಪರಿಸರದಲ್ಲಿ ಕೂಡಿಹೋಗಿ ಪ್ರಶಾಂತವಾಯಿತೆಂದರೆ—ಅದುವೇ ತನ್ನ ಪರಮಸುಖದ ಸಮಯವೆಂದು ಆತ ನಿಶ್ಚಯಿಸಿಕೊಳ್ಳುತ್ತಾನೆ. ಆ ನಿಶ್ಚಯ, ಸತ್ಯಸ್ಯ ಸತ್ಯ !

## ಈಗ ಮನಸ್ಸಿನ ಪರಿಷ್ಕಾರದ ದೃಷ್ಟಿ

ಯಾವ ಯಾವುದೋ ಜನ್ಮಾಂತರದ ದುಷ್ಟವಾಸನೆಯಿಂದ ಆವೃತ ನಾಗಿ ತನ್ನತನದ ನಿಜಾಂಶವನ್ನು ಮರೆತು ಕೇವಲ ಮಣ್ಣು ಮುದ್ದೆಯಾಗಿ ಬಿದ್ದಿದ್ದ ಪ್ರಾಣನು; ಇದೀಗ ಪೃಥಿವ್ಯಾದಿ ಪಂಚಪ್ರಕೃತಿಗಳ ಕರ್ತೃಲಕ್ಷಣ ವನ್ನೂ ಸದ್ಯೋಜಾತಾದಿ ಪಂಚ ಚೈತನ್ಯ ಪ್ರಜ್ಞಾತತ್ತ್ವವನ್ನೂ

ವಿಜ್ಞಾನಂ ಯಜ್ಞಂ ತನುತೇ,
ಕರ್ಮಾಣಿ ತನುತೇಪಿ ಚ ।

ಎಂಬೀ ಶ್ರುತಿಪ್ರಮಾಣದಿಂದ ನಿಶ್ಚಯಿಸಿ ; ಅಂತಹ ಅರಿವಿಗೆ ಆಧಾರವಾದ ಧರ್ಮ-ಕರ್ಮ-ಗುಣಗಳಲ್ಲಿ ಅಭಿಮಾನವುಳ್ಳವನಾಗಿ ಬದುಕುತ್ತಾನೆಂದರೆ—

ಅಂಥ ಕೆಲಸಕ್ಕೆ ಉತ್ಸಾಹಯುತವಾದ ಹೃದಯವಿರಬೇಕು ; ಸಂಪ್ರ ದಾಯಬದ್ಧ ಉಪಾಸನಾಶಕ್ತಿ ಇರಬೇಕು. ಹುರುಪಿನಿಂದ ಕೂಡಿದ ಬುದ್ಧಿ ಬೇಕು. ಎಂದರೇನೇ—ದೈವೀ ರಹಸ್ಯವನ್ನು ಕುರಿತು ವಿಚಾರಿಸುವ ಆಸಕ್ತಿ ಅವನಿಗೆ ಒದಗಿ ಬಂದೀತು; ಮನಸ್ತತ್ವಕ್ಕೆ ಆಶ್ರಯೀಭೂತವಾದ ಆಜ್ಞಾಚಕ್ರ ವಿಸ್ಫುಟವಾಗಿ ಪ್ರಕಾಶಿಸಲಾರಂಭಿಸೀತು ; ಮನೋರಥ ಸರಿಯಾಗಿ ಚಲಿಸಿ– ನಡೆದು ಗುರಿ ತಲುಪೀತು ; ಪೂರ್ವಪುಣ್ಯ—ಪುಣ್ಯವಾಗಿಯೇ ಉಳಿದೀತು. ಈ ಪರಿಯಲ್ಲಿ ವರ್ತಿಸಿ—ತನ್ನ ಮನಸ್ಸನ್ನೇ ಜಯಿಸಲಾರದ ಮಾನವ, ಇಡೀ ಜಗತ್ತನ್ನೇ ಜಯಿಸಿ ಫಲವೇನು ?

ಅಂದಮೇಲೆ, ಹೃದಯ–ಮನಸ್ಸು–ಚಿತ್ತ–ಬುದ್ಧಿ ವಿಕಸನ ಸರ್ವಸ್ವಕ್ಕೂ, ಇಹ-ಪರ ಅಭ್ಯುದಯ ನಿಃಶ್ರೇಯಸ ಪ್ರಕ್ರಿಯೆಯಷ್ಟಕ್ಕೂ ಕಾರಣವಾದ ಸಾಧಕನ ದಿನಚರಿ–ನಿರೀಕ್ಷೆ ಹೇಗಿರಬೇಕು ? ಇದಕ್ಕೆ ಒಂದೇ ಒಂದು ವಾಕ್ಯ ದಲ್ಲಿ ಉತ್ತರ :

ಮಾನವನು ಉತ್ತಮ ಮಟ್ಟದ ನಾಗರಿಕನೆಂದೆನ್ನಿಸಿಕೊಳ್ಳಬೇಕಾಗಿದ್ದರೆ—ಅದಕ್ಕೆ ತಕ್ಕಂತೆ ಶುದ್ಧವಾದ ವಾಯು, ಆವಶ್ಯಕ ಅನ್ನಾಂಗಗಳು ಬೆರೆತ ಪುಷ್ಟಿಕರ ಆಹಾರ, ನಿರ್ಮಲವಾದ ನೀರು, ಪ್ರಶಾಂತ ವಾತಾವರಣ–ವಸತಿ, ದೈಹಿಕ–ಮಾನಸಿಕ ವ್ಯಾಯಾಮ-ವ್ಯವಸ್ಥೆ ಇವೆಲ್ಲವನ್ನೂ ಹೇಗೆ ಅಣಿಗೊಳಿಸಿಕೊಳ್ಳಬೇಕೋ ಅದೇಪ್ರಕಾರ,—ಪ್ರಗತಿಪರ ಲೌಕಿಕ-ಪಾರಲೌಕಿಕ ಶರಣಜೀವನ ವ್ಯವಸ್ಥಾತ್ಮಕ ಸಚ್ಛೀಲ, ಸತ್ಕರ್ಮಾಚರಣೆ ಮತ್ತು ಆತ್ಮಸಂವಿದ್‌ಯೋಗ—ಈ ಮೂರು ಬಗೆಯ ಅನುಕೂಲಗಳನ್ನೂ ಅವನು ಒದಗಿಸಿಕೊಳ್ಳಲೇಬೇಕು. ಇಲ್ಲವಾದರೆ ಅವನು ಪರಿಪೂರ್ಣ ನಾಗರಿಕನಾಗಲಾರನು; ಪೂರ್ಣಪ್ರಜ್ಞನಾಗಲಾರನು; ಭಗವತ್ಕಾರ್ಯ ಸಾಧಕನಾಗಲಾರನು, ಕೃತಕೃತ್ಯನಾಗಲಾರನು.

ಅಭಿಹಿತ ಶೀಲ-ಕರ್ಮ-ಯೋಗ ಈ ಮೂರಕ್ಕೆ ಕ್ರಮವಾದ ವೀರಶೈವ ಪಾರಿಭಾಷಿಕ ಶಬ್ದಗಳು ಪಂಚಾಚಾರ–ಅಷ್ಟಾವರಣ ಮತ್ತು ಷಟ್‌ಸ್ಥಲಾಭ್ಯಾಸ. ಸಾಧಕನು ಶ್ರದ್ಧೆಯಿಂದ, ಮಮತೆಯಿಂದ ಈ ಮೂರನ್ನೂ ಸಂಪಾದಿಸಬೇಕು. ಏಕಮುಖವಾಗಿ ಸಂಪಾದಿಸಿ ಶಿವದಲ್ಲಿ ಏಕರಸವಾಗಬೇಕು. ಆಗ ಪ್ರಪಂಚ-ಪರಮಾರ್ಥ ಅಭೇಧ ದರ್ಶನ; ಅನಿವಾರ್ಯ.

ಮುಖ್ಯವಾಗಿ, ಶಿವಮಂತ್ರಾನುಸಂಧಾನ ಪ್ರಭಾವದಿಂದ ಅರ್ಥಾತ್ ಶಿವತತ್ತ್ವಾನುಭವ ಬಲದಿಂದ, ವೀರಶೈವನು ಸಮಸ್ತ ಉಪಾಧಿ ವಿರಹಿತ ದ್ವಂದ್ವಾತೀತ ವಿಹಾರ ಪರಾಕಾಶಕ್ಕೆ ಏರುತ್ತಾನೆ; ಮರ್ತ್ಯ–ಅಮರ್ತ್ಯಗಳ ಓತಪ್ರೋತ ಸಂಗಮಕ್ಷೇತ್ರದಲ್ಲಿ ಅತಿಜಾಣ್ಮೆಯಿಂದ ಒಗೆತನ ಮಾಡುತ್ತಾನೆ; ಪರಮಾನಂದದ ಧ್ರುವತಾರೆಯಾಗುತ್ತಾನೆ.

ಚಿದಾನಂದ ಪರಾಕಾಶ ಶಿವಾನುಭವಯೋಗತಃ । ಇತಿ ॥

(ಸಿ.ಶಿ. ಪರಿ—೧

* * * *

ನಮ್ಮ ಪೂರ್ವಾಚಾರ್ಯ ಮಹಾಕವಿ ಷಡಕ್ಷರದೇವನ ಕಾವ್ಯವಸ್ತು—ರಾಜಶೇಖರ ಮತ್ತು ವಿತವಚನ ಈ ಇಬ್ಬರೂ ಸಾಂಪ್ರದಾಯಿಕ ಶಿವದೀಕ್ಷಾ ಸಂಸ್ಕಾರ ಪಡೆಯುತ್ತಾರೆ; ಸದ್ಗುರು ಚಿದ್ಘನಶಿವಾಚಾರ್ಯರ ಮಂಗಳ ಪಾದ

ಪದ್ಮಗಳಿಗೆ ಎರಗುತ್ತಾರೆ; 'ಜಯ ಜಯ' ಧ್ವನಿಪೂರ್ವಕ ಸ್ತುತಿಸುತ್ತಾರೆ. ಆ ಪ್ರಸ್ತಾವದೊಳು ಸಂತುಷ್ಟಚಿತ್ತನಾದ ಗುರುದೇವನ ಮುಖದಿಂದ—

"ಯೌಗಿಕರು ಪ್ರತಿನಿಧಿಸುವ—ಪ್ರಾಣಾಪಾನಾದಿ ಪಂಚ ಮಹಾವಾಯುಗಳ ಸಕ್ರಮಚಾಲನೆಗೆ ಆಸ್ಪದವಾಗಿರ್ಪ ಶಿವಪಂಚಾಕ್ಷರೀ ಮಹಾಮಂತ್ರವು ನಿಮ್ಮನ್ನು ಸಂರಕ್ಷಿಸಲಿ!

ಲಾಕ್ಷಣಿಕರ ಮತದ ಪ್ರಕಾರ — ಲೋಕದ ಯಾವತ್ತೂ ಅಮಂಗಲ ದ್ರವ್ಯಗಳ ದರ್ಶನ, ಸ್ಪರ್ಶನ, ಸಂಭಾಷಣ, ಕ್ರೀಡಾ, ಆಲಾಪ ನೆಯೇ ಮೊದಲಾದ ಕಾರ್ಯಗಳಿಂದ ಜನಿಸಲ್ಪಡುವ ವಿಕಾರೀ ಭಾವವನ್ನು ತಡೆದು ನಿಲ್ಲಿಸಿ—ಮನಸ್ಸನ್ನು ಸಂಪೂರ್ಣ ನಿಲುಗಡೆಗೆ ತರಬಲ್ಲ, ಚಿತ್— ತತ್ತ್ವದ ಸ್ಫೂರ್ತಿಯನ್ನು ವಿಸ್ತರಿಸಬಲ್ಲ ಶಿವ ಪಂಚಾಕ್ಷರೀ ಮಹಾ ಮಂತ್ರವು ನಿಮ್ಮನ್ನು ಸಂರಕ್ಷಿಸಲಿ!

ಕರ್ಮಪಥ ಪರಂಪರೆಯ ವಿಶ್ವಾಸದಂತೆ— ಶ್ರುತಿ, ಸ್ಮೃತಿ, ಆಗಮ, ಉಪಬೃಂಹಿತಗಳಲ್ಲಿ ಹೇಳಲ್ಪಟ್ಟಿರುವ—ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭಕ್ತಾಚಾರ ಜನ್ಯ ಅಂತರ್ದೃಷ್ಟಿಯ ಭಾಂಡಾಗಾರ ದಂತಿರುವ ಶಿವಪಂಚಾಕ್ಷರೀ ಮಹಾಮಂತ್ರವು ನಿಮ್ಮನ್ನು ಸಂರಕ್ಷಿಸಲಿ!

ಕಾರ್ಯ ಕಾರಣ ವಿವೇಕಜ್ಞರು ದೃಢೀಕರಿಸಿರುವಂತೆ— ಶಿವನ ಸದ್ಯೋಜಾತಾದಿ ಪಂಚ ವದನಗಳ ಮುಖಾಂತರ ನಡೆಯುತ್ತಿರುವ ಜಗತ್ ಸೃಜನಾದಿ ಪಂಚ ಮಹಾಕೃತ್ಯಗಳ ಪ್ರೇರಕ ತತ್ತ್ವವಾದ ಶಿವ ಪಂಚಾಕ್ಷರೀ ಮಹಾಮಂತ್ರವು ನಿಮ್ಮನ್ನು ಸಂರಕ್ಷಿಸಲಿ!

ಕಾಪಿಲನು ಅಂಗೀಕರಿಸಿದ— ಪೃಥಿವ್ಯಾದಿ ಪಂಚ ಮಹಾಭೂ ತಂಗಳ ವ್ಯಕ್ತ-ಅವ್ಯಕ್ತ ಅದ್ಭುತ ಕ್ರಿಯೆಗೆ, ಹಾಗೂ ತದಧಿಷ್ಠಾನ ಪಂಚ ವಿಂಶತಿ ಕರಣ ಹಸಿಗೆಯ ವೈಶಿಷ್ಟ್ಯಕ್ಕೆ ಪ್ರಸಿದ್ಧ ಹೇತುವಾದ ಪಂಚಾಕ್ಷರೀ ಮಹಾಮಂತ್ರವು ನಿಮ್ಮನ್ನು ಸಂರಕ್ಷಿಸಲಿ!

ಕಣಾದನ ಕಲ್ಪನೆಯಂತೆ— ದೃಷ್ಟಾಂತಾದಿ ಪಂಚಪ್ರಮೆಗಳಿಂದ ವಿಶದೀಕರಿಸಲ್ಪಡಬಹುದಾದ, ಬ್ರಹ್ಮ-ವಿಷ್ಣು-ರುದ್ರ-ಈಶ್ವರ-ಸದಾಶಿವರೆಂಬ ಪಂಚಬ್ರಹ್ಮರ ಅಧಿಕಾರ ಸರ್ವಸ್ವ, ಹಿರಣ್ಮಯ ಪದಸ್ವರೂಪವಾದ ಅಧಿ

ಕೃತ ಸಾಯುಜ್ಯ ಸ್ಥಾನವನ್ನು ಈಯಬಲ್ಲ ಶಿವಪಂಚಾಕ್ಷರೀ ಮಹಾಮಂತ್ರವು ನಿಮ್ಮನ್ನು ಸಂರಕ್ಷಿಸಲಿ !

— ಈ ಪ್ರಕಾರ ಆಶೀರ್ವಾದ ದೊರೆತು, ಅದರ ಫಲವಾಗಿ ಆ ಇಬ್ಬರ ಜೀವನ ವಿಶ್ವಜೀವನದಲ್ಲಿ ತಾದಾತ್ಮ್ಯಗೊಳ್ಳುತ್ತದೆ. ಒಳಗೂ ಹೊರಗೂ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ಉಭಯರೂ ಆನಂದಾತಿರೇಕದಲ್ಲಿ ಓಲಾಡಿಬಿಡುತ್ತಾರೆ. ಗುರು ಶಿಷ್ಯರ ಪರಸ್ಪರ ಸಂಭಾಷಣಾ ಸಹಯೋಗದಿಂದ ಪರಮೇಶ್ವರನ ಸಹಯೋಗ ಸ್ಥಿತಿಯು ಅರುಹಿಂಗೆ ಬರೋಣ, ಆ ಪ್ರದೀಪ ಗತಿಯಲ್ಲಿ ಲೀನರಾಗಿ ಮಹಾನಮೌನಚಿತ್ತರಾಗುತ್ತಾರೆ–ಅವರು.

ಪ್ರಾಂಚತ್ಪಂಚಮರುದ್ವಿಹಾರನಗರೀ ಪಂಚಾಸ್ಯಹೃದ್ಭೀಕರೀ<br>
ಪಂಚಾಚಾರಪರಾಕ್ಷಸಂಚಯಕರೀ ಪಂಚಾನನಾಂತಃ ಪುರೀ ॥<br>
ಪಂಚೀಭೂತ ಜಗತ್ಪ್ರಪಂಚಲಹರೀ ಪಂಚಪ್ರಮಾಮಂಜರೀ<br>
ಪಂಚಬ್ರಹ್ಮಧರೀ ಮಹಾಸುಖಕರೀ ಪಂಚಾಕ್ಷರೀ ಪಾತು ವಃ ॥

(ರಾ.ವಿ. ಆಶ್ವಾ —೪.)

ಭಾರತದ ಭಿನ್ನ ಭಿನ್ನ ದಾರ್ಶನಿಕ ಸಂಕಲ್ಪವು ಶಿವಪಂಚಾಕ್ಷರೀ ಮಹಾಮಂತ್ರದಲ್ಲಿ ಏಕತ್ವ ಪಡೆದ ಬಗೆಯನ್ನು ಮೇಲಿನ ಪದ್ಯವು ವ್ಯಕ್ತಗೊಳಿಸಿದೆ. ಜಾಗತಿಕ ಸೌಹಾರ್ದತೆಯ ಸುಂದರ ಚಿತ್ರ ಅದರಲ್ಲಿ ಚಿತ್ರಿತವಾಗಿದೆ. ಕೆಲವೊಂದು ದೃಷ್ಟಿಯಿಂದ, ಕೆಲಕೆಲವರಿಂದ ಅಂಗೀಕೃತವಾದ, ಕೆಲವು ಗುಂಪಿಗೆ ಮಾತ್ರ ಮೀಸಲಾದ ಮಂತ್ರವಲ್ಲ–ಶಿವಮಂತ್ರ. ಕೈಲಿದ್ದ ಬೆಣ್ಣೆಯ ಉಂಡೆಯನ್ನು ಬಳಸಿಕೊಳ್ಳಲರಿಯದೆ, ಕಾಸಿದ ತುಪ್ಪದ ಸಲುವಾಗಿ ಮನೆಮನೆಗೆ ಅಲೆಯುವ ತಿಳಿಗೇಡಿತನಕ್ಕೆ ಇಳಿಯುವವರು ಶಿವಭಕ್ತರೂ ಅಲ್ಲ. ಕೃತ್ರಿಮ ಅಹಂಕಾರಕ್ಕೆ ಅಲ್ಲಿ ಪುರಸ್ಕಾರವೇ ಇಲ್ಲ.

ದೀಕ್ಷಿತನಿನ್ನು ಸರ್ವಬಂಧನ ವಿಮುಕ್ತನಾಗಿ ಕಲ್ಯಾಣಮೂರ್ತಿಯಾಗಿ ಕಂಗೊಳಿಸಬೇಕೆಂದಿದ್ದರೆ, ಮನಶ್ಚಾಂಚಲ್ಯಕ್ಕೆ ಆಸ್ಪದವೀವ ದುರ್ಗುಣಗಳೊಂದಕ್ಕಾದರೂ ಅವನು ಅಂಟಿಕೊಳ್ಳಬಾರದು ; ಅನಿತ್ಯಕಾಮನೆಗೆ—ಆತ್ಯಾಸೆಗೆ ಗಂಟುಬೀಳಬಾರದು ; ಶಿವಮಂತ್ರದ ಅರ್ಥವನ್ನು ಅನವರತ ಜಪಿಸುತ್ತಿರಬೇಕು. ಕ್ಷೇತ್ರ–ಕ್ಷೇತ್ರಜ್ಞ ವಿವೇಚನಾಪರನಾಗಿ, ಅರ್ಥಾತ್ ಅಂತಃಸ್ಫೂರ್ತಿವಂತನಾಗಿ (Intuition), ಸದ್ವಿಚಾರ ಸ್ವತಂತ್ರನಾಗಿ

ಲೋಕದಲ್ಲಿ ಮೆರೆಯಬೇಕು; ಸತ್ಯಸಮರಸನಾಗಿ, ನಿರ್ಮಲಚರಿತನಾಗಿ ವಿಶ್ವ ಜೀವನದಲ್ಲಿ ಬೆರೆಯಬೇಕು–ಮನುಷ್ಯ. ಅದುವೇ ಸೊಗಸಾದ ಬಾಳು; ಅದುವೇ ಅತ್ಯುತ್ತಮ ಜೀವನ—ಎನ್ನುತ್ತದೆ ಶಿವಾಚಾರ್ಯರ ಮೂಲ ಸಂದೇಶ. ಶಿವಪಂಚಾಕ್ಷರೀ ಮಹಾಮಂತ್ರವು ತನ್ನ ನಿರ್ದಿಷ್ಟ ಪ್ರಾಣವೆಂಬ ನಂಬಿಕೆ ಸ್ಥಿರವಾದಾಗ, ಅಂತಹ ದೇವಜೀವನ ಸ್ಥಿರವಾಗುತ್ತದೆ; ಉಜ್ವಲ ವಾಗುತ್ತದೆ.

*　　　*　　　*　　　*

ಆಕರ್ಷಕ ಹಾಗೂ ಅಕುಟಿಲ ಮಾನವೀಯತೆಗೆ ಆಧ್ಯಾತ್ಮಿಕ ಜಿಜ್ಞಾಸೆ ಯೊಂದೇ ದಿವ್ಯ ಚೇತನವು. ಜನಜೀವನ ಆಧ್ಯಾತ್ಮಿಕವಾಗಿ ಪ್ರಾಪಂಚಿಕ ವಾಗಿ ಉತ್ತಮಗೊಳ್ಳಬೇಕು–ಎಂಬಂಶವನ್ನು ಶಿವಪಂಚಾಕ್ಷರೀ ಮಂತ್ರವು ಒತ್ತಿ ಹೇಳುತ್ತದೆ. ಶಿವಾಭಿನ್ನ ಸತ್ಸಂಪತ್ತಿಪ್ರದವಾಗಿದೆ; ಸತ್ಕ್ರಿಯಾ ಪ್ರೇರಕವಾಗಿದೆ—ಅದು. ಹೇಳಬೇಕಾದ ಅಂಶವನ್ನು ಶ್ಲೇಷದಮೂಲಕ ಹೊರಪಡಿಸುತ್ತದೆ—ಅದು.

ಅದರಲ್ಲಿ ಒಪ್ಪುವ 'ನಮಃ' ಶಬ್ದವು ಜೀವವಾಚಕವು. ಆತ್ಮನೇ 'ಶಿವ' ಶಬ್ದವಾಚ್ಯನು. ಚತುರ್ಥೀ ಪ್ರತ್ಯಯ ಸೂಚಕ 'ಆಯ' ಶಬ್ದವು ಉಭಯದ ಐಕ್ಯಬೋಧಿನಿಯು.

ಅನಾದಿ ಅವಿದ್ಯೆ (ಅಜ್ಞಾನ)ಯ ವಾಸನೆಯೆ ಮುಖ್ಯ ಅಪರಾಧವಾಗಿ, ಆ ನಿಮಿತ್ತದಿಂದ, ಬರಬಾರದ ಅತಿ ಹೀನ ಭವಂಗಳಲ್ಲಿ ಬಂದು, ಬಹು ಪರಿಯ ದುಃಖದಿಂದ ಬಳಲಿ ಬೇಸತ್ತ ಜೀವನು—ಕೊನೆಗೆ ಶಿವಾನುಗ್ರಹ ದಿಂದ ಎಚ್ಚೆತ್ತು, ಶಿವಮಂತ್ರವೆಂಬ ಹೆಸರಿನ ಬೋಧಿವೃಕ್ಷದ ನೆರಳಿನಲ್ಲಿ ಕುಳಿತುಕೊಳ್ಳುತ್ತಾನೆ; ಶಿವಧ್ಯಾನ ನಿಷ್ಠನಾಗುತ್ತಾನೆ.

'ಆರು ತಾನೆಂದು' ವಿಚಾರಿಸಲಾರಂಭಿಸುತ್ತಾನೆ. 'ತಾನು ಬರಿಯ ದೇಹವಲ್ಲ; ಆದಿ-ಮಧ್ಯ-ಅಂತ್ಯ ರಹಿತವಾದ ಆತ್ಮ' ಎಂಬುದಾಗಿ ನಿಶ್ಚ ಯಿಸುತ್ತಾನೆ. 'ದೇಹ—ದೇಹಿ' ಸ್ವಭಾವವನ್ನು ಯಥಾರ್ಥವಾಗಿ ಜ್ಞಾಪಿಸಿ ಕೊಂಡ ಆ ಮಹಾಂತನು, ಅದರ ಪರಿಣಾಮವಾಗಿ ವಿವಿಧ 'ಸತ್ ಕ್ರಾಂತಿ'ಯ ಸುವರ್ಚಸ್ವಾಗುತ್ತಾನೆ; ಶಿವವಾಗುತ್ತಾನೆ.

ಜೀವವಾಚಿ 'ನಮೋ' ನಾಮ ಆತ್ಮಾ 'ಶಿವ' ಉದಾಹೃತಃ ।
ತದಾತ್ಮಿಕಾಯಾ ಚತುರ್ಥೀ ತಯಾ ಚಾಽಯೋತಿ ಗೀಯತೇ ॥
ನಮಶ್ಶಬ್ದೋ ಜೀವವಾಚೀ ಶಿವಶ್ಶಂಭುರುದಾಹೃತಃ ।
ಅಯೇತಿ ತದ್ದ್ವಯೋರೈಕ್ಯಮಾಹುರಾಗಮಪಾರಗಾಃ ॥

—ಇತಿ ಸೂತಸಂಹಿತಾವಚನಮ್ ॥

(ವೀ.ಧ. ಪುಟ ೮೯.

ಯಾವುದೇ ಆದರೂ ಒಂದು ನಿರ್ದಿಷ್ಟ ವಸ್ತುವನ್ನು ಉದ್ದೇಶಿಸಿ, ಅದರ ಗುಣ ವೈಶಿಷ್ಟ್ಯವನ್ನು ವಿವರಿಸುವ ಶಬ್ದ ಅಥವಾ ಶಬ್ದಸಮೂಹಾತ್ಮಕ ವಾಕ್ಯವೇ ವಾಚಕವು. ವಿವರಿಸಲ್ಪಡುವ ಅನಾದಿ ವಸ್ತುವೇ ವಾಚ್ಯವು. ಪಂಚಬ್ರಹ್ಮ ಮೂರ್ತಿ ಸ್ವರೂಪನಾದ ಪರಮಶಿವನು ವಾಚ್ಯ ವಾಚಕ ಸಂಬಂಧದಿಂದ ಮೂಲಪಂಚಾಕ್ಷರೀ ಮಂತ್ರದಲ್ಲಿ ಸ್ವಭಾವ ಸಿದ್ಧವಾಗಿ ಇರುವನು. ಅಳತೆಗೆ ಸಿಕ್ಕದವನಾದ, ಅರ್ಥಾತ್ ಅಪ್ರಮೇಯನಾದ ಪರಮ ಶಿವನೇ ವಾಚ್ಯವು. ಮೂಲ ಪಂಚಾಕ್ಷರಿಯೇ ವಾಚಕವು. ಹೀಗೆ ಶಿವ ಮಂತ್ರಕ್ಕೂ ಪರಮ ಶಿವನಿಗೂ ವಾಚ್ಯ ವಾಚಕ ಭಾವವು ಸುಪ್ರಸಿದ್ಧವು.

ಮಂತ್ರೇ ಷಡಕ್ಷರೇ ಸೂಕ್ಷ್ಮೇ ಪಂಚಬ್ರಹ್ಮತನುಃ ಶಿವಃ ।
ವಾಚ್ಯವಾಚಕ ಭಾವೇನ ಸ್ಥಿತಃ ಸಾಕ್ಷಾತ್ಸ್ವಭಾವತಃ ।
ವಾಚ್ಯಃ ಶಿವೋಽಪ್ರಮೇಯತ್ವಾನ್ಮಂತ್ರಸ್ತದ್ವಾಚಕಃ ಸ್ಮೃತಃ ॥೧೦॥
ವಾಚ್ಯವಾಚಕ ಭಾವೋಽಯಮನಾದಿಃ ಸಂಸ್ಥಿತಸ್ತಯೋಃ ॥

(ವಾ.ಸಂ. ಉತ್ತರ ಭಾಗ, ಅಧ್ಯಾಯ ೧೨.)

ಮಂತ್ರವೆಂಬುದು ಅವ್ಯಕ್ತ ದೇವತತ್ತ್ವದ ಮಹಾಪುನೆ. ಜಪವೆಂದರೆ ಆ ದೇವತತ್ತ್ವದ ಚಿಂತನೆ. ಶಿವಮಂತ್ರ ಜಪವೆಂದರೆ—ಮೂವತ್ತಾರು ಮಹಾತತ್ತ್ವಗಳಿಗೆ ಮೂಲಸ್ಥಾನವಾದ ತಮಸ್ಸಿನಿಂದ ಅತೀತವಾದ ಆತ್ಮ ಸಂದರ್ಶನ. ಅದು ಮನಸ್ಸಿನ ಜಾಗೃತಿಯಿಂದ ಅರ್ಥಾತ್ ಮನಸ್ಸಂಮಥನದಿಂದ ಆವಿರ್ಭವಿಸಿದ ವಿಲಾಸಸತ್ಯ. ವೀರಶೈವಧರ್ಮಸ್ವರೂಪ ಭಕ್ತಿ–ಜ್ಞಾನ–ಕರ್ಮ ವೈಶಾಲ್ಯದೃಷ್ಟಿಯೆಲ್ಲ ಅದರಲ್ಲಿ ಹಾಸು ಹೊಕ್ಕಾಗಿ ಹೆಣೆದುಕೊಂಡಿದೆ. ದೇವಬುದ್ಧಿ ಗಂಗೆಯು ಕ್ರಮಕ್ರಮವಾಗಿ ವೃದ್ಧಿಗೊಂಡು ಹರಿದು ಗಟ್ಟಿಗೊಂಡು ಅದರೊಳಗೆ ಹುದುಗಿಕೊಂಡಿದೆ. 'ಶಿವ ಏವ ಕೇವಲಃ' ಶ್ರುತಿಯ ಪರಿವೇಥನೆ ಅಲ್ಲಿದೆ.

ಶಿವಪಂಚಾಕ್ಷರೀ ಮಂತ್ರದಲ್ಲಿ—ಅಮೃತ ಪಂಚಾಕ್ಷರೀ, ಅಘೋರ ಪಂಚಾಕ್ಷರೀ, ಅಜಪ ಪಂಚಾಕ್ಷರೀ, ಹಂಸ ಪಂಚಾಕ್ಷರೀ, ಶಕ್ತಿ ಪಂಚಾಕ್ಷರೀ ಮೂಲಪಂಚಾಕ್ಷರೀ (ಷಡಕ್ಷರೀ), ನಿರ್ವಾಣ ಪಂಚಾಕ್ಷರೀ, ಸವ್ಯ ಪಂಚಾಕ್ಷರೀ, ಕ್ಷೇತ್ರ ಪಂಚಾಕ್ಷರೀ, ಸತ್ಯ ಪಂಚಾಕ್ಷರೀ, ಪ್ರಣವ ಪಂಚಾಕ್ಷರೀ, ಅಗ್ನಿ ಪಂಚಾಕ್ಷರೀ ಮೊದಲಾಗಿ ನೂರಾರು ಪ್ರಭೇದವುಂಟು. ಬೀಜಾಕ್ಷರಗಳ ಸಂಯೋಗದಿಂದಾಗಿ ಈ ಭೇದ ಉದ್ಭವವಾಗಿದೆ. ಅದರದರ ಉಪಾಸನೆಗೆ ತಕ್ಕಂತೆ ಪ್ರತಿಫಲವೂ ಇದೆ. ಸನಕಾದಿ ಮಹರ್ಷಿಗಳು ಶಿವಮಂತ್ರ ಜಪ ದಿಂದಲೇ ಇಷ್ಟಾರ್ಥ ಪಡೆದರು.

ಊರ್ಧ್ವರೇತಸ್ಕರಾದ ಶಿವಯೋಗಿಗಳು ಬೀಜಾಕ್ಷರಗಳನ್ನು ಹಿಡಿದು ಕೂಗಿದರೆ ವಿಶ್ವದ ಅಕ್ಷರಾತ್ಮಕ ೫೧ ಮಂದಿ ಪರಮ ದೇವತೆಗಳು ಅಧಿದೈವ ಪ್ರತ್ಯಧಿದೈವರಿಂಡೊಡಗೂಡಿ ಪ್ರಸನ್ನರಾಗುವರೆಂದು ಶಿವಾಗಮವು ಹೇಳು ತ್ತಿದೆ. ಸಾಧಕರ ತಪಃ ಪ್ರಭಾವಕ್ಕನುಸಾರವಾಗಿ—ಆ ಕಾರ್ಯ.

ಶಿವಮಂತ್ರ ಜಪದಿಂದ ದೊರಕುವ ಪರಮುಕ್ತಿ ಸುಖದ ಎದುರಿಗೆ–ಜಲವರ್ಷಿ, ಕಾಲವರ್ಷಿ, ಪರಕಾಯಪ್ರವೇಶ–ಮೊದಲಾದ ಪ್ರಯೋಜನ ಗಳು ಅಲ್ಪ ಪ್ರಮಾಣದವು ; ಎಂತೆಂತಹ ಅಘಟಿತಘಟನಾ ಕಾರ್ಯಗಳಾ ದರೂ, ಅದ್ಭುತ ಪವಾಡಗಳಾದರೂ ಸತ್-ಅಸತ್-ಸದಸತ್ ವಿಜ್ಞಾನದ ಎದುರಿಗೆ ಲಘುತರ.

ನಿಷ್ಠಾವಂತ ವೀರಶೈವರು ತಂತಮ್ಮ ಗುರುಪರಂಪರೆಗೆ ಅನುಸಾರ ವಾಗಿ—ಪ್ರಸಾದ ಪಂಚಾಕ್ಷರೀ, ಮೂಯೂಖ್ಯ ಪಂಚಾಕ್ಷರೀ ಸೂಕ್ಷ್ಮ ಪಂಚಾಕ್ಷರೀ, ಸ್ಥೂಲ ಪಂಚಾಕ್ಷರೀ, ಮೂಲ ಪಂಚಾಕ್ಷರೀ— ಈ ಐದು ಬಗೆಯ ಮಂತ್ರಗಳಲ್ಲೊಂದನ್ನು ಜಪಿಸಿ ; ಪಂಚಬ್ರಹ್ಮರ ವಾಸ್ತವಿಕ ಸ್ಥಿತಿ ಯನ್ನೂ ಸವಿಕಲ್ಪ—ನಿರ್ವಿಕಲ್ಪ ಸಮಾಧಿ ಸಮಸ್ಯೆಯನ್ನೂ ಅರಿತು ಸ್ಥಿತ ಪ್ರಜ್ಞರಾಗುತ್ತಾರೆ. ಗುರು—ಲಿಂಗ—ಜಂಗಮದಲ್ಲಿ ಸಹಜವಾದ, ಸ್ಥಿರವಾದ ಅನವರತವಾದ ಭಕ್ತಿಯನ್ನು ಬೆಳೆಸಿಕೊಂಡು—ಭವವಿಮುಕ್ತರಾಗುತ್ತಾರೆ.

ಬರೀ ವೀರಶೈವರ ಮಟ್ಟಿಗೇ ಅಲ್ಲ ; ಈ ಕಲಿಯುಗದಲ್ಲಿ ಮನಸ್ಸನ್ನು ಶುದ್ಧಿಮಾಡಿಕೊಳ್ಳಬಯಸುವ ದುರ್ಜನರು, ಉಪಕಾರ ಸ್ಮರಣೆಯಿಲ್ಲದವರು,

ದಯಾಶೂನ್ಯರು, ಹಠವಾದಿಗಳು, ಅತ್ಯಾಶಾಪರರು, ವಕ್ರಸ್ವಭಾವದವರು— ಅವರಿವರೆನ್ನದೆ ಎಲ್ಲರನ್ನೂ ಪಂಚಾಕ್ಷರೀ ವಿದ್ಯೆಯು ಸಂಸಾರ ದುಃಖದಿಂದ ದಾಟಿಸುವುದು. ಮಹಾಪಾಪಿಯಾದರೂ ಶಿವಭಕ್ತನಾದರೆ—ಶಿವಪಂಚಾಕ್ಷರೀ ಜಪನಿಷ್ಠನಾದರೆ, ಅವನಿಗೆ ಮೋಕ್ಷವು ಕಟ್ಟಿಟ್ಟದ್ದು.

ಆಶ್ರಿತ್ಯ ಪರಮಾಂ ವಿದ್ಯಾಂ ಹೃದ್ಯಾಂ ಪಂಚಾಕ್ಷರೀಂ ಮಮ ।
ಭಕ್ತ್ಯಾ ಚ ಭಾವಿತಾತ್ಮಾನೋ ಮುಚ್ಯಂತೇ ಕಲಿಜಾಃ ನರಾಃ ।೪।।
ಮನೋವಾಕ್ಕಾಯಜೈರ್ದೋಷೈರ್ವಕ್ತುಂ ಸ್ಮರ್ತುಮಗೋಚರೈಃ ।
ದೂಷಿತಾನಾಂ ಕೃತಘ್ನಾನಾಂ ನಿರ್ದಯಾನಾಂ ಖಲಾತ್ಮನಾಂ ।।೫।।
ಲುಬ್ಧಾನಾಂ ವಕ್ರಮನಸಾಮಪಿ ಮತ್ಪ್ರವಣಾತ್ಮನಾಂ ।
ಮಮ ಪಂಚಾಕ್ಷರೀ ವಿದ್ಯಾ ಸಂಸಾರಭಯತಾರಿಣೀ ।೬।।
ಮಯೈವಮಸಕೃದ್ದೇವಿ ಪ್ರತಿಜ್ಞಾತಂ ಧರಾತಲೇ ।
ಪತಿತೋಽಪಿ ವಿಮುಚ್ಯೇತ ಮದ್ಭಕ್ತೋ ವಿದ್ಯಯಾಽನಯಾ ।೭।।
(ವಾ. ಸಂ. ಉತ್ತರಭಾಗ, ಅಧ್ಯಾಯ ೧೩.)

ಅಶುದ್ಧೋ ವಾ ವಿಶುದ್ಧೋ ವಾ ಸಕೃತ್ಪಂಚಾಕ್ಷರೇಣ ಯಃ ।
ಪೂಜಯೇತ್ಪತಿತೋ ವಾಪಿ ಮುಚ್ಯತೇ ನಾತ್ರ ಸಂಶಯಃ ।೩೮।
ಸಕೃದುಚ್ಚಾರಮಾತ್ರೇಣ ಪಂಚಾಕ್ಷರ ಮಹಾಮನೋಃ ।
ಸರ್ವೇಷಾಮಪಿ ಜಂತೂನಾಂ ಸರ್ವಪಾಪಕ್ಷಯೋ ಭವೇತ್ ।೩೯
(ಸಿ. ಶಿ. ಪರಿ—೮.)

* * * *

ಮುಕ್ತೇಃ ಪ್ರತಿಜ್ಞಾನಾತ್ ।
(ಬ್ರ. ಸೂ. ೪-೪-೧-೨.)

ಈ ಸೂತ್ರಾರ್ಥ ಪರಿಜ್ಞಾನವೇ ಶಿವಮಂತ್ರ ಜಪಕ್ಕೆ ತಕ್ಕ ಪ್ರಯೋಜನ.

'ಈಶಾವಾಸ್ಯಮಿದಗ್ಂ ಸರ್ವಂ'

ಶ್ರುತಿ ಸಮ್ಮತಿಯಂತೆ, ಇಡೀ ಪ್ರಪಂಚವು ಭಗವಂತನ ಕರುಣಾಪ್ರಸಾದ. ಅದನ್ನು ಸರಿಯಾದ ರೀತಿಯಿಂದ ಉಪಯೋಗ ಮಾಡಿಕೊಳ್ಳಬೇಕು.

ಹಾಗಾದರೇನೇ ತನಗೂ ಕ್ಷೇಮ, ಲೋಕಕ್ಕೂ ಬಹುವಿಧ ಕ್ಷೇಮವೆಂಬು ದನ್ನು ಪಂಚಾಕ್ಷರೀ ಪಾಠವು ಪ್ರತ್ಯಕ್ಷಮಾಡಿ ತೋರಿಸುತ್ತದೆ.

ಇಂಥ ಪವಿತ್ರ ಜಪ ಚರಣೆಗೆ—ಚಿತ್ತೈಕಾಗ್ರತೆ ಮತ್ತು ಚಿಂತನ ಶಕ್ತಿ—ಇವೆರಡೂ ಇರಲೇಬೇಕು. ಪರಿಶುದ್ಧ ಮನಸ್ಸಿನಿಂದ ಜಪ, ಧ್ಯಾನ, ಧಾರಣ, ಸಮಾಧಿ ಸ್ಥಿರವಾಗುವುದಾದರೆ—ಅದರಿಂದ ಆರೋಗ್ಯ ಆಯುಷ್ಯ ಅಭಿವೃದ್ಧಿಯಾಗುತ್ತದೆ. ಮನದ ಕೋರಿಕೆಗಳೆಲ್ಲ ಈಡೇರುತ್ತವೆ; ಅತೀಂ ದ್ರಿಯ ಸ್ಥಿತಿಯೂ ಪರಾನಂದ ಪ್ರಾಪ್ತಿಯೂ ಆಗುತ್ತದೆ. ಅದೇ ಮೋಕ್ಷವು. ಅದೇ ಪರಾಕಾಷ್ಠ ಸ್ಥಿತಿಯು !

ಮಮ ಪಂಚಾಕ್ಷರೀ ಮಂತ್ರಃ ಪಾಠಮಾತ್ರೇಣ ಸಿಧ್ಯತಿ |
ಸರ್ವಲೋಕವಶೀಕಾರಸ್ಸರ್ವ ಸೌಭಾಗ್ಯವರ್ಧನಃ ||
ಆಯುರಾರೋಗ್ಯಸಂಪತ್ತಿರ್ಹೇತುರೈಶ್ವರ್ಯಕಾರಣಮ್ |
ಇಷ್ಟಾಪತ್ತಿಕರೋಽನಿಷ್ಟಪರಿಹಾರೈಕಕಾರಕಃ |
ಪರಾನಂದ ನಿಜಾವಾಸೋ ಮುಕ್ತಿಸ್ತತ್ರ ಪ್ರವರ್ಧನಃ ||

(ವಾತೂ—)

ಮಂತ್ರವಿದ್ಯೆಯು ಬಹು ಗೋಪ್ಯವಾದುದು. ಕ್ರಮಾನುಗುಣ್ಯ ಮಂತ್ರೋಪಾಸನೆಯಿಂದ ಮನಶ್ಶುದ್ಧಿ ; ಮನಶ್ಶುದ್ಧಿಯಿಂದ ಜ್ಞಾನದ ಉತ್ಪತ್ತಿ ; ಶಿವಜ್ಞಾನದಿಂದ ವೈರಾಗ್ಯ ಅಭಿವೃದ್ಧಿ ; ಪರಮ ವೈರಾಗ್ಯ ಶೀಲನೇ ಮೋಕ್ಷಾಧಿಕಾರಿಯು.

ಜನನ, ಜೀವನ, ತಾಡನ, ಬೋಧನ, ಅಭಿಷೇಕ, ವಿಮಲೀಕರಣ, ಆಪ್ಯಾಯನ, ತರ್ಪಣ, ದೀಪನ, ಗುಪ್ತಿ ಈ ಹತ್ತು ತೆರದ ಸಂಸ್ಕಾರಗಳಿಂದ ಮಂತ್ರ ಸಿದ್ಧಿಯಾಗುತ್ತದೆ. ಆರು ಬಗೆಯ ಪಲ್ಲವ ಭೇದವನ್ನೂ, ಛಂದಸ್ಸು-ಋಷಿ ಮೊದಲಾದ ಅಂಗ ಭೇದವನ್ನೂ ಅರಿತುಕೊಂಡಲ್ಲದೆ ಜಪ ಮಾಡ ಬಾರದು. ನ್ಯಾಸಾದಿ ವಿಧಿಯನ್ನು ಅನುಸರಿಸಿದ ಜಪವು ಫಲದಾಯಕವಾಗ ಲಾರದು.

ನ್ಯಾಸಂ ವಿನಾ ಭವೇನ್ಮೂಕಃ || ಇತ್ಯಾದಿ ||

(ಲಿಂಗ. ಚಂ. ಪುಟ ೨೫೨)

ಇಂಥ ಸಂದರ್ಭದಲ್ಲಿ ಸರ್ವೇ ಸಾಮಾನ್ಯವಾಗಿ ತಲೆದೋರಬಹುದಾದ ಶಂಕೆ :—

ಈ ಇಪ್ಪತ್ತನೆಯ ಶತಮಾನದವರಾದ ನಮಗೆ ಮಂತ್ರ ಜಪದಿಂದ ಉಂಟಾಗಬಹುದಾದ ಪ್ರಯೋಜನವೇನು ? ಅದೇನಾದರೂ ಅಣು ಬಾಂಬಿನಷ್ಟು ಪ್ರಭಾವಶಾಲಿಯಾದುದೋ, ಹೇಗೆ ? ಮೊದಲಾಗಿ.

ಇದೆಲ್ಲವೂ ಆಸ್ತಿಕನು ಮಾಡುವ ಪ್ರಶ್ನೆಯೇ ಆಗಿದ್ದಿದ್ದರೆ, ಪರಿಹಾರವಿದು :—

ಪ್ರಸ್ತುತ ವೈಜ್ಞಾನಿಕ ಪ್ರಗತಿಯನ್ನೂ ಅದರ ಚಳವಳಿಯನ್ನೂ ಕಂಡು, ಮಂತ್ರಯೋಗದ-ಧ್ಯಾನಯೋಗದ ಶಕ್ತಿಯೊಡನೆ ಅದನ್ನು ತೂಗಿ ನೋಡಿ, ತೂಕ ತುಂಡು ಸರಿಯಾಗಿ ಗುರುತಿಸಿ ಬೆಲೆಕಟ್ಟಲರಿಯದೆ-ಹತಾಶ ಮನೋಭಾವ ಹೊಂದುವುದು ಶ್ರದ್ಧಾವಂತರಿಗೆ ಯೋಗ್ಯವಲ್ಲ. ಅಂತಹ ದುಃಸ್ಥಿತಿ ಸಾಧಕರಿಗೆ ಎಂದೆಂದಿಗೂ ಒದಗದಿರಲಿ !

ಆಧ್ಯಾತ್ಮಿಕ ಆನಂದವೆಂದರೆ–ಅದೊಂದು ಕೃತಕ ಕಲ್ಪನೆಯ ತಂತ್ರವೆಂದು ಪೀಠಿಕೆ ಹಾಕುವುದು ತರವಲ್ಲ. ಮಂತ್ರಸಿದ್ಧಿ ಎಂದರೆ-ಅದು ಏಕೈಕ ವ್ಯಕ್ತಿತ್ವದ ಪ್ರಗತಿ ಮಾತ್ರವೂ ಅಲ್ಲ; ಆರ್ಥಿಕ ಅನುಕೂಲ ಸಿಂಧುವೂ ಅಲ್ಲ. " ನಮ್ಮ ಹಿತ್ತಲ ದುಂಡು ಮಲ್ಲಿಗೆ ಹೂವಿನ ವಾಸನೆ, ಅತ್ತರ್-ಸೆಂಟ್ ರೂಪದಲ್ಲಿ ವಿಶ್ವದ ಮಾನವರೆಲ್ಲರ ಉಪಯೋಗಕ್ಕೂ ಬರಬೇಕು. ಅದರ ಸಾರ್ಥಕ್ಯ ಭಾವಾಭಿವ್ಯಂಜಕತೆಯಲ್ಲಿ "—ಎಂದ ಹಾಗೆ, ಇಲ್ಲಿ ಮಂತ್ರ ಜೀವಿಯ ಸದ್‌ವರ್ತನೆ. ಅವನ ಹೃದಯ ವೈಶಾಲ್ಯ, ಅವನ ಆತ್ಮಪ್ರತಿಭೆಯ ಉನ್ಮೇಷ ವಿಶೇಷವೇನುಂಟೋ—ಅದೇ ಸಮಸ್ತ ಜನರ ಆದರ್ಶ ಜೀವನಕ್ಕೆ ಕಾರಣ. ಅವನ ನಡೆ ನುಡಿಗಳ ಅನುಕರಣೆಯೇ ಸರ್ವರ–ಸೌಭಾಗ್ಯಕಾರಕ !

ಪುರಾತನ ಕಾಲದ ' ಸ್ವಾಸ್ತಿಕ ' ಚಿಹ್ನೆಯಿದ್ದಂತೆ ವೀರಶೈವರ ಅಷ್ಟಾವರಣಗಳಲ್ಲಿ ಶಿವಮಂತ್ರದ ಸಂಕೇತ. ಪೂರ್ಣತಃ ಮಾನವೀಯ ಧರ್ಮ ಸಂಶೋಧನೆ—ಶಿವಪಂಚಾಕ್ಷರೀ ಮಹಾಮಂತ್ರದ ಮೂಲಕವೇ ಆಗಿದೆ ಎಂದರೆ ಕೇಡಲ್ಲ. "ಮನುಷ್ಯ ಅಣುಕೂಟದಿಂದ ಹುಟ್ಟಬರುತ್ತಾನೆ. ಇತರ ಪ್ರಾಣಿಕೋಟಿಗಿಂತ ಹೆಚ್ಚಿನಮಟ್ಟದಲ್ಲಿ ವಿಶ್ವಾಣು ಕಣಗಳನ್ನು ಉಪಯೋಗ

ಮಾಡಿಕೊಂಡು ಜೀವಿಸುತ್ತಾನೆ. ಕಡೆಗಾದರೂ, ಪರಮಾಣು ರಹಸ್ಯವನ್ನು ಲೋಕೋಪಕಾರಕಕ್ಕಾಗಿ ಸರಿಯಾಗಿ ವಿನಿಯೋಗಿಸಿ ದೇಮಾನವನಾಗುತ್ತಾನೆ. ವಿಶ್ವಕ್ಕೆ ಆಗಬೇಕಾದ ಭೋಗ—ಮೋಕ್ಷ ಲಾಭವಷ್ಟೂ ಅಣುವಿದ್ಯಾ ವೈಶಿಷ್ಟ್ಯದಿಂದಲೇ ಆಗಬೇಕಾಗಿದೆ. ಹನಿ ಹನಿ ಕೂಡಿ ಹಳ್ಳ! ಮೂಲ ಅಣು—ಪರಮಾಣು ಪ್ರಯೋಜನ ಅನ್ಯೋನ್ಯವಾಗಿ ಆಗಲಿ; ಸಮಾಜಜೀವನದ ಬೆಳವಣಿಗೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಆಗಲಿ; ಕ್ರಮಬದ್ಧವಾಗಿ ಆಗಲಿ" ಎಂಬುದು ಶಿವಶಾಸನವಷ್ಟೆ!!

ವಿವಿಧ ನೈಸರ್ಗಿಕ ವಿಜ್ಞಾನಸಾಮರ್ಥ್ಯಕ್ಕಿಂತ ಅಣುವಿಜ್ಞಾನದ ಸಾಮರ್ಥ್ಯ ಅಕ್ಷಯವಾದುದು; ಅನೇಕ ಮುಖವಾದುದು. ಔಚಿತ್ಯವರಿತು ಬಳಸಿಕೊಂಡಂತೆಲ್ಲ—ಅದು ಬಹು ಉಪಯೋಗಕಾರಿ; ಕ್ರಮ ತಪ್ಪಿದರೆ ಪ್ರಳಯರುದ್ರನ ಅಂಶವೇಸರಿ. ಅಣುಶಕ್ತಿ ಪರಿಕ್ಷಯವಾದ ಪ್ರಾಣಿ ಸ್ಥಾಣುವಿನಂತೆ ಇದ್ದು ಬಿಡುತ್ತದೆ. ಅಣು ಶಕ್ತಿಯನ್ನು ಪೋಲು ಮಾಡದೆ, ಆಪ್ತಾಲೋಚನೆಯಿಂದ ಆತ್ಮೈಕದೃಷ್ಟಿಯಿಂದ ಆಗು ಮಾಡಿಕೊಳ್ಳುವುದಾದರೆ, ಅದುವೇ ಮಾನವ ಬುದ್ಧಿಯ ಸಾರ್ಥಕ ಸ್ಥಿತಿ. ಮನುಷ್ಯನು ಎಲ್ಲಾ ಅಭಾವ ವ್ಯಥೆಗಳಿಂದ ಬಿಡುಗಡೆಹೊಂದಿ; ಬಗೆಬಗೆಯ ರೋಷ, ರೋಗ, ಬಡತನ, ಅನಕ್ಷರತಾ ವ್ಯಾಕುಲದಿಂದ ದೂರನಾಗಿ—ಪ್ರಶಾಂತನಾಗಿ, ಪ್ರವೀಣನಾಗಿ ನಿಲ್ಲುವ ಸುಸ್ಥಿತಿಯನ್ನು ಪಡೆಯಬೇಕೆಂದರೆ ಸದ್ಬುದ್ಧಿಯನ್ನೇ ಗಳಿಸಬೇಕು. ಅದಕ್ಕಾದರೂ ಭಗವಂತನ ನಾಮಾಮೃತವೇ ಬೀಜಕೋಶ!

ಮೂಲ ಪ್ರಕೃತಿರೂಪ ಮಂತ್ರವಿದ್ಯಾವಿಶಾರದನು ಆ ಶಕ್ತಿಯ ಮೂಲಕ ಭೌತಿಕರೂಪದಲ್ಲಿ ಭಗವಂತನನ್ನು ದರ್ಶನಮಾಡುತ್ತಾನೆ; ಅಕ್ಷರರೂಪದಲ್ಲಿ ಆರಾಧಿಸುತ್ತಾನೆ. ಯೋಗಿಗಳು ವಿವರಿಸಿರುವ 'ಶಿವ-ಶಕ್ತಿ' ವೈಶಿಷ್ಟ್ಯವೆಲ್ಲವೂ ಅವನಿಗೆ ಪ್ರತ್ಯಕ್ಷ ಕಾಣಿಸಿಕೊಳ್ಳುತ್ತದೆ. ಈ ಬಗೆಯಲ್ಲಿ ಶಿವಮಂತ್ರಪ್ರಭಾವವು ಒಂದು ಸುಪ್ರಸಿದ್ಧ ಮೋಡಿ ಇದ್ದ ಹಾಗೆ. ಬಹು ಗಂಭೀರ; ಶ್ರೇಯಸ್ಕರ; ಇಂಥ ಸಂದರ್ಭದಲ್ಲಿ—

"ಮುಕ್ತಃ ಸಂಶಯಪಾಶತಃ ಸ್ಥಿರಮನಾ ಬೋಧೇ ಚ ಮುಕ್ತಿಪ್ರದೇ
ಮೋಹಂ ದೇಹ ಭೃತಾಂ ದೃಶಾವಿಘಟಯನ್ಮೂಲಂ ಮಹಾಸಂಸೃತೇಃ ||
ಸತ್ತಾನಂದ ಚಿದಾತ್ಮಕೇ ನಿರುಪಮೇ ಶೈವೇ ಪರಸ್ಮಿನ್ ಪದೇ
ಲೀನಾತ್ಮಾ ವಿದಿತಪ್ರಪಂಚವಿಭವೋ ಯೋಗೀಜನೈಃ ಸೇವ್ಯತೇ ||"

ಎಂಬಿದು ಕಾರ್ಯದೊಡನೆ ಕಾರಣವನ್ನು ವರ್ಣಿಸುವ ಹೇತ್ವಾಲಂಕಾರ ವಾಣಿ. ಇದು ಮಹಾಚಾರ್ಯರ ಆದೇಶ !

ಬ್ರಹ್ಮಕರ್ಮ ಸಮಾಧಿಯ ಈ ಲಕ್ಷಣವು ಗೀತೆಯ—

ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥೨೪॥

(ಗೀ. ಅಧ್ಯಾಯ ೪.)

ಎಂಬ ನುಡಿಯಲ್ಲೂ ಕಾಣಬರುತ್ತದೆ. ಶಿವಮಂತ್ರದ ಅರ್ಥ—ಅನುಭವ—ಸ್ಫೂರ್ತಿ ಸೆಲೆಯೊಡೆದಾಗ ತಾನೇ ತಾನಾಗಿ ಹೊರಹೊಮ್ಮುವ 'ಸ್ವಯಂಪ್ರಭಾ' ದರ್ಶನವೇನುಂಟೋ, ಆ ಧೀಮಂತ ವಿಲಾಸವೇ ಶಿವ ವಿಲಾಸವೆಂದು, ಹಾಗೂ ಸಾಧಕನ ಹೃನ್ಮನ ಭಾವವಿಲಾಸವೇ ಅದೆಂದು ಶಿವಯೋಗಿಯು ತಿಳಿಯುತ್ತಾನೆ. ಸತ್ಪುರುಷರ ಬದುಕಿನಲ್ಲೇ ಅಲ್ಲದೆ, ಅವರ ಸಾವಿನಲ್ಲೂ—ಅನಂತರವೂ ಈ ಬಗೆಯ ಬ್ರಹ್ಮಕರ್ಮಸಮಾಧಿ—ಮಂತ್ರ ಸಂದೇಶವನ್ನು ಜಗತ್ತು ಕಾಣಬಲ್ಲುದು.

"ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ।"

ಮಂತ್ರವು ಮನಸ್ಸನ್ನು ಸಮ್ಯಕ್ ಸ್ಥಿತಿಗೆ ಒಯ್ಯುವ ಒಂದು ಪ್ರಬಲ ಉಪಕರಣವೇ ಹೌದು. ಪೂರ್ವಿಕರ ಸಮಾಜನೀತಿ, ಸಮತಾಭಾವ, ವ್ಯವಸ್ಥಿತ ವೇದಾಂತ ವಿವೇಚನೆ—ಇದೆಲ್ಲವೂ ಮಂತ್ರ ಸಂಪುಟದಲ್ಲಿ ಅಡಗಿದೆ. ಇಂಥ ಮಂತ್ರವನ್ನು ಉಪದೇಶಿಸಲು, ನ್ಯಾಯನಿಷ್ಠುರ ವಿಶ್ವಧರ್ಮಸಂದರ್ಶಕ ಸದ್ಗುರುವೇ ಕರ್ತೃವು, ಗುರುವು ಎದುರಿನಲ್ಲಿ ಇರದಿದ್ದಾಗ—ಶಿವಪಂಚಾಕ್ಷರೀ ಮಂತ್ರದ ಅರ್ಥವೇನು ? ಮಂತ್ರವನ್ನು ಯಾವಾಗ ಹೇಗೆ ಜಪಿಸಬೇಕು ? ಜಪಾನುಷ್ಠಾನಕಾಲದ ಆಹಾರ ವ್ಯವಹಾರ ನಿಯಮಗಳು, ಉಪಯುಕ್ತ ಆಸನಕ್ರಮ, ಮುದ್ರೆಗಳು, ನ್ಯಾಸ ಸಮಸ್ಯೆ, ಸೃಷ್ಟಿ—ಸ್ಥಿತಿ—ಲಯ ಜಪವಿಶೇಷ, ಹಸ್ತ ಜಪ, ಮಾಲಿಕಾ ಜಪ, ಷಟ್‌ಸ್ಥಲ ಜಪ—ಈ ಎಲ್ಲ ಸೂಕ್ಷ್ಮ ಸಂಗತಿಗಳನ್ನು 'ಮಂತ್ರಾನುಭವಮಂಜರೀ' ಎಂಬ ಶಾಸ್ತ್ರೀಯ ಗ್ರಂಥವು ಸಾಂಗವಾಗಿ ತಿಳಿಸಿ, ಸಾಧಕನ ಮನಸ್ಸಿನ ಸಂದೇಹವನ್ನು ನಿವಾರಿಸಬಲ್ಲುದು.

ಮುಖ್ಯವಾಗಿ, ಮಂತ್ರೋಪಾಸಕನು ಆಸ್ತಿಕನಾಗಿರಬೇಕು. ಸದಾಚಾರ ನಿರತನಾಗಿರಬೇಕು. ಇಂದು, ಈ ಜನ್ಮದಲ್ಲಿ ತನ್ನ ಮುಂದಿರುವ ಮುಖ್ಯ ಸಮಸ್ಯೆ—'ಮನವನ್ನು ಜಯಿಸದೆ ಮಾನವತ್ವವನ್ನು ಪಡೆಯಲಾಗುವುದಿಲ್ಲ' ವೆಂಬಂಶವನ್ನು ಕೂಲಂಕಷವಾಗಿ ಚರ್ಚಿಸಿ, ಶುಭದ ಇತ್ಯರ್ಥಕ್ಕೆ ಬರಬೇಕಾದುದು. ಇಲ್ಲವಾದರೆ ಸಾಧಕನಿಗೆ-ಏನೊಂದೂ ಸಿದ್ಧಿ ಆಗಲಾರದು. ಪ್ರಪ್ರಥಮವಾಗಿ ಪರಬ್ರಹ್ಮದ ನಿಜದ ಅರಿವನ್ನು ಆಗುಮಾಡಿಕೊಡುವ ಹೆದ್ದಾರಿ-ಶಿವಮಂತ್ರ ಜಪಾಚರಣೆ, ಹೀಗೆಂಬ :—

ಅನಾಚಾರವತಾಂ ಪುಂಸಾಮವಿಶುದ್ಧ ಷಡಧ್ವನಾಂ |
ಅನಾದಿಷ್ಟೋಽಪಿ ಗುರುಣಾ ಮಂತ್ರೋಽಯಂ ಸ ಚ ನಿಷ್ಫಲಃ ||

(ವಾ.ಸಂ. ಉತ್ತರ ಭಾಗ, ಅಧ್ಯಾಯ ೧೪/೬೫)

ಈ ವಾಕ್ಯವನ್ನು ಉದ್ಧರಿಸಿ ಸದ್ಯದ ಈ ಪ್ರಸಂಗಕ್ಕೆ ಬಿಡುವು ಕೊಡೋಣ!



## ೫

ಈಗ ಈ ಐದನೆಯ ಪ್ರಕರಣದಲ್ಲಿ ಆಗಬೇಕಾದ ಆಲೋಚನೆ ಲಿಂಗ-ಶರೀರ ವಿಜ್ಞಾನಕ್ಕೆ ಸಂಬಂಧಿಸಿದುದು. ಸಾಧಕ ಜೀವಿ ಸತ್ತರೂ ಕೂಡ ಅವನ ಬೆನ್ನುಹತ್ತಿ ಬರುವ ಆಪ್ತಧರ್ಮ ಯಾವುದುಂಟೋ ಅದರ ವೃತ್ತಾಂತವನ್ನು ಕುರಿತ ಆಲೋಚನೆ ಇದು. ಧರ್ಮವೊಂದನ್ನು ಉಳಿದರೆ ಇತರ ಎಲ್ಲವೂ ಶರೀರದ ಕೂಡ ನಾಶಹೊಂದುವುದು ಸರಿಯಷ್ಟೆ.

ಏಕ ಏವ ಸುಹೃದ್ಧರ್ಮೋ ನಿಧನೇಽಪ್ಯನುಯಾತಿ ಯಃ |
ಶರೀರೇಣ ಸಮಂ ನಾಶಂ ಸರ್ವಮನ್ಯತ್ತು ಗಚ್ಛತಿ ||

(ಸುಭಾಷಿತ)

ಅಂಥ ಅಮೂಲ್ಯ ಆತ್ಮೋನ್ನತಿಗಾಗಿ—ಸರ್ವ ಸೌಖ್ಯ ಸಂಪತ್ ಲಾಭಕ್ಕಾಗಿ ಪರಮಾತ್ಮನ ಉಪಾಸನೆಯು ಅತಿ ಅಗತ್ಯವೆಂದು ಈ ನಮ್ಮ

ಸತ್ಯಸಂಶೋಧಕರು ತಿಳಿಯುವವರಾದರು. ಅದುವೇ ಆತ್ಮಯಜ್ಞವೆಂದು ಹೇಳಿದರು.

ಸಾಂಖ್ಯ, ಯೋಗ, ಪಾಂಚರಾತ್ರ, ಪಾಶುಪತ ಮೊದಲಾದ ವಿವಿಧ ಮತವಾದಿಗಳು ಧರ್ಮದ ವಿಷಯದಲ್ಲಿ ಏನೇನು ಹೇಳುವರೋ—ಆ ಎಲ್ಲ ಯುಕ್ತಿಯುಕ್ತ ಪ್ರಾಮಾಣ್ಯ ನಿರ್ಣಯವೂ ಅನಾದಿ ಆತ್ಮಯಜ್ಞವೊಂದನ್ನೇ ಮುಖ್ಯವಾಗಿ ಗುರಿಯಿಟ್ಟುಕೊಂಡು ನುಡಿದದ್ದಾಗಿದೆ. ಈ ನಮ್ಮ ವೀರಶೈವ ಮತಾಚಾರ್ಯರ ದೃಷ್ಟಿಯಲ್ಲಿ ಇದು 'ಶಿವಜೀವೈಕ್ಯಬೋಧಿಕಾ' ವಿದ್ಯೆಯೆಂದು ಕರೆಯಲ್ಪಟ್ಟಿರುವುದು. ಕರ್ಮಯಜ್ಞ, ಜ್ಞಾನಯಜ್ಞ—ಉಭಯ ಸಮ್ಮತ ಭಕ್ತಿಭಾಸಕ್ಕೆ ಇಲ್ಲಿ ಒಳ್ಳೆಯ ಸ್ಥಾನವಿದೆ. ಸುಲಭಕ್ಕೆ ಸುಲಭ, ಗಣ್ಯಕ್ಕೆ ಗಣ್ಯ—ಈ ಮಾರ್ಗ. ಆಗಲೇ ಹೇಳಿದಂತೆ,

ವಿಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯಬೋಧಿಕಾ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತು ತೇ ಮತಾಃ ॥೧೫॥

ವೇದಾಂತಜನ್ಯಂ ಯದ್‌ಜ್ಞಾನಂ ವಿದ್ಯೇತಿ ಪರಿಕೀರ್ತ್ಯತೇ ।
ವಿದ್ಯಾಯಾಂ ರಮತೇ ಯಃ ಸ ವೀರ ಇತ್ಯಭಿಧೀಯತೇ ॥೧೬॥

ವಿದ್ಯಾಯಾಂ ಶಿವರೂಪಾಯಾಂ ರಮಂತೇ ಯೇ ವಿಶೇಷತಃ
ತಸ್ಮಾದೇತೇ ಮಹಾಭಾಗಾ ವೀರಶೈವಾ ಇತಿ ಸ್ಮೃತಾಃ ॥೧೭॥

..................................................

..................................................

ಶಿವಾಶ್ರಿತೇಷು ತೇ ಶೈವಾ ಜ್ಞಾನಯಜ್ಞರತಾ ನರಾಃ ।
ಮಾಹೇಶ್ವರಾಃ ಸಮಾಖ್ಯಾತಾಃ ಕರ್ಮಯಜ್ಞರತಾ ಭುವಿ ।
ತಸ್ಮಾದಭ್ಯಂತರೇ ಕುರ್ಯುಃ ಶೈವಾ ಮಾಹೇಶ್ವರಾ ಬಹಿಃ ॥೨೦॥

..................................................

..................................................

(ಸಿ. ಶಿ. ಪರಿ—೫)

ಇಹಲೋಕ ಪರಲೋಕವೆಂಬ ಸಂದಳಿಯಿತ್ತಯ್ಯಾ—ಗುರುವಿನ ಹಸ್ತದಲ್ಲಿ ಸತ್ತು, ಪಂಚಾಕ್ಷರಿಯಿಂದೆತ್ತಿದ ಕಾರಣದಲ್ಲಿ; ನಿತ್ಯವೂ ಲಿಂಗಾ

ರ್ಚನೆಯ ಮಾಡುವ ಕಾರಣದಲ್ಲಿ; ನಿತ್ಯವೂ ವಿಭೂತಿ ರುದ್ರಾಕ್ಷಿಯ ಧಾರಣವ ಮಾಡುವ ಕಾರಣದಲ್ಲಿ.

ಇಹಲೋಕವೆಂದರೇನು, ಪರಲೋಕವೆಂದರೇನು? ಹಂಗು ಹರಿದು ಒಂದಾದ ಬಳಿಕ, ಮಲಮಾದಂಗಳು ಹರಿದು—ನಾನು ನೀನಾದ ಬಳಿಕ? 'ಎಲೆ ಅಯ್ಯಾ! ಭಕ್ತರ ಸರ್ವಾಂಗ ಲಿಂಗತನು, ಭಕ್ತರಿಪ್ಪ ಲೋಕವೆ ರುದ್ರಲೋಕ,' ಗುರುವೇ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ! ನಿನ್ನ ಹಸ್ತವ ನೆನ್ನ ಮಸ್ತಕದಲ್ಲಿ ಇಟ್ಟಡಾಯಿತ್ತು ಈ ಸ್ಥಿತಿ.

(ಸಿದ್ಧರಾಮಯ್ಯ—)

ಈ ಹೇಳಿಕೆಯ ಪ್ರತಿ ಶಬ್ದವನ್ನೂ ದೈವೀ ಬುದ್ಧಿಯಿಂದ ಬಿಚ್ಚಿ ನೋಡಬೇಕು; ಪ್ರಸನ್ನ ಹೃದಯದಿಂದ ಹಿಸುಕಿನೋಡಬೇಕು; ಮನ ವೊಲಿದು ಸಂಶೋಧನೆ ನಡೆಸಬೇಕು. ಸಾಕು. ಲಿಂಗತತ್ತ್ವದ ಘನತೆ ಆಗ ಹೃದಯಕ್ಕೆ ಮುಟ್ಟುವುದು; ಲಿಂಗಾರ್ಚನೆಯ ಸೊಬಗು ಆಗ ಮನಸ್ಸಿಗೆ ಗೊತ್ತಾಗುವುದು; ಜೀವೇಶ್ವರ ಐಕ್ಯದ ಅನುಭೂತಿ ಆಗ ನೆತ್ತಿಗೆ ನೆಟ್ಟನೆ ಹೊಳೆಯುವುದು.

"ಲಿಂಗವು ತತ್ತ್ವಶಃ ಆತ್ಮಸಾಕ್ಷಿಕವು; ಆಪ್ತಕಾಮ ವಸ್ತುವು; ಅನಾದಿ ಧರ್ಮತೇಜವು" ಎಂಬ ಆ ಬಗೆಯ ವಿಶ್ವಾಸ ಸ್ಥಿರಬುದ್ಧಿಯಿಲ್ಲದವಂಗೆ ಮೂಡಿಬರದು; ಸಮಾಜಪ್ರೇಮಿಯಲ್ಲದವನ ನೆರೆಯ ಸೋಂಕದು; ಸರಳತೆ, ಅಕೃತ್ರಿಮ ನಡತೆ, ಸತ್ಯಾಕಾಂಕ್ಷೆ—ಇವಿಲ್ಲದವಂಗೆ ಸಮಂಜಸ ಸ್ಫೂರ್ತಿಯನೀಯದು!"

'ಅದರ ಅಕುಂಚನ ಸ್ವಭಾವವು ಹೀಗೆಯೇ ಸರಿ' ಎಂದು ವರ್ಣಿಸುವ ವಾಕ್ಯಗಳಿಲ್ಲ; ಚಪಲ ಮನಸ್ಸು ಅದರ ಅಧಿಕಾರ ಮರ್ಯಾದೆಯನ್ನು ಗ್ರಹಿಸಲಾರದು. ಆದರೆ ತಾರ್ಕಿಕ ಮನಸ್ಸು ಮಾತ್ರ, ಆ ಕೆಲಸವನ್ನು ಎಷ್ಟೋ ಚೂಟಿಯಿಂದ ಮಾಡಬಲ್ಲುದು. ಶಿವಶಕ್ತಿಯು 'ಲೀಲಾ ಮತ್ತು ಕೈವಲ್ಯ' ಹೀಗೆ ಎರಡು ಅವಸ್ಥೆಗಳನ್ನು ಹಿಡಿದಿರುತ್ತದೆ. ಸಾಧಕನು ಅರಳಿದ ಕಣ್ಣಿನಿಂದ ಅದನ್ನು ನಿರೀಕ್ಷಿಸಿ—ಒಂದಾಗಬೇಕು, ಎಂದು ಬ್ರಹ್ಮವಿದರು ಒಪ್ಪಣಿಸುತ್ತಾರೆ.

ಲೋಕವತ್ತು ಲೀಲಾಕೈವಲ್ಯಂ ।

(ಬ್ರ.ಸೂ. ೨-೧-೩೩)

ಧೀರನಾದ ಶಿವಯೋಗಿಯು ಸಮಾಧಿಸ್ಥಿತಿಯಲ್ಲಿ ಶ್ವಾಸೋಚ್ಛ್ವಾಸಗಳನ್ನು ತಡೆದು ನಿಲ್ಲಿಸಿದ್ದು, ಪ್ರಜ್ಞಾವಸ್ಥೆಗೆ ಬಂದಾಗ ಹೇಗೆ ಉಸಿರಾಡುತ್ತಾನೆಯೋ ಆ ಪರಿಯಲ್ಲಿ—ಪರಮೇಶ್ವರನು ಪ್ರಳಯಕಾಲದಲ್ಲಿ ಲೋಕವನ್ನು ಅಂತರ್ಮುಖಿಯಾಗಿ ಮಾಡಿಕೊಂಡಿದ್ದು, ಸೃಷ್ಟಿಕಾಲದಲ್ಲಿ ಬಹಿರ್ಮುಖಗೊಳಿಸುತ್ತಾನೆಂದು ದಾರ್ಶನಿಕರು ಸ್ಪಷ್ಟೀಕರಿಸುತ್ತಾರೆ :

ಯಥಾ ಶಿವಯೋಗಿ ಪರಮಶಿವ ಧ್ಯಾನಕಾಲೇ ಪ್ರಾಣಾಯಾಮಾದಿನಾ ಪ್ರಾಣಾಪಾನಾದಿ ವಾಯುಸಂಕೋಚನಂ ಕರೋತಿ, ವ್ಯವಹಾರಕಾಲೇ ಪ್ರಸರಣಾದಿ ಕಾರ್ಯಂ ಕರೋತಿ, ತಸ್ಮಾತ್ಪರಮಕಾರಣ ಪರಶಿವಾತ್ಕಾರ್ಯರೂಪಂ ಜಗದನ್ಯಮಿತಿ ಸಿದ್ಧಂ । ತದನ್ಯತ್ವಾ "ಚೈಕ ವಿಜ್ಞಾನಾತ್ಸರ್ವ ವಿಜ್ಞಾನ ಪ್ರತಿಜ್ಞಾ ಸಿದ್ಧಾ ಭವತಿ ಇತಿ । "

(ಶ್ರೀ.ಭಾ. ಭಾಗ II, ಪು. ೧೯೮.)

*   *   *   *

'ಶಿವಮೇವಜಗತ್'

ವಿಶ್ವವು ವಿಶ್ವೇಶ್ವರನಲ್ಲಿ, ವಿಶ್ವೇಶ್ವರನು ವಿಶ್ವದಲ್ಲಿ. All is in Almighty and Almighty is in all. ಹೀಗೆ ವಿಶ್ವಕಾರಣವಾದ ಪರಬ್ರಹ್ಮವು—

ಋತಂ, ಸತ್ಯಂ, ಪರಂ, ಬ್ರಹ್ಮ, ಪುರುಷಂ, ಕೃಷ್ಣಪಿಂಗಲಂ, ಊರ್ಧ್ವರೇತಂ, ವಿರೂಪಾಕ್ಷಂ, ವಿಶ್ವರೂಪಿ, ಶಿವ, ಶಿವಲಿಂಗ, ಅವ್ಯಕ್ತ, ಅನಾದಿ, ಆದ್ಯಂತರಹಿತ, ಕಟಜ್ಞನಿಂ, ಅಮೃತಂ, ಈಳಿತಂ, ತ್ರ್ಯಂಬಕ, ಭಗವಾನ್, ಪರಂಜ್ಯೋತಿ, ಆತ್ಮಾ, ಯಜ್ಞೋಪವೀತಂ, ಪಶುಪತಿ, ನಾರಾಯಣ, ಪರಶಿವ, ಜ್ಞಾನಮ್, ಸತ್, ಆನಂದ, ನಿತ್ಯ, ಶ್ರುತ, ತತ್ತ್ವ, ಮಹಾರುದ್ರ, ಸದಾಶಿವ, ಸ್ಥಲ, ನಿತಾಂತ—ಮೊದಲಾದ ವಿಶೇಷಣಗಳಿಂದ ಅಥವಾ ಪರ್ಯಾಯ ಪದಗಳಿಂದ ಪ್ರಸಿದ್ಧವು. ಈ ಎಲ್ಲವೂ ಶಿವನಲ್ಲಿರುವ ಅಸಾಧಾರಣ ಗುಣಗಳು, ಅಥವಾ ಸ್ವೇಚ್ಛಾಕಲ್ಪಿತ ಮಂಗಲರೂಪಗಳು,

ಅಥವಾ ಅಪ್ರಾಕೃತ ದಿವ್ಯ ಆಕೃತಿಗಳು. ಆರ್ಷೇಯ ಗ್ರಂಥಗಳಲ್ಲಿ ಇವಕ್ಕೆಲ್ಲಾ ಸರಿಯಾದ ವಿವರಣೆಗಳು ಕಾಣಸಿಕೊಳ್ಳುತ್ತವೆ. ಪ್ರತ್ಯಕ್ಷ ಮತ್ತು ಅನುಭವದ ಮೂಸೆಯಲ್ಲಿ ಸಿದ್ಧವಾದ ಸಮ್ಯಕ್‌ವಸ್ತುಗಳು ಇವು.

ಜ್ಯೋತಿಸ್ಸ್ವರೂಪಂ ಲಿಂಗಂ ಮಾಮೇವೋಽಪಾಸಿತವ್ಯಂ ।

(ಭಸ್ಮಜಾಬಾಲ ಉಪನಿಷತ್)

ಋತಗ್‌ಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮಃ ॥

(ಯಜು, ತೈ. ಆ. ೭/೧೨)

ಓಂ ಶಿವಾಯನಮಃ । ಓಂ ಶಿವಲಿಂಗಾಯ ನಮಃ ।
ಓಂ ಜ್ವಲಾಯ ನಮಃ । ಓಂ ಜ್ವಲಲಿಂಗಾಯ ನಮಃ ।
ಓಂ ಆತ್ಮಾಯ ನಮಃ । ಓಂ ಆತ್ಮಲಿಂಗಾಯ ನಮಃ ।
ಓಂ ಪರಮಾಯ ನಮಃ । ಓಂ ಪರಮಲಿಂಗಾಯ ನಮಃ ॥

ಇತ್ಯಾದಿ.

(ಮ.ನಾ. ೧/೩೭)

ನಿತ್ಯಾಪರೋಕ್ಷವಿಜ್ಞಾನಂ ಚಿದ್ಘನಾನಂದರೂಪಿಣಮ್
ಲಿಂಗಂ ಚ ಕಾಟಜ್ಞನಿಮಮ್ರತಂ ಬ್ರಹ್ಮೇಡಿತಂ ಪರಮ್ ॥೫೧॥
ಸತ್ಯಂ ಜ್ಞಾನಂ ಸುಖಂ ನಿತ್ಯಂ ವರ್ಧಕಂ ಶರಣಂ ಶ್ರುತಮ್ ।
ಏವಮಾದೀನಿ ನಾಮಾನಿ ಸಂತಿ ಲಿಂಗಸ್ಯ ಭೂರಿಶಃ ॥೫೨॥

(ಕ್ರಿಯಾ—ಉ. ೧)

ಸರ್ವಾನನ ಶಿರೋಗ್ರೀವಃ ಸರ್ವಭೂತಗುಹಾಶಯಃ ।
ಸರ್ವವ್ಯಾಪೀ ಚ ಭಗವಾನ್ ತಸ್ಮಾತ್ಸರ್ವಗತಃ ಶಿವಃ ॥

(ಶ್ವೇತಾ, ೩–೧೧)

ಆತ್ಮಸಂಜ್ಞಶ್ಶಿವಶ್ಶುದ್ಧ ಏಕಏವಾದ್ವಯಸ್ಸದಾ ।
ಅಗ್ರೇ ಸರ್ವಮಿದಂ ದೇವಾ ಆಸೀತ್ತನ್ಮಾತ್ರಮಾಸ್ತಿಕಾಃ ॥೨॥

(ಬ್ರ. ಗೀ. ಅ. ೨)

ಮಹಾದೇವನಿಗೆ ಸಾವಿರಗಟ್ಟಲೆ ಶಿರಸ್ಸುಗಳು, ಕಣ್ಣುಗಳು, ಪಾದಗಳು, ಸದ್ಯೋಜಾತಾದಿ ಪಂಚಮಂತ್ರತನು ಸಂಬಂಧವುಂಟು. ಅರ್ಧನಾರೀಶ್ವರ, ಮಹಾನಟ, ವೃಷಭವಾಹನ, ಚಿದ್ರೂಪ, ನಿರಂಜನ, ನಿರ್ವಿಕಲ್ಪ—ಹೀಗೆ ಯಾವ ಯಾವ ಲೀಲೆ ಬೇಕೋ ಅದನ್ನೆಲ್ಲ ಆಡಿತೋರಿಸುವನು; ಮಾಡಬೇಕಾದುದನ್ನು ಮಾಡಿ ತೋರಿಸುವನು. ಅವನ ವಿಭುತ್ವ ಶಕ್ತಿಯನ್ನು ಪರೀಕ್ಷಿಸಿ ನೋಡಿ, ಪ್ರಾಯಃ ಶಾಸ್ತ್ರಕಾರರೆಲ್ಲರೂ ಅವನನ್ನು 'ಈಶ್ವರ' ನೆಂಬ ಹೆಸರಿನಿಂದಲೇ ವ್ಯವಹರಿಸಿದ್ದಾರೆ.

ಸ್ವಯಂ ಜ್ಯೋತಿರ್ಮಯ ಶಿವಲಿಂಗದಲ್ಲಿ ಯೋಗಿಗಳು ಸ್ಥೂಲ–ಸೂಕ್ಷ್ಮ–ಪರಪ್ರಕೃತಿಯ ದರ್ಶನಮಾಡಿದರು; ಶಿವನು ಶಬ್ದಾದಿ ಶಕ್ತಿವಿಸ್ಫುರಿತ ಹೃತ್ಪಂಕಜ ಸಂಸ್ಥಿತನೆಂದು ಅರಿತು ಆನಂದಪಟ್ಟರು. ಕಂಠದಲ್ಲಿ, ಕೈಯಲ್ಲಿ, ಮಸ್ತಕದಲ್ಲಿ ಶಿವಲಿಂಗವನ್ನು ಧರಿಸಿ–ಪೂಜಿಸಿದರು.

ಸಾಕ್ಷಿ :

(೧) ಓಂ ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಸ್ಸಹಸ್ರಪಾತ್ ।
ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ದಶಾಂಗುಲಮ್ ॥
(ತೈ. ಆ. ೩-೧೨-೧)

(೨) ಯಸ್ಯ ಪುಂಸಾಂ ಪರಾಶಕ್ತಿರ್ಭಾವಗಮ್ಯಾ ಮನೋಹರಾ ।
ನಿರ್ಗುಣಾ ಸ್ವಗುಣೈರೇವ ನಿಗೂಢಾ ನಿಷ್ಕಲಾ ಶಿವಾ ॥೧೨॥
ತದೀಯ ತ್ರಿವಿಧಂ ರೂಪಂ ಸ್ಥೂಲಂ ಸೂಕ್ಷ್ಮಂ ಪರಂ ತತಃ ।
ಧ್ಯೇಯಂ ಮುಮುಕ್ಷುಭಿರ್ನಿತ್ಯಂ ಕ್ರಮಃತೋ ಯೋಗಿಭಿರ್ಮುನೇ ॥೧೩॥
ನಿಷ್ಕಲಸ್ಸರ್ವದೇವಾನಾಮಾದಿದೇವಸ್ಸನಾತನಃ ।
ಜ್ಞಾನಕ್ರಿಯಾ ಸ್ವಭಾವೋ ಯಃ ಪರಮಾತ್ಮೇತಿ ಗೀಯತೇ ॥೧೪॥
ತಸ್ಯ ದೇವಾಧಿದೇವಸ್ಯ ಮೂರ್ತಿಸ್ಸಾಕ್ಷಾತ್ಸದಾಶಿವಃ ।
ಪಂಚಮಂತ್ರತನುರ್ದೇವಃ ಕಲಾಪಂಚಕವಿಗ್ರಹಃ ॥೧೫॥
....................................................
....................................................
(ಶಿ. ಪು. ಕೈ. ಸಂ. ಅಧ್ಯಾಯ ೧೨)

(೩) ವಿಶ್ವೇ ದೇವಂ ವಿದುಷಾ ವೇದಿತವ್ಯಂ ಶೈವಂ ಲಿಂಗಂ
ಪಥ್ಯೃತಂ ಸರ್ವವೇದೇಸ್ತದಾತ್ಮಶುದ್ಧ್ಯೈರ್ಮುನಿಭಿರ್ಮುಕ್ತಕಾಮ್ಯೈಃ ।
ಕಂಠೇ ಹಸ್ತೇ ಮಸ್ತಕೇ ವಾ ಭವತು ಧಾರ್ಯಂ ॥

(ಸಾ. ಶಾ.)

(೪) ಚಿದ್ರೂಪಂ ಹಿ ಪರಂ ತತ್ತ್ವಂ ಶಿವಾಖ್ಯಂ ವಿಶ್ವಕಾರಣಮ್ ।
ನಿರಸ್ತವಿಶ್ವಕಾಲುಷ್ಯಂ ನಿಷ್ಕಲಂ ನಿರ್ವಿಕಲ್ಪಕಮ್ ॥೩೧॥
ಸತ್ತಾನಂದಪರಿಸ್ಫೂರ್ತಿಸಮುಲ್ಲಾಸಕಲಾಮಯಮ್ ।
ಅಪ್ರಮೇಯಮನಿರ್ದೇಶ್ಯಂ ಮುಮುಕ್ಷುಭಿರುಪಾಸಿತಮ್ ॥೩೨॥

(ಸಿ. ಶಿ. ಪರಿ—೬)

* * * *

ಜಗತ್ತಿನ ವಿವಿಧ ಪ್ರಾಣಿಕೋಟಿಯೆಲ್ಲವೂ ಜ್ಞಾನ ಮತ್ತು ಕ್ರಿಯೆ ಎಂಬ ಎರಡು ಬಗೆಯ ಸ್ವಭಾವಗಳಿಂದಲೂ, ವಿಲಯ ಮತ್ತು ಜನನ ಎಂಬ ಎರಡು ಮಹತ್ವದ ಘಟನೆಗಳಿಂದಲೂ ಸಂಯುಕ್ತವಾಗಿರುತ್ತದೆಂಬುದು ಸುಪ್ರಸಿದ್ಧ. ಇದರಂತೆಯೇ, ಚರಾಚರ ಪ್ರಪಂಚವು ಯಾವ ಅನಾದಿಸಂಜ್ಞೆಯಲ್ಲಿ ಲೀನವಾಗುವುದೋ ಮತ್ತು ಅಲ್ಲಿಂದಲೇ ಮತ್ತೆ ಉದಯಿಸಿ ಬರುವುದೋ—ಅಂಥ ಶಾಶ್ವತ ಪರಬ್ರಹ್ಮವೇ 'ಲಿಂಗ' ವೆಂದೂ, ಕ್ರಮವರಿತು ಅದನ್ನು ಉಪಾಸನೆಮಾಡುವುದರಿಂದ ಶಿವಜ್ಞಾನವು ಉತ್ಪನ್ನವಾಗುವುದೆಂದೂ, 'ಆತ್ಮೋದ್ಧಾರ ಮತ್ತು ಲೋಕೋದ್ಧಾರಕ ಕಾರಣಕರ್ತೃ ಅದೇ ಆಗಿದೆ' ಯೆಂದೂ ಶಿವಸಿದ್ಧಾಂತವು ಪ್ರತ್ಯಕ್ಷಮಾಡಿ ಹೇಳುವುದು.

ಅವ್ಯಕ್ತ ಬ್ರಹ್ಮ ಅಥವಾ ಮಹತ್ ಚೇತನ ಸತ್ಯ ಅಥವಾ ಪರಮ ಪುರುಷ ಸ್ವಭಾವ—ಇವೆಲ್ಲವೂ ಒಂದೇ ಆಗಿರುವ ಪರಿಯನ್ನು 'ಮಂತ್ರ ಲಕ್ಷ್ಯ' ದಿಂದ ಹೇಗೆ ಗುರುತಿಸಬಹುದೋ ಹಾಗೆಯೇ, ವ್ಯಕ್ತ ಬ್ರಹ್ಮ ಸ್ವರೂಪವನ್ನು ಅಥವಾ ವ್ಯಕ್ತಾವ್ಯಕ್ತ ತೇಜಸ್ಸೌಂದರ್ಯವನ್ನು ಅಥವಾ ಪರಮಶಿವನ ಕೇವಲ ಮತ್ತು ಲೀಲಾ ಅವಸ್ಥೆಗಳ ಘನತೆಯನ್ನು 'ಲಿಂಗ ತತ್ತ್ವ ಲಕ್ಷ್ಯ' ದಿಂದ ಗುರುತಿಸಲು ಬರುತ್ತದೆಂದು ಶಿವಸಿದ್ಧಾಂತವು ಉದ್ಘೋಷಿಸುತ್ತದೆ.

ದೇಶ–ಕಾಲ ಸಂದಿಗ್ಧ ಗುಣನಿದರ್ಶನದ ಆವಾವ ಗೊಂದಲಕ್ಕೂ ಸಿಲುಕದ ಅನಾದಿ ಸಂಸಿದ್ಧ ನಿಷ್ಕಲ ವಿಭೂತಿ ಲಿಂಗತತ್ತ್ವವೇನಿದೆಯೋ ಅದು—ಆವಾವ ವೇದಾಗಮೋಕ್ತ ಧ್ಯಾನ ಪೂಜಾ ಮೊದಲಾದ ಕೈಂಕರ್ಯ ಗಳೊಂದಕ್ಕೂ ಸಿಲುಕದುದು; ಶಬ್ದ ಮುಗ್ಧವಾದುದು. ಆ ಪ್ರಸುಪ್ತ ಕೇವಲ ಜ್ಞಾನಾಗ್ನಿಯಿಂದ ಲೋಕದ ಯಾವುದೇ ರಂಜನಾ–ಭಂಜನಾದಿ ಕಾರ್ಯ ಗಳು ನಡೆಯುವಂತಿಲ್ಲ; ಬಿಡುವಂತಿಲ್ಲ.

ಹೀಗಿದ್ದ ಪರಬ್ರಹ್ಮದ ಲೀಲಾವಿಶೇಷವೇನುಂಟೋ ಅದು—ದೇಶ, ಕಾಲ ಸಂದಿಗ್ಧ ಗುಣನಿದರ್ಶನ ಪ್ರತೀಕವೆನಿಸಿ ರಂಜನೆಗೆ ಬಂದುದೂ, ಪ್ರಪಂಚಕೂಟದ ದೆಸೆಯಿಂದ ಸಕಲವೆಂದೂ, ಕೂಟಸ್ಥವೆಂದೂ, 'ಸತ್ಯಂ-ಶಿವಂ-ಸುಂದರಂ' ಪ್ರಕೃತಿಲಕ್ಷಣವೆಂದೂ ಹೇಳಿಸಿಕೊಳ್ಳುವುದು ಆಯಿತು. ಆ ಎರಡನೆಯ ಅವಸ್ಥಾವಿಶೇಷಕಾಲದ, ಅಂಥ ವ್ಯಕ್ತ ಲಿಂಗತತ್ತ್ವವು ಧ್ಯಾನ ಪೂಜೆ ಮುಂತಾದ ಉಪಚಾರಗಳಿಗೆ ಸಿಲುಕತಕ್ಕುದೂ, ಶಿವಾಕ್ಷರ ಬ್ರಹ್ಮವೂ ಆಗಿ ಒಪ್ಪುತ್ತಿದೆ. ಅಲ್ಲಿ ಸದ್ಯೋಜಾತಾದಿ ಪಂಚಬ್ರಹ್ಮ ಮೂರ್ತಿತ್ವವೂ, ಶಿವ-ಶಕ್ತಿ ಅವಿನಾಭಾವ ಸಂಬಂಧವೂ ಉಂಟು. ವಿಶ್ವದ ಉತ್ಪತ್ತಿಗೆ ಅದೇ ಆದಿ ಬೀಜವು.

ಮೂರನೆಯದು—ಸಕಲ ನಿಷ್ಕಲ ಸಮಸಮುಚ್ಚಯ ಲಿಂಗ ತತ್ತ್ವವಿವೇಚನೆ. ಮಾನವನು ಬುದ್ಧಿವಿಕಾಸಸ್ಥಿತಿಯಲ್ಲಿ, ಯಾವುದೊಂದೂ ಭಯ ಮತ್ತು ಶೋಕಗಳಿಂದ ತಪ್ತನಾಗದೆ ಜಾಗೃತನಾಗಿ ಕುಶಲನಾಗಿ ಇದ್ದಾಗ—ಆ ತನ್ನ ಆಹ್ಲಾದ ಕ್ಷಣದಲ್ಲಿ ಜಗತ್ತಿನ ಮಾತಾಪಿತರಾದ ಶಿವಶಕ್ತಿಯರ ರೀತಿ ನೀತಿಯನ್ನು ಚರ್ಚಿಸಿ, ಮನನ-ನಿದಿಧ್ಯಾಸನ ಕರ್ತವ್ಯ ಗಳನ್ನು ಸಾಗಿಸಿ, ನಿಜಕ್ಕೆ ತಲೆಬಾಗುತ್ತಾನೆ.

ಮಹಾಕವಿ ಕಾಳಿದಾಸನ—

"ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ |
ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ ||"

ಈ ಶ್ಲೋಕವು ಮೇಲಿನ ಸಂಪ್ರದಾಯವನ್ನು ಪ್ರತಿಬಿಂಬಿಸುತ್ತಿದೆ. ಆದ್ಯದೇವತ್ವದ ಸಕಲ ನಿಷ್ಕಲ ತತ್ತ್ವ ಸಮಾನಾರ್ಥ ಅಥವ ಶಿವ ಮತ್ತು

ಶಕ್ತಿ ಅನುಗ್ರಹ ಪ್ರಾರ್ಥನಾಧರ್ಮ ಇಲ್ಲಿ ಸೂಚಿತವಾಗಿದೆ. ಇಂತಹ ಶಿವಶಕ್ತಿಗೆ ಅಭಿಷೇಕ, ಸಹಸ್ರಬಿಲ್ವಾರ್ಚನೆ, ಪುರಾಣಶ್ರವಣ, ನಾಮ ಸಂಕೀರ್ತನ, ಸ್ಮರಣೋತ್ಸವ ಸರ್ವವನ್ನೂ ನಡೆಸಿ, ಸಾಧಕನು ಯಶಸ್ವಿ ಯಾಗ ಬಯಸಿದರೂ ಬಯಸಲಿ; ಅದು ಅವನ ಇಷ್ಟ. ಆದರೆ, ಮೂಲ ಸಿದ್ಧಾಂತಕ್ಕೆ ಎರವಾಗದಿದ್ದರೆ ಸಾಕು!

ಅಪ್ಪಯ್ಯರು ಉಪಾಸಿಸ ಹೇಳಿದ 'ಶಿವತತ್ತ್ವದೃಷ್ಟಿ' ಈ ಮೂರನೆಯ ಕ್ರಮದಲ್ಲಿ ಸೇರಿಹೋಗಿದೆ. ಲೋಕದ ಆಗು ಹೋಗು ಪಂಚಕೃತ್ಯವಷ್ಟಕ್ಕೂ ನಿದರ್ಶನಮಾತ್ರವಾದ ಈ ಉಪಾಸನಾ ನಿಷ್ಠೆ ಸನಾತನವಾದುದು; ಸಮೀಚೀನವಾದುದು; ವೇದ ವೇದಾಂತ ಆಗಮ ಪ್ರಖ್ಯಾತವಾದುದು; ಶಿವಶರಣರು ಮೆಚ್ಚಿ ಅವಲಂಬಿಸಿದುದು ಎಂಬರ್ಥದಲ್ಲಿ:

ಲಯಂ ಗಚ್ಛತಿ ಯತ್ರೈವ ಜಗದೇತಚ್ಚರಾಚರಮ್ ।
ಪುನಃ ಪುನಃ ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮ ಶಾಶ್ವತಮ್ ॥೩೭॥
ತಸ್ಮಾಲ್ಲಿಂಗಮಿತಿ ಖ್ಯಾತಂ ಸತ್ತಾನಂದ ಚಿದಾತ್ಮಕಮ್ ।
ಬೃಹತ್ವಾದ್ಬೃಂಹಣತ್ವಾಚ್ಚ ಬ್ರಹ್ಮಶಬ್ದಾಭಿಧೇಯಕಮ್ ॥೩೮॥
.............................................

(ಸಿ.ಶಿ. ಪರಿ–೬.)

ಶಿವ ಏವ ಸ್ವಯಂ ಲಿಂಗಂ ಲಿಂಗಂ ಗಮಕಮೇವ ಹಿ ।
ಶಿವೇನ ಗಮ್ಯತೇ ಸರ್ವಂ ಶಿವೋ ನಾನ್ಯೇನ ಗಮ್ಯತೇ ॥೨॥
ಜಡಂ ಹಿ ಗಮ್ಯತೇಽನ್ಯೇನ ನಾಜಡಂ ಮುನಿಪುಂಗವಾಃ ।
ಶಿವೋ ನೈವ ಜಡಸ್ಸಾಕ್ಷಾತ್ಸ್ವಪ್ರಕಾಶೈಕಲಕ್ಷಣಃ ॥೩॥
ಸ್ವಯಂಜ್ಯೋತಿರಿತಿ ಪ್ರಾಹು ಶ್ರುತಿಸ್ಸಾಧ್ವೀ ಮಹೇಶ್ವರಮ್ ।
ತಸ್ಯ ಭಾಸಾ ಸರ್ವಮಿದಂ ವಿಭಾತೀತ್ಯಪಿ ಚಾಹ ಹಿ ॥೪॥

ಶಿವಸ್ಯ ಲಿಂಗಂ ಕಥಯಂತಿ ಕೇಚಿ
ದ್ಬಹುಪ್ರಕಾರಂ ವ್ಯವಹಾರದೃಷ್ಟ್ಯಾ ॥
ಸ ತತ್ತ್ವದೃಷ್ಟ್ಯಾ ಪರಮೇಶ್ವರಸ್ಯ
ಸ್ವಯಂಪ್ರಭಸ್ಯಾಸ್ಯ ನ ಚಾಸ್ತಿ ಲಿಂಗಮ್ ॥೧೩॥

ಯದ್ವಲ್ಲಿಂಗತಯಾ ಶಿವಸ್ಯಕಥಿತಂ ತತ್ತ್ವಜ್ಞಡಂ ವಸ್ತುತೋ ।
ಲಿಂಗಂ ನೈವ ಭವೇದ್ವಿಶುದ್ಧಮತಯೋ ಜ್ಞಾನಂ ಹಿ ಲಿಂಗಂ ವಿದುಃ ॥
ತಸ್ಮಾದೇವ ಮಹೇಶ್ವರಃ ಪರತರಸ್ತತ್ತ್ವಜ್ಞಡೋಪಾಧಿಕ ।
ಶ್ಚಿದ್ರೂಪಃ ಪ್ರಥಿತಃ ಪ್ರಭೋರ್ಗಮಕಮಿತ್ಯರ್ಥಸ್ಥಿತಿಸ್ಸ್ವಸ್ಯತು ॥೨೧॥

...........................................

ಲೀಯತೇ ಹಿ ಶಿವಾದನ್ಯದಶೇಷಮಶಿವಂ ಶಿವೇ ।
ಅತೋ ಲಿಂಗಂ ದ್ವಿಜಶ್ರೇಷ್ಠಾ ಅವಿನಾಶೀ ಪರಸ್ಸ್ವಯಮ್ ॥೩೬॥
ಅನ್ಯೇ ಚ ಯೋಗಿನೋ ವಿಪ್ರಾ ಆಮನಂತಿ ಶಿವಸ್ಯತು ।
ಆಧಾರೇಷು ಶರೀರೇಸ್ಮಿನ್ ಲಿಂಗಾನಿ ಪರಮಾತ್ಮನಃ ।೩೭॥

(ಸೂ-ಸಂ, ಯ-ಖಂ, ಅಧ್ಯಾಯ ೨೮)

ಮಂಗಲ–ಅಮಂಗಲ ಸಂಕೀರ್ಣಮಯ ಬಾಳುವೆ, ಅತೃಪ್ತಿಮಯ ಜೀವನ—ಇಂಥ ಹಲವಾರು ವೈಯಕ್ತಿಕ ಸಮಸ್ಯೆಗಳ ಕತ್ತರಿಗೆ ಸಿಲುಕಿ ಜರಾಜೀರ್ಣದೇಹಿಯಾದ ಮಾನವ ತನಗಿರುವ ಎಲ್ಲಾ ಕೊರತೆಗಳನ್ನು ನೀಗಿಕೊಂಡು ಕಲ್ಯಾಣದ ಅಚ್ಚ ಪ್ರಭಾವದಲ್ಲಿ ಪ್ರಭಾವಿತನಾಗಬೇಕೆಂದಿದ್ದರೆ–

ಈಶ್ವರಾತ್ ಜ್ಞಾನಮನ್ವಿಚ್ಛೇತ್ ।

ಇತ್ಯಾದಿ ವಾಕ್ಯಗಳನ್ನು ಮುಂದಿಟ್ಟುಕೊಂಡು, ಆ ಬೆಳಕನ್ನು ಅನುಸರಿಸಿ ಎಚ್ಚರಿಕೆಯಿಂದ ನಡೆಯಬೇಕು; ವ್ಯಕ್ತಿಗತಿಯಿಂದ ಸಮಷ್ಟಿಗತಿಗೆ ಜಾಗಬೇಕು.

ಆ ಎಲ್ಲ ಸಂದರ್ಭಗಳಲ್ಲೂ ಶಿವ (ಲಿಂಗ) ತತ್ತ್ವದ ಉಗಮ-ಉತ್ಥಾನಗಳನ್ನು ಕುರಿತು ಬುಡದಿಂದ ತುದಿಯತನಕ ಚೆನ್ನಾಗಿ ವಿಚಾರಿಸಿ ನೋಡಬೇಕು. ಶಿವತತ್ತ್ವ–ಜಗತ್ತತ್ತ್ವ ಈ ಎರಡರ ಹೋಲಿಕೆ ಒಂದಾಗಿರುವ ಗುಟ್ಟನ್ನು ಸೂಕ್ಷ್ಮ ಬುದ್ಧಿಯಿಂದ ಪರೀಕ್ಷಿಸಿ ತಿಳಿದುಕೊಳ್ಳಬೇಕು.

ಆ ವಿಚಾರದ ತಾರ್ಕಣ್ಯದಿಂದ ತನ್ನತನದ ಮತ್ತು ವಿಶಾಲ ವಿಶ್ವದ ನಿಶ್ಚಿತಜ್ಞಾನ ಗೊತ್ತಾಗುತ್ತಿದೆ. ಆಗಿನಿಂದಲೇ ಮನಸ್ಸುಮಾಡಿ, ನೀತಿ–ಧರ್ಮಗಳ ಬಂಧುರ ನಿಚ್ಚಣಿಗೆಯ ಮೇಲೆ ಹತ್ತಲಾರಂಭಿಸಿದನೆಂದರೆ, ಸಫಲ ಮಾನವೀಯತೆಯ ಉತ್ತರದಾಯಿತ್ವವನ್ನು ಪುನಃ ದೊರಕಿಸಿಕೊಳ್ಳಬಲ್ಲನು–

ಹಠವಾದಿ ಸಾಧಕನು. ಶಿವತತ್ತ್ವದ ಅನಂತಪ್ರಭೆ ಮತ್ತು ಅನರ್ಘ್ಯತೆಗ ಳೊಳಗೆ ಸೂಕ್ತ ಶಿವಾದ್ವೈತದ ಉತ್ತರವಾಗಿ ತಾನು ನಿಂತು, ಪ್ರಾಪಂಚಿಕ ಹಾಗೂ ಪಾರಮಾರ್ಥಿಕವಾಗಿ ಉಜ್ವಲ-ಉಪಮಾತೀತ-ಸುರಕ್ಷಿತ ಜೀವನ ಸಾಗಿಸಬಹುದು. ಕಡೆಗೆ, ವಿಶ್ವವಿಶಾಲ ವ್ಯಾಪ್ತಿ ದ್ಯೋತಕವೂ ಸತ್ಯದುಂದು ಭಿಯು ಆಗಲೂ ಬಂದೀತು, ಕ್ರಮ ಸಾಧನೆ ಬಲಿತ ಬಳಿಕ.

* * * *

ಇನ್ನು, ಶಿವಮಂತ್ರ–ಶಿವಲಿಂಗ ಪ್ರಸನ್ನ ಯೋಗಚಿಹ್ನೆ.

ದೇಹ–ಮನಸ್ಸು, ಎರಡೂ ವಿಶ್ವಸಮಾಧಾನಕ್ಕಾಗಿ ವಿಶ್ವೇಶ್ವರನ ಒಲ ವಿಗಾಗಿ ತೇಯುತ್ತಾ ಹೋದವೆಂದರೆ, ಆ ಮಹದಾಶ್ರಯವನ್ನು ಪಡೆದ ನೈಷ್ಠಿಕನು ಯುಗಪುರುಷನಾಗುತ್ತಾನೆ, ಸತ್ಯನಾಗುತ್ತಾನೆ. ವಿದ್ಯುತ್, ಬೆಂಕಿ, ಸೂರ್ಯ ಈ ಬಗೆಯ ಶಾಖದ ಸಂಯೋಗದಿಂದಾಗಿ—ನೀರು, ಹಾಲು ಮುಂತಾದ ದ್ರವ ವಸ್ತುಗಳು ವಿಕಾಸವಾಗುವುದಿಲ್ಲವೇ ಹಾಗೆ ; ಕಾವು ಸೋಂಕಿದ ಫ್ಲಾಸ್ಕಿನ (ಗಾಜಿನ ಕೊಳವೆ) ನೀರು ಮೇಲೆ ಏರುವುದಿ ಲ್ಲವೇ–ಆ ಪ್ರಕಾರ ; ವೈದ್ಯರು ಉಪಯೋಗಿಸುವ ಉಷ್ಣಮಾಪಕ ಯಂತ್ರದ ಒಳಗಿರುವ ಪಾದರಸವು ಉಷ್ಣಾಂಶವನ್ನು ಕಳೆದು ಕೊಂಡ ನಂತರ ಶೈತ್ಯದಿಂದ ಸಂಕುಚಿತವಾಗುವುದಿಲ್ಲವೆ—ಆ ರೀತಿಯಲ್ಲಿ. ಇನ್ನೂ, ಶಾಶ್ವತವಾದ ನಿರಂತರ ವಾದ ಅಧಿಕ ಫಲ (ಲಾಭೋಽಧಿಕಂ ಫಲಂ. ಅ. ಕೋ) ವಾವುದೆಂದರೆ— ಅದು ಶಿವಯೋಗದ ಪೂರ್ಣಾನುಕೂಲ ವೇಳೆಯಲ್ಲಿ ಮಾತ್ರ ಆಗತಕ್ಕದ್ದು. ಸಚ್ಛಾಸ್ತ್ರದ ಭಾಷೆಯಲ್ಲಿ ಅದಕ್ಕೆ 'ನಿರಸ್ತೋಪಾಧಿಸ್ಥಲ' ವೆಂದು ಸಂಜ್ಞೆ.

ಫಲಾಭಿಸಂಧಿನಿರ್ಮುಕ್ತಮೀಶ್ವರಾರ್ಪಿತಕಾಂಕ್ಷಿತಂ ।
ನಿರುಪಾಧಿಕಮಾಖ್ಯಾತಂ ದಾನಂ ದಾನವಿಶಾರದೈಃ ॥೮೨॥

(ಸಿ.ಶಿ. ಪರಿ–೯)

ಇದಕ್ಕೆ ಸರಿಯಾದ ರಾಜಾ ಭರ್ತೃಹರಿಯ ವಾಕ್ಯ :

"ಮನಸ್ಸು, ಮಾತು ಮತ್ತು ಶರೀರದ ತುಂಬ ಅಮೃತೋಪಮ ಪುಣ್ಯರಸ ತುಂಬಿರುವ ಸಜ್ಜನರು—ಹುಟ್ಟು ಸಾವಿನ ಸಂಸಾರ ಪಾಶಕ್ಕೆ

ಸಿಕ್ಕುವುದು ದುರ್ಲಭವು. ತಾವು ಮಾಡುವ ಸತ್ಕೃತ್ಯಗಳಿಂದ—ಉಪಕಾರ ಮಹಿಮೆಯಿಂದ ಇಡಿಯ ಜಗತ್ತನ್ನೇ, ತ್ರಿಭುವನವನ್ನು ಕೂಡ ಅವರು ತೃಪ್ತಿಗೊಳಿಸಬಲ್ಲರು. ಇಷ್ಟರಲ್ಲಿಯೇ ಮುಗಿಯದು ಆ ಪವಾಡ. ಮುಂದುವರಿದು ಇತರರಲ್ಲಿಯ ಸಾಸಿವೆಕಾಳಿನಷ್ಟು ಒಳ್ಳೆಯ ಗುಣವನ್ನು ಪರ್ವತಾಕಾರವಾಗಿ ಬೆಳೆಯಿಸುವರು ; ಬಾಯಿತುಂಬ ಹೊಗಳುವರು. ಸ್ವಾರ್ಥವಿರಹಿತರಾದ ಇಂಥ ಮಹಾನುಭಾವರು—ಸಜ್ಜನರು ಸಿಕ್ಕುವುದು ನಿಜಕ್ಕೂ ದುರ್ಲಭವೇ ಸರಿ.''

ಮನಸಿ ವಚಸಿ ಕಾಯೇ ಪುಣ್ಯಪೀಯೂಷಪೂರ್ಣಾ
ಸ್ತ್ರಿ ಭುವನಮುಪಕಾರಶ್ರೇಣಿಭಿಃ ಪ್ರೀಣಯಂತಃ ||
ಪರಗುಣ ಪರಮಾಣೂನ್ ಪರ್ವತೀಕೃತ್ಯ ಲೋಕೇ
ನಿಜಹೃದಿ ವಿಲಸಂತಾಃ ಸಂತಿ ಸಂತಃ ಪ್ರಿಯಂತಃ ||೭೯||

(ಭರ್ತೃಹರಿ—ನೀತಿ ಶತಕ)

ತಿರುವಳ್ಳುವರು ಹೇಳಿದುದು :

" ಕೀರ್ತಿಯೆಂದರೆ, ಸತ್ಯವನ್ನೊಳಗೊಂಡ ಪರಮಾತ್ಮನ ಕೀರ್ತಿಯೇ ಕೀರ್ತಿ. ಉಳಿದ ಹೊಗಳಿಕೆಗಳಲ್ಲಿ ಏನೇನೂ ಹುರುಳಿಲ್ಲ. ಜೀವಮಾನದ ಸಫಲತೆಯೆಂದರೆ, ಜನ್ಮವಿಡೀ ಅವಿದ್ಯೆಯನ್ನು ಅಜ್ಞಾನವನ್ನು ಸಂಪೂರ್ಣವಾಗಿ ದೂರೀಕರಿಸುವುದೇ ಆಗಿದೆ ಎಂದೆನ್ನಬೇಕು. ಜ್ಞಾನದ ಉದಯವಾದಲ್ಲಿ ಕತ್ತಲೆಯ–ಅಜ್ಞಾನದ ಕರ್ಮ ನಿಲ್ಲಲಾರದು. ಭಗವಂತನ ಸತ್ಯ ಕೀರ್ತಿಯನ್ನು ಅರ್ಥಾತ್ ಶಿವನ ಯಥಾರ್ಥ ಪರಿಚಯವನ್ನು ಪಡೆದ ಸಾಧಕರನ್ನಾದರೂ, ಅವರು ಮಾಡಿದ ಸತ್ಕರ್ಮ ದುಷ್ಕರ್ಮಗಳ ಶಕ್ತಿಯು ಮುಟ್ಟಲರಿಯವು. ಅವರು ಮುಕ್ತರೇ ಸರಿ.

ಇರುಳ್ ಶೇರಿರುವಿನ್ನೈಯುಮ್ ಶೇರಾ ಇಳೈವನ್ |
ಪೊರುಳ್ ಶೇರ್ ಪುಗಬುರಿನ್ದಾರ್ ಮಾಟ್ಟು ||

(ತಿರುಕುರುಳ್, ಅಧಿಕಾರ ೧/೫)

ಸತ್ಯ ಶುದ್ಧ ಚಾರಿತ್ರ್ಯ ಸ್ಥಲದಲ್ಲಿ ನಿಂತ ಜೀವಿಗೆ—ದೇಹದ ಅರಿವಿಂಗೆ ಜೀವವೂ, ಜೀವದ ಅರಿವಿಂಗೆ ದೇಹವೂ ಅನುಸ್ಯೂತವಾಗಿರುವ ಬಗ್ಗೆ ಗೋಚ

ರಿಸುವುದು ; ವಿಶ್ಲೇಷಣಾತ್ಮಕ ' ಕ್ಷೇತ್ರ – ಕ್ಷೇತ್ರಜ್ಞ 'ಪ್ರಜ್ಞೆ ಪ್ರಭಾವ ಬೀರುವುದು ; ಉನ್ನತ ಧರ್ಮದ ಅಧ್ಯಯನಶೀಲನಾಗಿ, ಉತ್ತಮನಾಗಿ ಉಳಿಯಲು ಅವಕಾಶ ಸಿಕ್ಕುವುದು. ಅವನು ಉಪಾಸನೆಮಾಡುವ ' ಲಿಂಗ—ಪೀಠಿಕೆ 'ಗಳ ಸಂಗಮ, ಅಥವ ಲಿಂಗಕ್ಕೂ ಮಂತ್ರಕ್ಕೂ ಇರುವ ' ವಾಚ್ಯ—ವಾಚಕ ' ಸಂಯೋಗ ವಿಶೇಷವು ಈ ಸಂಗತಿಯನ್ನು ಯಥಾವತ್ ಸಮರ್ಥಿಸಲೂ ಸಮರ್ಥಿಸುತ್ತದೆ.

ಲಿಂಗಂ ನಮಃ ಪದಮಿದಂ ಶಿವ ಏಷ ಲಿಂಗಂ
ಸಂಬಂಧಮಾದಾಯ ಪದಮೇತದುದೀರಿತಂಸ್ಯಾತ್ ||
ಲಿಂಗಾಂಗ ಸಂಗಮ ಪದತ್ರಯ ಬೋಧನಾರ್ಥಂ
ಮಿತ್ರೋಽಯಮಾಪ ನಿಗಮಾಗಮ ಮಂತ್ರರಾಜಃ ||

ಇತಿ.

' ನಮಃ ' ಕಾರಗಳೇ ಪೀಠವು. ' ಶಿ ' ಕಾರವೇ ನಡುವು. ' ವಾ ' ಕಾರವೇ ಗೋಮುಖವು. ' ಯ ' ಕಾರವೇ ಗೋಳಕವು. ' ಓಂ ' ಕಾರವೇ ಲಿಂಗವು. ಹೀಗೆ, ಶಿವಲಿಂಗ–ಶಿವಷಡಕ್ಷರ ಮಂತ್ರ ಸಮನ್ವಯ ಸುಪ್ರಸಿದ್ಧವು.

ನಮಃ ಪೀಠಮಿತಿ ಪ್ರೋಕ್ತಂ ಶಿಕಾರಂ ಮಧ್ಯಮೀರಿತಮ್ |
ವಾಕಾರಂ ಗೋಮುಖಂ ವೃತ್ತಂ ಯಕಾರಂ ಗೋಲಕಂ ಸ್ಮೃತಮ್ ||
ಓಂಕಾರಂ ಲಿಂಗಮಾಖ್ಯಾತಂ ಷಡ್ವರ್ಣಂ ಲಿಂಗಮುಚ್ಯತೇ ||

(ಸಿದ್ಧಾಂತ ಸಾರಾವಳಿ)

" ಇದ್ದರೆ ಹೀಗೇ ಇರಬೇಕು. ಸ್ತ್ರೀ ಪುರುಷ ಸಮಾನ ಗುಣ ಸ್ವಭಾವ ವಿಶಿಷ್ಟ ಶಕ್ತಿವಿಶೇಷಾದ್ವೈತವನ್ನೇ ಉಪಾಸಿಸಬೇಕು. ಜಗಜಗಲ ಮುಗಿಲಗಲ ಮಿಗೆಯಗಲದ ಸರ್ವಮೂಲ ' ಸ್ಥಲ ' ತತ್ತ್ವವು ' ಅಂಗುಷ್ಠ ಮಾತ್ರಃ ' ಎಂದೆನಿಸಿಕೊಂಡಿತು ; ' ಅಣೋರಣೀಯಾನ್ ಮಹತೋ ಮಹೀಯಾನ್ ' ಎಂದೆನಿಸಿಕೊಂಡಿತು—ಉಪಾಸಕನ ಸತ್‌ಪರಿಸ್ಥಿತಿಯನ್ನು ಬಯಸಿದ ಕಾರಣದಿಂದ ಅದು ಸಾಧಕ ದೇಹದ ಮೂರು ಜಾಗಗಳಲ್ಲಿ ಚೇತಃ ಸ್ವರೂಪದಿಂದ ಇದ್ದುಕೊಂಡಿತು. ಅಂತರಂಗದಲ್ಲೇ ನಿಂತು ಸರ್ವಜೀವರನ್ನೂ ಆಟವಾಡಿಸಹತ್ತಿತು. ಸ್ವಯಂಶಕ್ತಿ ಸಾಮರ್ಥ್ಯದಿಂದ ಸ್ವಯಂಭು

ಅದ್ವೈತ ಪ್ರಕಾಶದಿಂದ ಅದು ತನ್ನ ಒಳಗೂ-ಹೊರಗೂ ಇದ್ದೇ ಇದೆ. ಅದರ ನೈಷ್ಠಿಕಭಕ್ತನು ನಾನು ; ದೇವ ಸನ್ನಿಹಿತ ದಿವ್ಯಜೀವಿ ನಾನು"—ಎಂದೆನ್ನುತ್ತಾ ಶಿವಭಕ್ತನು ತಿಳಿದನು. ವಿಶ್ವಪೂಜ್ಯ ಲಿಂಗವಂತನಾದನು.

ಪರಂ ಬ್ರಹ್ಮ ಮಹಾಲಿಂಗಂ ಪ್ರಪಂಚಾತೀತಮವ್ಯಯಮ್ |
ತದೇವ ಸರ್ವಭೂತಾನಾಮಂತಸ್ತ್ರಿಸ್ಥಾನಗೋಚರಮ್ ||೩೩||
ಮೂಲಾಧಾರೇ ಚ ಹೃದಯೇ ಭ್ರೂಮಧ್ಯೇ ಸರ್ವದೇಹಿನಾಮ್ |
ಜ್ಯೋತಿರ್ಲಿಂಗಂ ಸದಾ ಭಾತಿ ಯದ್ಬ್ರಹ್ಮೇತ್ಯಾಹುರಾಗಮಾಃ ||೩೪||
ಅಪರಿಚ್ಛಿನ್ನಮವ್ಯಕ್ತಂ ಲಿಂಗಂ ಬ್ರಹ್ಮ ಸನಾತನಮ್ |
ಉಪಾಸನಾರ್ಥಮಂತಃಸ್ಥಂ ಪರಿಚ್ಛಿನ್ನಂ ಸ್ವಮಾಯಯಾ ||೩೫||

(ಸಿ.ಶಿ. ಪರಿ—೬

ಪರಮೇಶ್ವರನಿಗೆ ವ್ಯಕ್ತ, ಅವ್ಯಕ್ತ, ವ್ಯಕ್ತಾವ್ಯಕ್ತ ಹೀಗೆ ಮೂರು ಮುಖ್ಯ ಲಕ್ಷಣಗಳಿದ್ದು—ಗಿರಿ ಶಿಖರ ಮಹಾನದಿಗಳ ತೀರ ಪ್ರದೇಶ, ಸಕಲ ಚರಾಚರ ಪ್ರಾಣಿ ಸಮೂಹ—ಮುಂತಾಗಿ ಎತ್ತ ನೋಡಿದೊಡತ್ತ ಒಡಮೂಡಿ ಶೋಭಿಸುವ, ಆ ಮಂತ್ರಪೂತ ಪರಮತತ್ತ್ವವನ್ನು—ಸಚ್ಛಿಷ್ಯನ ಕರಸ್ಥಲಕ್ಕೆ ಇಷ್ಟಲಿಂಗವಾಗಿ, ಮನಃಸ್ಥಲಕ್ಕೆ ಪ್ರಾಣಲಿಂಗವಾಗಿ, ಭಾವಸ್ಥಲಕ್ಕೆ ಸಕಲ—ನಿಷ್ಕಲ ತೃಪ್ತಿಲಿಂಗವಾಗಿ ಕರುಣಿಸುತ್ತಾನೆ ಶ್ರೀ ಗುರುವು. ಅಧಿಕಾರಿ ಧರ್ಮಕ್ಕೆ ಅನುಸಾರವಾಗಿ ಆಗಬೇಕಾದುದು ಆ ತಿರೋಧಾನ ಕ್ರಿಯೆ. ಪ್ರಥಮಾಧಿಕಾರಿಗೆ ಸ್ಥೂಲಲಿಂಗ. ಅದು ವ್ಯಕ್ತ ಪ್ರಪಂಚರೂಪ ಸಂಬಂಧವಾದುದು. ಸಾಧಕ ತನುವಿನ ಮೇಲೆ ಅದು ಅನವರತ ಧರಿಸತಕ್ಕದ್ದು. ಅದಕ್ಕೆ ತಕ್ಕ ಪೂಜೋಪಕರಣ. ಮಧ್ಯಮನಿಗೆ ಸೂಕ್ಷ್ಮಲಿಂಗ. ಅದು ಅವ್ಯಕ್ತ ರೂಪುಳ್ಳುದು. ಪ್ರಾಣಪಟಲದ ಮೇಲೆ ಧಾರಣ. ದೇಹೇಂದ್ರಿಯ ವಿಭಾಗಕ್ಕೆ ಅನುಸಾರವಾಗಿ ಅಲ್ಲಲ್ಲಾ ಅದರ ವ್ಯಾಪ್ತಿ. ಚೋದನಾಕ್ರಿಯೆ—ಅದಕ್ಕೆ ತಕ್ಕ ಪೂಜೋಪಕರಣ ವಿಶೇಷ. ಮೂರನೆಯದಾಗಿ ಕಾರ್ಯಕಾರಣ ಬಿಂದ್ವಾತ್ಮಕ ತೃಪ್ತಿಲಿಂಗದ ಉಪಾಸನೆ ಉತ್ತಮಾಧಿಕಾರಿಗೆ. ಅದಾದರೂ ವ್ಯಕ್ತಾವ್ಯಕ್ತ ಭಾವವಿಶಿಷ್ಟವಾದುದು. ಮನಸ್ಸು—ಭಾವ—ತನು ಈ ಮೂರನ್ನೂ ಒಂದುಗೂಡಿಸಿ ಚರಿಸತಕ್ಕವರಿಗೆ ಮಾತ್ರ ಪ್ರಸನ್ನವಾಗತಕ್ಕುದು ಅದು. ಅದಕ್ಕೆ ತಕ್ಕಂತೆ ಪೂಜೋಪಕರಣಗಳ ಏರ್ಪಾಡು.

ಅಯಂ ಮೇ ಹಸ್ತೋ ಭಗವಾನಯಂ ಮೇ
ಭಗವತ್ತರಃ। ಅಯಂ ಮೇ ವಿಶ್ವಭೇ-
ಷಜೋಽಯಂ ಶಿವಾಭಿಮರ್ಶನಃ॥
(ಋಕ್-ಸಂ. ೧೦। ೬೦।೧೨

ಮಂತ್ರಪೂತೇ ಕಲಾಂ ಶೈವೀಂ ಯೋಜಯೇದ್ವಿಧಿನಾ ಗುರುಃ।
ಶಿಷ್ಯಸ್ಯ ಪ್ರಾಣಮಾದಾಯ ಲಿಂಗಂ ತತ್ರ ನಿಧಾಪಯೇತ್ ।೨೩॥
ತಲ್ಲಿಂಗಂ ತಸ್ಯ ತು ಪ್ರಾಣೇ ಸ್ಥಾಪಯೇದೇಕಭಾವತಃ।
ಏವಂ ಕೃತ್ವಾ ಗುರುರ್ಲಿಂಗಂ ಶಿಷ್ಯಹಸ್ತೇ ನಿಧಾಪಯೇತ್ ॥೨೪॥
ಲಿಂಗಂ ತು ತ್ರಿವಿಧಂ ಪ್ರೋಕ್ತಂ ಸ್ಥೂಲಂ ಸೂಕ್ಷ್ಮಂ ಪರಾತ್ಪರಮ್ ।
ಇಷ್ಟಲಿಂಗಮಿದಂ ಸ್ಥೂಲಂ ಯದ್ಬಾಹ್ಯೇ ಧಾರ್ಯತೇ ತನೌ ।೨೫॥
ಪ್ರಾಣಲಿಂಗಮಿದಂ ಸೂಕ್ಷ್ಮಂ ಯದಂತರ್ಭಾವನಾಮಯಮ್ ।
ಪರಾತ್ಪರಂ ತು ಯತ್ಪ್ರೋಕ್ತಂ ತೃಪ್ತಿಲಿಂಗಂ ತದುಚ್ಯತೇ ॥
ಭಾವನಾತೀತಮವ್ಯಕ್ತಂ ಪರಬ್ರಹ್ಮ ಶಿವಾಭಿದಮ್ ।೪೯॥
(ಸಿ.ಶಿ. ಪರಿ–೬

* * * *

ಗರ್ಭದ ಎಂಟನೆಯ ತಿಂಗಳಲ್ಲಿ ಅಥವ ಜನಿಸಿದ ಕೂಡಲೇ, ಶಿಶುವಿಗೆ 'ಶಿವಲಿಂಗ ಧಾರಣೆ' ಮಾಡುವುದು ವೀರಶೈವರ ಬಹುಕಾಲದ ರೂಢಿ. ಮಾತೃಕುಕ್ಷಿಯಲ್ಲಿದ್ದಾಗಲೇ ಅದಕ್ಕೆ ಗುರುಕಾರುಣ್ಯ ಪ್ರಾಪ್ತವಾಗಿಬಿಡಲಿ—ಎಂಬುದೇ ಇಲ್ಲಿ ಮುಖ್ಯ ಉದ್ದೇಶ. ಲಿಂಗವನ್ನು ಧರಿಸಿ, ಲಿಂಗವಾಗಿ ಲಿಂಗವನ್ನು ಉಪಾಸನೆ ಮಾಡುವ ಸಮೀಚೀನ ಪಕ್ಷ ಇದಾಗಿದೆ.

ಒಳಗೆ ಪರವಸ್ತುವಿದೆ; ಆದರೆ ಏನಾಯಿತು? ಬಾಹ್ಯದ ಇಷ್ಟಲಿಂಗ ಧಾರಣ, ಪೂಜಾ, ಧ್ಯಾನ ಬೇಕೇಬೇಕು. ಪ್ರಭಾವಿತ ಶಿವಜ್ಞಾನ ಮಗುವಿಗೆ ದೊರಕೊಳ್ಳಲು ಅದೇ ಬೀಜ. ಹೊರಗಿದ್ದ ಗಾಳಿ-ಶಾಖ-ಆಹಾರಾಂಶವಷ್ಟೂ ಉಪಯುಕ್ತ ಪ್ರಮಾಣದಲ್ಲಿ ತಾಯಿಯ ಮೂಲಕ ಗರ್ಭಸ್ಥ ಶಿಶುವಿಗೆ ಯಾವ ಪ್ರಕಾರ ದೊರಕುತ್ತದೆಯೋ, ಅದೇ ಮೇರೆಗೆ—ಗುರುದತ್ತ ಪರದ ಪ್ರಸನ್ನತೆಯೂ ತಾಯಿಯ ಬಳಿವಿಡಿದೇ ಅವಳ ನೆಚ್ಚಿನ ಕಂದಮ್ಮನಿಗೆ ಸಾಗಿ ಹೋಗಲಿ; ಅಂತರಂಗ ಬಹಿರಂಗ ಪರಿಶುದ್ಧವಾಗಿ ಒಳಗೂ ಹೊರಗೂ ಆತ್ಮ

ವಿದ್ಯೆ ಪ್ರತಿಬಿಂಬಿಸಲಿ—ಎನ್ನುವ ಅಪೇಕ್ಷೆ ಸಮಾಜಜೀವಿಗೆ. ಆದರ ಸಲು ವಾಗಿಯೇ ಎಳಗೂಸಿಗೆ ಲಿಂಗಧಾರಣಾ ಸಂಸ್ಕಾರ !

ಶಿಲ್ಪಿಯ ಕೈಯಿಂದಾದ ಪಂಚಸೂತ್ರ ಘಟಿತ ಶಿವಲಿಂಗ ಗುರುವಿನ ದಯಾದೃಷ್ಟಿಯಿಂದ ಶಿಶುವಿನ ಆತ್ಮಲಿಂಗದಂತೆಯೇ ಒಪ್ಪುತ್ತದೆ. ಪ್ರಕೃತಿ ಪರವು ಶಿವನಾಗಿ ಗೋಚರಿಸುತ್ತಿದೆ. ಸಂಸ್ಕಾರ ವಿಶೇಷದಿಂದ ಹಾಲು ತುಪ್ಪ ವಾಗಿ ಪರಿಣಾಮಗೊಂಡಂತೆ, ಇಲ್ಲಿ ಜಡ ಜೀವನು ದೇವಪುತ್ರನಾಗಿ ವ್ಯವಸ್ಥಿತನಾದ ಬಗೆ. ಈ ಪದ್ಧತಿಯನ್ನು ಕಂಡು ಬುದ್ಧಿಜೀವಿ ವಿಜ್ಞಾನಿ ಯೇನೂ ತಲೆ ಕೊಡಹಲಾರ ; 'ನಿರ್ದಿಷ್ಟ ಸ್ಥಿತಿಯನ್ನು ಕಾಣದ ಬರಿ ಬರಿಯ ಆಲೋಚನೆ ' ಎಂದು ಮೂದಲಿಸಲಾರ ; ' ಬರಿಕೈ ಮೊಳ ' ಎಂದು ಚಟಪಟಿಸಲಾರ.

ಚಂದ್ರಕಾಂತೇ ಯಥಾ ತೋಯಂ ಸೂರ್ಯಕಾಂತೇ ಯಥಾಽನಲಃ ।<br>
ಬೀಜೇ ಯಥಾಽಂಕುರಃ ಸಿದ್ಧಸ್ತಥಾಽಽತ್ಮನಿ ಶಿವಃ ಸ್ಥಿತಃ ॥ ೩೯ ॥

ಅತ್ಯಂತಗೂಢಚೈತನ್ಯಂ ಜಡಮವ್ಯಕ್ತಮುಚ್ಯತೇ ।<br>
ಸರ್ವಜ್ಞಃ ಪ್ರೇರಕಃ ಶಂಭುಃ ಕಿಂಚಿದಜ್ಞೋ ಜೀವ ಉಚ್ಯತೇ ॥ ೪೦ ॥

ಶುದ್ಧಾಂತಃಕರಣೇ ಜೀವೇ ಶುದ್ಧಕರ್ಮವಿಪಾಕತಃ ।<br>
ಜಾಯತೇ ಶಿವಕಾರುಣ್ಯಾತ್ ಪ್ರಸ್ಫುಟಾ ಭಕ್ತಿರೈಶ್ವರೀ ॥<br>
ಜಂತುರಂತ್ಯಶರೀರೋಽಸೌ ಪಿಂಡ ಶಬ್ದಾಭಿಧೇಯಕಃ ॥ ೫೦ ॥

(ಸಿ. ಶಿ. ಪರಿ–೫.)

ಮಂತ್ರಪೂತೇ ಕಲಾಂ ಶೈವೀಂ ಯೋಜಯೇದ್ವಿಧಿನಾ ಗುರುಃ ।<br>
ಶಿಷ್ಯಸ್ಯ ಪ್ರಾಣಮಾದಾಯ ಲಿಂಗೇ ತತ್ರ ನಿಧಾಪಯೇತ್ ॥ ೨೩ ॥

ತಲ್ಲಿಂಗಂ ತಸ್ಯ ತು ಪ್ರಾಣೇ ಸ್ಥಾಪಯೇದೇಕಭಾವತಃ ।<br>
ಏವಂ ಕೃತ್ವಾ ಗುರುರ್ಲಿಂಗಂ ಶಿಷ್ಯಹಸ್ತೇ ನಿಧಾಪಯೇತ್ ॥ ೨೪ ॥

(ಸಿ. ಶಿ. ಪರಿ–೬)

ಜನನದ ಅನಂತರವೂ ಮಗುವಿಗೆ ತಕ್ಕಷ್ಟು ಪ್ರಬುದ್ಧದೆಸೆ ಸಮನಿಸುವ ಪರ್ಯಂತ, ತನ್ನ ಮಗುವನ್ನು ಉದ್ದೇಶಿಸಿ ತಾಯಿಯು ಶಿವಪೂಜೆ ಮಾಡುವುದು ಒಳ್ಳೆಯದು. ಏಕೆಂದರೆ—ತನ್ನ ಕರುಳಿನ ಕುಡಿಯನ್ನು

ಆದಷ್ಟೂ ಎಚ್ಚರಿಕೆಯಿಂದ ಕಾಪಾಡಿಕೊಳ್ಳುವುದು ಅವಳ ಮೈಮೇಲೆ ಬಿದ್ದ ಭಾರ !

ಮಾತೇ ಸಂಯೋಽಸ್ತು ಅಕರ್ಮಣೀ ।

ಬುದ್ಧಿವಂತರು ತಮ್ಮ ಮಕ್ಕಳ ಅಭ್ಯುದಯಕ್ಕಾಗಿ ಅವರವರ ಹೆಸರಿನಲ್ಲೇ ಪ್ರತ್ಯೇಕ ಪ್ರತ್ಯೇಕ ಜೀವವಿಮೆ ಮಾಡುತ್ತಾರೆ. ಬ್ಯಾಂಕಿನಲ್ಲಿ ಹುಂಡಿ ಹಾಕುವುದರಿಂದ ಆರ್ಥಿಕದ ಮುನ್ನಡೆ. ದೇಹದಮೇಲೆ ಲಿಂಗಧಾರಣೆ, ಆ ಲಿಂಗದ ಪೂಜಾ, ಧ್ಯಾನ–ಈ ಕಾರ್ಯಗಳಿಂದ ಶಿವಧರ್ಮಪುಷ್ಟಿ, ಸಾಧಕನಿಗೆ ಅಧಿಕೃತ ಅಭೀಷ್ಟ ಸಂಸಿದ್ಧಿ ; "ಲಿಂಗದೇವನೇ ತನ್ನ ಮನೆದೈವ, ಕುಲದೈವ, ದೈವಾಧಿದೈವ ಪ್ರಸನ್ನತಾ ವಿಶೇಷ" ವೆಂಬ ಇತ್ಯರ್ಥ ಸಹ. ಏಕೇಶ್ವರ ಲೋಲುಪ್ತಿ, ಆತ್ಮ-ಅಂತರಾತ್ಮ-ಪರಮಾತ್ಮ ಆವಿಷ್ಕಾರ, ಪರಾಹಂತಾ ಪ್ರಾಪ್ತಿ ಕೂಡ—ಈ ಕರ್ತವ್ಯ ಸಿದ್ಧಿಯಿಂದಲೇ ಆಗಬೇಕು. ಒಳ್ಳೆಯ ಶಿಸ್ತು, ಶುಚಿಪ್ರಿಯತೆ-ಸೇರಿ ಈ ಕಾರ್ಯ ಸಾಗಬೇಕು. ಬೇಸರದ ಕಾರ್ಮೋಡ ಕವಿದರೆ ಏನೇನೂ ಸುಖವಿಲ್ಲ!

ಯಥಾ ವ್ಯಾಪ್ಯ ಜಗತ್ಸರ್ವಂ ಸ್ವಭಾಸಾ ಭಾತಿ ಭಾಸ್ಕರಃ ।
ತಥಾ ಸ್ವಶಕ್ತಿಭಿರ್ವ್ಯಾಪ್ಯ ಪರಮಾತ್ಮ ಪ್ರಕಾಶತೇ ।।೩೪।।
ವಿಶ್ವತೋ ಭಾಸಮಾನೋಽಪಿ ವಿಶ್ವಮಾಯಾವಿಲಕ್ಷಣಃ ।
ಪರಮಾತ್ಮಾ ಸ್ವಯಂಜ್ಯೋತೀ ರೂಪೋ ಜೀವಾತ್ಮನಾಂ ಭವೇತ್ ।।೩೫।।

(ಸಿ.ಶಿ. ಪರಿ ೧೮.)

'ತಾಯಿ ಮಕ್ಕಳಿಗೆ ಮೊದಲನೆಯ ಗುರು' ಎಂಬುದು ಸಟೆಯಲ್ಲ. 'ತಂದೆ ಕಲಿಸುವನು ಬಹು ಬುದ್ಧಿ ! ಗುರುವಿಂದ ಬಂಧನ ಬಯಲು' ಎಂಬ ದಿಗ್ದರ್ಶನ ಆಗುವುದೂ ಅವಳಿಂದಲೇ. ಕೇವಲ ಅಕ್ಷರವಿದ್ಯೆ (Literacy) ಗಿಂತ ಆಚಾರ-ವಿಚಾರ ನಿರ್ಮಾಣಕ್ಕೆ ಅವಳು ಆಸಕ್ತಿ ವಹಿಸುವಳು! ಪರಾ ಮತ್ತು ಅಪರಾ ವಿದ್ಯೆಯ ಅಭ್ಯಾಸಕ್ಕೆ ಅಣಿಮಾಡಿಕೊಡುವಳು.

ದ್ವೇ ವಿದ್ಯೇ ವೇದಿತವ್ಯೇ ಇತಿ ಹ ಸ್ಮ ಯದ್
ಬ್ರಹ್ಮವಿದೋ ವದಂತಿ ಪರಾ ಚೈವಾಪರಾ ಚ ॥

(ಮುಂ.ಉ. ೧/೧/೪.)

ಅರ್ಥಾತ್, ವಿದ್ಯೆಯು ಇತ್ತೆರ. ಒಂದು—ಪರಮಾತ್ಮನ ಲಕ್ಷಣಾತಿಶಯವನ್ನು ಬೋಧಿಸುವ ಪರಾವಿದ್ಯೆ. ಇನ್ನೊಂದು– ನೀತಿ—ಅನೀತಿ, ಧರ್ಮ—ಅಧರ್ಮ, ಒಳ್ಳೆಯದು—ಕೆಟ್ಟದು, ಪಾಪ—ಪುಣ್ಯ ಸಮಸ್ಯೆಯನ್ನು ವಿವರಿಸುವ ಅಪರಾವಿದ್ಯೆ. ಈ ಎರಡರ ಆರ್ಜನೆಗೂ ಮಾತ್ರುವೇ ಹಾದಿ ಹಾಕಿಕೊಡುವವಳು ; ತಾನು ಅಭಿಮಾನಿಸಿದ ಇಹ—ಪರ ವ್ಯವಹಾರ ಚತುಷ್ಟಯ ವಿವೇಕವನ್ನು ಮನಂಬುಗುವಂತೆ ಮಕ್ಕಳಿಗೆ ತಿಳಿಸಿಕೊಡಲು ಶಕ್ತಳಾದವಳೂ ಅವಳೇ ಹೌದೆನ್ನಬೇಕು.

ಮಾನವನು ' ಪರಾ—ಅಪರಾ ' ಎರಡು ರೀತಿಯ ಜ್ಞಾನವನ್ನೂ ಬಲ್ಲವನಾಗಿರಬೇಕು. ಎರಡೂ ರೆಕ್ಕೆಗಳು ಇಲ್ಲದಿದ್ದ ಹಕ್ಕಿ ಹಾರಾಡುವುದು ಹೇಗೆ ? ವ್ಯವಹಾರ ನಡೆಸುವುದು ಹೇಗೆ ? ಧಾರ್ಮಿಕ ಶಿಕ್ಷಣವೇ ಆದಿಯ ಶಿಕ್ಷಣವಾಗಬೇಕು. ಧಾರ್ಮಿಕ ಅಧಃ ಪತನವಾದರೆ, ಜೊತೆಯಲ್ಲಿಯೇ ಸಮಾಜದ ಅಧೋಗತಿ ; ವಿಶ್ವದ ತುಂಬ ಅನಾಗರಿಕತೆಯ ವ್ಯಾಪ್ತಿ ಸರ್ವನಾಶ. ವಿನಯದಿಂದ ವಿದ್ಯೆ, ವಿದ್ಯೆಯಿಂದ ಬ್ರಹ್ಮಜ್ಞಾನ. ವೀರಶೈವ ಪಾರಿಭಾಷಿಕ ಶಬ್ದದಲ್ಲಿ ಅದೇ ' ಲಿಂಗತತ್ತ್ವ ವಿವೇಕ '. ಅದರ ನಿರ್ಣಯದಿಂದಲೇ ಆತ್ಮೋನ್ನತಿ, ರಾಷ್ಟ್ರೋನ್ನತಿ, ಸರ್ವಶಾಂತಿ !! ಸುಖ—ದುಃಖ, ಪ್ರಗತಿ--ದುರ್ಗತಿ, ಅನುಕೂಲ—ಪ್ರತಿಕೂಲ ಉಭಯಕ್ಕೂ, ಮಾನವ ತಾನೇ ಕಾರಣ ಕರ್ತನು—ಎಂಬ ಸಿದ್ಧಾಂತವನ್ನು ಅದು ಬೋಧಿಸುತ್ತದೆ.

ಪೂರ್ವದಲ್ಲಿಯೇ ಆದ ವ್ಯವಸ್ಥೆಯಂತೆ, ವಿಭೂತಿ—ರುದ್ರಾಕ್ಷಿಗಳ ಪೂರ್ವಾಪರ ಉಪಪತ್ತಿ ನೈಷ್ಠೆ ಮಗುವಿಗೆ ಎಳೆತನದಲ್ಲೇ ಬಂದುಬಿಡಬೇಕು. ಗುರುವಿನ ಹಸ್ತ, ಶಿಶುವಿನ ಮಸ್ತಕ ಸಂಯೋಗವಾಗಿಬಿಡಬೇಕು. ಮುಂದೆ ಶಿವದೀಕ್ಷಾಪ್ರಯೋಗ ಸಮಯದಲ್ಲಿ ಪಂಚಾಕ್ಷರ ಜಿಜ್ಞಾಸೆ, ಲಿಂಗ ಪೂಜಾ ವಿಶ್ವಾಸ, ಅಂಗ—ಲಿಂಗ ಸ್ವರೂಪ ಪ್ರಜ್ಞೆ, ಶಿವ ಧರ್ಮಾಚರಣೆಯಲ್ಲಿ ದೃಢ ಪ್ರತಿಜ್ಞೆ ಹೆಣ್ಣು—ಗಂಡು ಎಲ್ಲರಿಗೂ ಕ್ರಮವಾಗಿ ಆಗುತ್ತದೆ. ಪಾರದರ್ಶಕ ರಸ ಋಷಿ ಗುರುವಿನ ದಯೆ, ಸಕಾಲದಲ್ಲಿ ದೊರಕಿಬಿಟ್ಟಿತೆಂದರೆ—ಜೀವಿಗೆ ಒಳ್ಳೆಯ ರಕ್ಷಣೆ ಸಿಕ್ಕಿದಂತೆಯೇ ಸರಿ. ಮಾನವೀಯತೆಯ ವಿಕಾಸಕ್ಕೆ, ಪ್ರಾಣಿ—ಪ್ರಾಣಿ ಸೌಹಾರ್ದತೆಗೆ, ಹಾಗೂ ಪ್ರಾಪಂಚಿಕ ಜೀವನಕ್ಕೆ ವಿಶಾಲವಾದ ತಳಹದಿ ಆಗ ಸಿದ್ಧವಾಗುತ್ತದೆ ; ಶಿವಧರ್ಮಿಪ್ರಿಯ ಜೀವಿಕುಲ

ಒಂದೆಂಬ ಭಾವ ಸಂವರ್ಧಿಸಿ, ಜಗದ ಒಕ್ಕೂಟ ಅದಕ್ಕೆ ಅನುಗುಣವಾದ ಸರ್ವೋದಯ ಸಮದರ್ಶನ ದೃಷ್ಟಿಯೋಗ ಅನನ್ಯವಾಗಿ ಪರಿಣಾಮಗೊಳ್ಳು ವುದೂ ಗಟ್ಟಿ.

ಆ ಲೀಲೆಯಲ್ಲಿ ಪ್ರಾಪಂಚಿಕ ಭೋಗವನ್ನು ಹಿತವಾಗಿ ಮಿತವಾಗಿ ಭೋಗಿಸಬಲ್ಲನು, ಸತ್-ಸಾಧಕನು; ತನ್ನ ಜೀವನ ಸರ್ವಸ್ವವನ್ನೂ ಜಗ ದ್ಬ್ರಹ್ಮನ ಸೇವೆಗಾಗಿ ಜಗದ ಆನಂದಕ್ಕಾಗಿ ಸಮರ್ಪಿಸಿ, ಆ ಪರಮ ಶಾಂತಿಯ ಭೋಗದಿಂದ ತಾನು ತೃಪ್ತಿ ಪಡಬಲ್ಲನು, ಸತ್-ಸಾಧಕನು;

ಪ್ರಾಸಂಗಿಕ ಕಲ್ಪದ ಆದರ್ಶ ನಾಗರಿಕನಾಗಿ, ರಾಷ್ಟ್ರಕ್ಕೆ ಕೀರ್ತಿ ತರಬಲ್ಲನು, ಸತ್-ಸಾಧಕನು; ಹಿಂದಿನಿಂದ ನಡೆದು ಬಂದ ಪರಿಶುದ್ಧ ಶಿವಾಚಾರ ಪದ್ಧತಿಯು ಮೂಲೆ ಗುಂಪಾಗದಂತೆ ನೋಡಿಕೊಳ್ಳಬಲ್ಲನು- ಅದಕ್ಕೊಂದು ಲೇಸು ತೋರ ಬಲ್ಲನು, ಸತ್-ಸಾಧಕನು. ಸಮಯ, ಸನ್ನಿ ವೇಶ, ಅನುವಂಶಿಕತೆ ಇದ್ದಂತೆ ಅಲ್ಲಲ್ಲಿ ಅವನ ಪ್ರಾತಿನಿಧ್ಯ. ಅನ್ಯಾಯ, ಅನೃತ, ಅನೀತಿ, ಭಯ, ಮೋಸ, ಸಂಶಯಾದಿ ದುರ್ಗುಣಗಳಿಲ್ಲದ ಆ ಧರ್ಮ ತೇಜನಲ್ಲಿ ಜಗತ್ತು ನಂಬಿಕೆಯಿಡುತ್ತದೆ; ದೇವರು ಒಲಿದು ಮೈ ದೋರುತ್ತಾನೆ. ಸತ್ಯರಿದ್ದುದೇ ದೇವಲೋಕ!

*    *    *    *

ನವೇಹಿ ಭಾಜನೇ ಲಗ್ನಂ ಸಂಸ್ಕಾರೋ ನಾನ್ಯಥಾ ಭವೇತ್ ।

ಹೊಸದಾಗಿದ್ದಾಗ ಬಟ್ಟೆಯನ್ನು ಚೆನ್ನಾಗಿ ತೊಳೆದು, ಹದವಾದ ಬಣ್ಣ ಹಾಕಿದ್ದಾದರೆ-ಮತ್ತೆ ಉಬ್ಬೆಗೆ ಹಾಕಿ ಬೇಯಿಸಿದರೂ ಆ ಬಣ್ಣ ಹೋಗುವುದಿಲ್ಲ. ಅದರಂತೆಯೇ ಧರ್ಮ ದೀಕ್ಷಾ ಸಂಸ್ಕಾರ ಚಿಕ್ಕಂದಿನಲ್ಲೇ ಆದರೆ ಚಂದ; ಗುರು ಪ್ರಸಾದ ಜೀವಿಯ ಚಿತ್ತ ನಿರ್ಮಲವಾಗಿರುತ್ತದೆ; ಅವನ ಮನದ ದುಶ್ಚೇಷ್ಟೆ ನಾಶವಾಗಿ ಬಿಡುತ್ತದೆ. ಲಿಂಗ ಸೋಕಿನ ನಿತ್ಯ ನಿರ್ಲಿಪ್ತವರ್ತನೆ-ಅಂಗನಿಗೆ ದೊರೆತು, ಅವನು 'ಲಿಂಗಾತ್ಮ-ಪರಮಾತ್ಮ' ನಾಗುತ್ತಾನೆ. ಸತ್ಯಕ್ಕಾಗಿ-ಸೌಂದರ್ಯಕ್ಕಾಗಿ-ಶಿವಧರ್ಮಕ್ಕಾಗಿ ತನು- ಮನ-ಧನವನ್ನು ಸಮರ್ಪಿಸಿದುದರ ಜೀವಾಳ, ಆ ಘನ ಗಂಭೀರ ಸ್ಥಿತಿ.

ತಮೇವ ಶರಣಂ ಗಚ್ಛ ಸರ್ವ ಭಾವೇನ ಭಾರತ ॥

(ಗೀ. ೧೮/೬೨.)

ಪರಮಾತ್ಮನ ಏಕೈಕ ಶರಣಾಗತಿಯೇ ಭಕ್ತನಿಗೆ ಉಳಿದಿರುವ ಆ ಬ್ರಹ್ಮ ಮಾರ್ಗ; ಕರಸ್ಥಳದ ಆ ಶಿವಲಿಂಗೋಪಾಸನೆ; ದೇವ-ಜೀವರ ಅನ್ಯೋನ್ಯದ ಆ ಸ್ವರೂಪದರ್ಶನ!

ಪ್ರೌಢ ಬುದ್ಧಿಯಿಂದ ಗುರುವು ಆಗಮಾಡುವ ಶಿಷ್ಯೋಜ್ಜೀವನಕಾರ್ಯ ಪ್ರತಿಷ್ಠೆಯನ್ನು ಕುರಿತು ಪ್ರಬುದ್ಧರು ಹೀಗೆ ಚಿಂತಿಸುವರು.

"ಒಂದು ಹೂವಿನ ರೇಣುವು, ಅದೇ ಹೂವಿನ ಶಲಕಾಗ್ರಕ್ಕೆ ಬೀಳುವ 'ಸ್ವರೇಣು ಸ್ಪರ್ಶ ಕಾರ್ಯ'ದಂತೆ, ಇಲ್ಲವೆ—ಒಂದು ಹೂವಿನ ರೇಣುವು ಅದೇ ಜಾತಿಯ ಇನ್ನೊಂದು ಹೂವಿನ ಶಲಕಾಗ್ರಕ್ಕೆ ಬೀಳುವ 'ಅನ್ಯರೇಣು ಸ್ಪರ್ಶ ಕಾರ್ಯ'ದಂತೆ ಸಾಧಾರಣ ಮಟ್ಟದ ಗುರು-ಶಿಷ್ಯರ ಏಕೋಭಾವ ಪ್ರತಿಷ್ಠೆಯು. ಈ ಎರಡು ಬಗೆಯ ಉಪಾಯಗಳಲ್ಲಿ ಒಂದು ಪ್ರಕೃತಿ ಧರ್ಮಕ್ಕೆ ಅನುಸಾರವಾದುದು ಮತ್ತು ಅಪರೂಪವಾದುದು. ಇನ್ನೊಂದು ಒಹು ಸಾಮಾನ್ಯವಾದುದು; ಶ್ರೇಯಸ್ಸಿಗಿಂತಲೂ ಹೆಚ್ಚಾಗಿ ಪ್ರೇಯಸ್ಸನ್ನೇ ಬಯಸತಕ್ಕುದು. ಇದರಲ್ಲಿ ಅಂಧಾನುಕರಣೆ ಇಲ್ಲದೆ ಇಲ್ಲ.

"ಹಾರಾಡುವ ಚಿಟ್ಟೆ, ಚಲಿಸುವ ಗಾಳಿ, ಹರಿಯುವ ನೀರು ಇವುಗಳೊಡನೆ ಸೇರಿಕೊಂಡು ಹೋದ-ಅಪರೂಪವಾದ ಯಾವ ಎರಡು ಜಾತಿಯ ರೇಣು ಅಥವಾ ಕಾಳುಗಳ ಸಂಸ್ಪರ್ಶವು ಇನ್ನೊಂದು ಸಮ್ಮಿಶ್ರಣ ತಳಿಯನ್ನು ದೊರತರುವುದುಂಟೋ, ಆ 'ಅನ್ಯರೇಣು ಸ್ಪರ್ಶಕಾರ್ಯ'ವೇ ಮೂರನೆಯ ವ್ಯವಸ್ಥೆ. ಅನಾದಿ ಪರಮೇಶ್ವರನ ಪ್ರೇರಣೆಯಂತೆ ಯಾವಾಗಲೋ ಒಮ್ಮೆ ಜಗದ್ಗುರು ಪಂಚಾಚಾರ್ಯರೂ ನಂದಿ ಮುಖ್ಯ ಪ್ರಮಥರೂ ಭೂಮಿಯಲ್ಲಿ ಅವತರಿಸಿ, ಜನರ ಹೃದಯ ಕ್ಷೇತ್ರದಲ್ಲಿ ಶಿವಧರ್ಮದ ಬೀಜವನ್ನು ಬಿತ್ತಿ ಬೆಳೆದರೆಂಬುದೇ ಆ ವ್ಯವಸ್ಥೆಯು. ಆಗಾಗ ಶಿವಧರ್ಮದ ಬೆಳೆ ಅದ್ಧೂರಿಯಾಗಿಯೇ ಬೆಳೆದಿದೆ! ಸುಭಿಕ್ಷ ತಂದಿದೆ!!

ಯತೋಽಭ್ಯುದಯ ನಿಃಶ್ರೇಯಸ ಸಿದ್ಧಿಃ ಸ ಧರ್ಮಃ।

ಎಂದು ಆದಿಯಲ್ಲಿ ಸಂಪಲ್ಪಮಾಡಿದುದು, ಇಹಲೋಕ-ಪರಲೋಕ ಸುಖ ಸಮನ್ವಯದ ಆ ಸತ್ಫಲವ ಪಡೆದು ಸುಖಿಸುವ ಉದ್ದೇಶದಿಂದಲೇ. ಶಿವ ಸಾಯುಜ್ಯಾದಿ ಪದವಿಗಳ ಬಯಕೆಯೇ ಕೊನೆಯ ಬಯಕೆಯಾಗಿರದೆ—

ಆತ್ಮಭಾವ, ಆತ್ಮೋನ್ನತಿ, ಆತ್ಮಶಕ್ತಿಯ ಅಭಿವೃದ್ಧಿಯ ಮೇಲೆ ಕಂಗೊಳಿಪ ಭದ್ರತಮ ಮಾನವ ಸಮಾಜದ ಗುಡಿಯನ್ನು ಅವರು ಕಟ್ಟಿದರು ; ಗಾರೆ-ಸುಣ್ಣ-ಸಿಮೆಂಟು-ಕಲ್ಲು-ಇಟ್ಟಿಗೆ ಉಪಯೋಗ ಮಾಡಿಕೊಂಡಿಲ್ಲ ; ಸತ್ಕ್ರಿಯೆ-ಸಚ್ಛೀಲ-ಸಮ್ಯಕ್‌ಜ್ಞಾನ-ಸದ್ಭಕ್ತಿಯ ಉಪಯೋಗದ ಮೂಲಕ.

ಈ ಲಿಂಗವೆ ನಿನ್ನಂಗಕ್ಕಾ-ಲಿಂಗನವಾಗಲ್ಕೆ
ನೀ ಲಿಂಗವು ನಿನ್ನ-ಮೈ ಲಿಂಗವೆಂದೆನ್ನೊಳ್
ಕೀಲಿಸಿದ ಗುರುವೆ ಕೃಪೆಯಾಗು ||೨೨||

ಈ ಲಿಂಗ ಸತ್‌ಕ್ರಿಯಾ-ಮೂಲ ಸಮ್ಯಕ್ ಜ್ಞಾನ
ದಾಲಯ ನೀತ್ರೈ-ಕಾಲ ಪೂಜಿಪುದೆಂದು
ಪಾಲಿಸಿದ ಗುರುವೆ ಕೃಪೆಯಾಗು ||೨೩||

(ಗುರುಕರುಣ ತ್ರಿವಿಧಿ

ಶ್ರೀಗುಡುವು ಕೃಪೆಮಾಡಿ ದೊರಕಿಸಿದ ಇಷ್ಟಲಿಂಗದ ಆರಾಧನೆಯಿಂದ, ಪ್ರಾಣಲಿಂಗ-ಭಾವಲಿಂಗ-ಭಾವಾತೀತ ಪರಶಿವ ಬ್ರಹ್ಮದ ಉಪಾಸನಾಯೋಗ ದಿಂದ ಸಾಧಕನು ಸಾಕ್ಷಾತ್ ಶಿವಧರ್ಮ ಸಂಪನ್ನನೇ ಆಗುತ್ತಾನೆ. ಲೋಕದ ಖಗ-ಮೃಗ-ತರುಕುಲಕ್ಕೂ ಕೂಡ ಆಘಾತ ತಟ್ಟದಂತೆ ಅಭಿಮಾನದಿಂದ ನೋಡಿಕೊಳ್ಳುತ್ತಾನೆ. 'ಲೋಕವೇ ದೇವರು' ಎಂಬ ಧಾರ್ಮಿಕ ಸ್ಫೂರ್ತಿಯಿಂದ ಕೂಡಿ ಬಾಳಲು ಸಹಜೀವಿಗಳಿಗೆ ಕರೆನೀಡುತ್ತಾನೆ. ಧರ್ಮದ ಉದ್ಧಾರಕ್ಕಾಗಿ ತ್ಯಾಗ-ಬಲಿದಾನಗಳ ಅಗತ್ಯವನ್ನು ವಿವರಿಸುತ್ತಾನೆ. ಅವನ ನಡೆ-ನುಡಿ ಎಲ್ಲವೂ ಸಹವೀರ್ಯ, ಅಂತಃಕರಣ ಶುದ್ಧಿ, ಸ್ವಾವಲಂಬನ, ಸ್ವಯಂನಿರ್ಣಯಾಧಿಕಾರವನ್ನು ಒಪ್ಪಿದ್ದೇ ಆಗಿದೆ.

ಶಾಸ್ತ್ರ ಮತ್ತು ಅನುಭವದ ಪರೀಕ್ಷೆಯಲ್ಲಿ ಲಾಕಿಕನ ಮೇಲಿನ ಗುರುತ್ವ— ೧) ತೆರೆದ ಮನಸ್ಸುಳ್ಳ ತಾಯಿಗೆ (Protector), ೨) ಸ್ವಯದ ಅರಿವು ಉಳ್ಳ ತಂದೆಗೆ (Creator), ೩) ಶಿಷ್ಯನಿಂದ ಪರಾಜಯ ಪಡೆದು ಸಂತೋಷಗೊಳ್ಳಲು ಬಯಸುವ ಪಾರಂಪರಿಕ ಆಚಾರ್ಯನಿಗೆ (A family preceptor), ಮತ್ತು ೪) ಅಂತರಂಗದ ಆಪ್ತಕಾಮನಾದ ಮಿತ್ರನಿಗೆ (1. One who obtained his desire. 2. One who has renounced all worthy desire and atta-

ohment. V.S. Apte) ಈ ನಾಲ್ವರಿಗೆ ಒಪ್ಪತಕ್ಕದ್ದು. ಮೇಲುಗೈ-ಸ್ವಾರ್ಥವನ್ನು ಎದುರಿಗಿಟ್ಟುಕೊಂಡು ಅಲ್ಲ, ಅತೀವ ಬಲಹೀನ, ಕಡು ಬಡವ, ಅನಕ್ಷರಸ್ಥ, ಹೀನ ಜನರನ್ನು ನೆನೆದು- ಅವರ ಉದ್ಧಾರದ ಸಲುವಾಗಿ ಮೇಲಿನ ನಾಲ್ವರೂ ಕಾತರಿಸಬಲ್ಲರು. ದೇವ ಗುರುವಿನ ಸ್ಪರ್ಶನ-ದರ್ಶನ-ಸಂಭಾಷಣ-ಸಹವಾಸ ಸೌಲಭ್ಯ ಎಷ್ಟೋ ಜನ್ಮಗಳ ಅನಂತರ ಸುಕೃತ ಜೀವಿಗೆ ದೊರಕತಕ್ಕದ್ದು !

ವಾತುಲ ಶುದ್ಧತಂತ್ರ ತತ್ತ್ವಭೇದ ಪಟಲ ಹೀಗೆ ಹೇಳುತ್ತದೆ.

"ಚರಾಚರ ನಿಖಿಲ ಆತ್ಮ ವೃತ್ತದ ಕೇಂದ್ರ ಸ್ಥಾನವು ಆ ದಿವ್ಯ ಪರಬ್ರಹ್ಮ. ನಿತ್ಯ ಮರಣ–ನಿತ್ಯ ನರಕದಿಂದ ಜೀವಕುಲವನ್ನು ಉದ್ಧರಿಸುವ ಸತ್ಯಸ್ಯ ಸತ್ಯ-ಪರಾ, ವಿದ್ಯಾ, ಇಚ್ಛಾ, ಜ್ಞಾನ, ಕ್ರಿಯಾ ಶಕ್ತಿ ಆತನಿಗೆ ವಶವಾಗಿದೆ. ಶಿವ, ಅಮೂರ್ತ, ಮೂರ್ತ, ಕರ್ತೃ, ಕರ್ಮ ಸಾದಾಖ್ಯ ರೂಪ ಅವನಿಗಿದೆ. ಆ ಮೂಲ ಸ್ತಂಭ ಲಿಂಗವು ವೀರಶೈವರ ಧಾರ್ಮಿಕ ಚಿಹ್ನೆ ಆಗಿದೆ. ಅದರ ತುಂಬ-ಬಿಂದು, ನಾದ, ಕಲಾ, ಮೂರ್ತಿ, ತತ್ತ್ವ, ಶಿವ, ಶಕ್ತಿ ಪರ್ಯಾಯ ಸೌರವ್ಯೂಹದಂತೆ ಹೆಣೆಸು ಕೊಂಡು ನಿಂತಿದೆ. ಎಲ್ಲೆಲ್ಲೂ ನಿಯಮವೇ ನಿಯಮ. ಸಮ್ಯಕ್ ವೈರಾಗ್ಯಾದಿ ಷಟ್‌ಫಲ ಭೋಗಲಾಭಕ್ಕಾಗಿ "ಸಾವಿಲ್ಲದ ಕೇಡಿಲ್ಲದ ಭವವಿಲ್ಲದ ಭಯವಿಲ್ಲದ ಆ ನಿಸ್ಸೀಮ ಚೆನ್ನಮಲ್ಲಿಕಾರ್ಜುನನನ್ನು ಒಲಿಸಬೇಕು ; ಬಾಳಬೇಕು. ಅದುವೇ ನ್ಯಾಯ ಸಮ್ಮತ ಜೀವನ".

ಅಸ್ಯ ಕಶ್ಚಿತ್ ಸ್ವತಃ ಸಿದ್ಧಃ ಸಚ್ಚಿದಾನಂದ ಲಕ್ಷಣಃ ।
(ಸೂಕ್ಷ್ಮಾಗಮ.)

ಯದ್ ವಾಚಾನ ಭ್ಯುದಿತಂ ಯೇನ ವಾಗಭ್ಯುದ್ಯತೇ ।
ತದೇವ ಬ್ರಹ್ಮತ್ವ ವಿದ್ಧಿ । ನೇದಂ ಯದಿದ ಮುಪಾಸತೇ ॥ ಇತ್ಯಾದಿ.
(ಕೇ.ಉ.೧.)

ಸ್ವಶಕ್ತಿ ಪ್ರಚಯೋಽಸ್ಯಽವಿಶ್ವಂ ।
(ಶಿ.ಸೂ. ೩-೩೦.)

ಆತ್ಮಶಕ್ತಿ ವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ
ಕುಟೀ ಭಾವಾ ದ್ಯಥಾ ಭಾತಿ ಪಟಃ ಸ್ವಸ್ಯ ಪ್ರಸಾರಣಾತ್ ।೬೫॥
(ಸಿ.ಶಿ. ಪರಿ–೧೦.)

ಜ್ಞಾನ ಕ್ರಿಯಾ ಸ್ವರೂಪೇಣ ಪ್ರವೃತ್ತಾಯಾಸ್ತು ತೇ ಶಿವೇ ।
ಸದಾ ಶಿವತ್ವಂ ಜಗದು ರ್ಭೋಗಾಹ್ವಂ ತತ್ವವೇದಿನಃ ॥

ಗುಣೀ ಭೂತಜ್ಞ ಶಕ್ತಿಸ್ತ್ವಂ ವ್ಯಕ್ತಿ ಭೂತ ಕ್ರಿಯಾತ್ಮಿಕಾ ।
ಯದಾ ತದೈಶ್ವರಂ ತತ್ತ್ವಂ ವ್ಯಕ್ತತಾವೇತಿ ವೃತ್ತಿಮತ್ ॥

ಪ್ರವೃತ್ತಾವುನ್ಮುಖೀ ಭೂತಾ ಭವೇಸ್ತ್ವಂ ಪರಮಾಯದಾ ।
ಜ್ಞಾನ ಶಕ್ತಿಸ್ತ ದೋದಾರಾ ಪದ್ಯಾತ್ವಂ ಪರಿಗೀಯತೇ ॥

(ತತ್ತ್ವಗರ್ಭ—)

ಜ್ಞಾನಾತ್ಮಕಂ ಸರ್ವಗತಂ ಯೋಗಿನಾಂ ಹೃದಯ ಸ್ಥಿತಮ್ ।
ಗೋಲಕಂ ಪರತತ್ತ್ವಂ ಚ ಚಿನ್ಮಯಂ ಚಿದ್ವಿಲಾಸಕವ್ ॥೨೧॥
ಶರಣ್ಯಂ ಸರ್ವತತ್ತ್ವನಾಂ ಲಿಂಗಾಕಾರೇಣ ವರ್ತತೇ ॥

(ಶಿ ಶ.ರ. ೧/೪.)

ಏವ ಮುಕ್ತ ಕ್ರಮೇಣ ಶಿವಸೂತ್ರ ಸಂಪ್ರತಿಸನ್ನ ಬೃಕ್ಕ್ರಿಯಾತ್ಮಕ ಚೈತನ್ಯ ಪ್ರತಿ ಪಾದಕ ಬ್ರಹ್ಮಸೂತ್ರ-ಷಟ್ಸ್ಥಲ ಬ್ರಹ್ಮ-ಷಟ್ತ್ರಿಂಶತತ್ತ್ವೇ ಮಹಾಮಂತ್ರ-ಪರಿಜ್ಞಾನವಾನ್ ಇಹ ಜನ್ಮನ್ಯಸ್ಮಿನ್ನೇವ ದೇಹೇ ಅಮೃತೋ-ಭವತಿ. ಆಚಾರ ವ್ಯವಹಾರಾದಿನಾ ಲೌಕಿಕವದ್ವರ್ತಮಾನೋಽಪಿ ಜನ್ಮಾಂತರಾಭಾವಾತ್ ಜೀವನ್ಮುಕ್ತಃ ಪಿಂಡಪಾತಾನಂತರಂ ಸರ್ವಜ್ಞತ್ವಾದಿ ಶಕ್ತೀನಾಂ ವಿಕಾಸಾತ್ ಸಾಕ್ಷಾನ್ಮುಕ್ತೋ ಭವತೀತಿ ನೂನಂ.

(ಶಿ.ಮಂ. ಪುಟ ೫೭.)

ಸರ್ವಶಕ್ತ ಸರ್ವಕಾರಣ ಮಹಾದೇವನ ಅನುಗ್ರಹ ಸಂಪಾದನೆಯಿಂದಲೇ ಜೀವಿಯು ಸುಖಿಯಾಗಬೇಕು; ಸರ್ವ ದುಃಖವಿಮುಕ್ತನಾಗಬೇಕು ಎಂಬರ್ಥವನ್ನು ವಿವರಿಸುವ ವೇದಾಗಮ ವಚನ ಸಾಕ್ಷಿ ಬಹಳ ಉಂಟು. ಸದ್ಯಕ್ಕೆ ಇದಿಷ್ಟೇ ಸಾಕು. ಈಗ ಮುಂದಿನ ಪ್ರಸಂಗಕ್ಕೆ ಗಮಿಸೋಣ.

* * * *

## ೬

## ನ ನಶ್ಯತಿ ತಮೋ ನಾಮ ಕೃತಯಾ ದೀಪವಾರ್ತಯಾ ॥

" ದೀಪದ ಸುದ್ದಿ ತೆಗೆಯುವುದರಿಂದ ಕತ್ತಲೆಯೇನು ನಿವಾರಣೆಯಾಗುವುದಿಲ್ಲ" ಎಂಬ ವಾಕ್ಯದ ಪ್ರಕಾರ ಸರ್ವಮೂಲ ಪರಶಿವ ಶಕ್ತಿಯ ಒಲುಮೆಗೆ ಶಿವಲಿಂಗದ ಉಪಾಸನೆಯ ಅಗತ್ಯವನ್ನು ಶಿವಜ್ಞಾನಿಗಳು ಒತ್ತಿ ಹೇಳಿದರು; ಎಚ್ಚರಿಸಿದರು. ವಿಶ್ವದ ಸೃಷ್ಟಿಯಲ್ಲಿ—ಭೂಭಾಗದಲ್ಲಿ ಕಬ್ಬಿಣದ ಅದಿರು ತುಂಬಿದೆ. ಅದುರಿನಿಂದ ಕಬ್ಬಿಣವನ್ನು ಸಿದ್ಧಗೊಳಿಸೋಣ. ಸಿದ್ಧವಾದ ಕಬ್ಬಿಣದ ಗುಂಡೊಂದನ್ನು ಬಾಚಿ ತಬ್ಬಿಕೊಂಡು ತುಂಬುಹೊಳೆಗೆ ಇಳಿಯೋಣ. ಆಗ ಏನಾದರೂ ದಡವನ್ನು ಸೇರುವ ನಂಬುಗೆ ಇದೆಯೇ? ಇಲ್ಲ. ಅದೇ ಕಬ್ಬಿಣದ ಗುಂಡವನ್ನು ಕಾಯಿಸಿ ಬಡಿದು ದೋಣಿಯನ್ನು ತಯಾರಿಸಿ, ಅದರಲ್ಲಿ ಕುಳಿತು ಹುಟ್ಟು ಬಗೆದು ಪ್ರಯಾಣವ ಮಾಡೋಣ. ಲೀಲಾಜಾಲವಾಗಿ ಆಡಾಡುತ್ತಾ ನದಿಯನ್ನು ದಾಟುವೆವು. ಅದೇ ತೆರೆಗೆ, ಯೋಗ್ಯ ಮೂಲಧಾತುಗಳನ್ನು ಅನುಗತವಾಗಿ ಉಪಯೋಗಿಸಿಕೊಂಡು ಸಿದ್ಧಗೊಳಿಸಿದ ಶಿವಲಿಂಗದ ಸಂಬಂಧದಿಂದ, ಆ ಲಿಂಗದ ದಿವ್ಯ ಚೈತನ್ಯವೇ ಶ್ರೀಗುರುವೆಂದೂ, ಮುಖವೇ ಜಂಗಮವೆಂದೂ ಅರಿತು, ' ಗುರು-ಲಿಂಗ-ಜಂಗಮ ' ಏಕೋಭಾವ ಅಂಕಿತ ಅನುಸಂಧಾನ ಮಾಡುವುದರಿಂದ, ತನ್ನಿಂದ ತಾನೇ ಶಿವಪ್ರಸಾದ ದೊರಕೊಳ್ಳುವುದು; ಭವದೋಷ ಹಿಂಗುವುದು—ಎಂಬುದನ್ನು ಪ್ರತ್ಯಕ್ಷಮಾಡಿ ತೋರಿದರು ಶಿವಜ್ಞಾನಿಗಳು. ಜೀವ ಶಿವೈಕ್ಯ ಶ್ರುತಿಪ್ರತಿಪಾದ್ಯವೆಂದು ಸಮರ್ಥಿಸಿದರು. ವಿಷಯ ಮತ್ತು ಇಂದ್ರಿಯ ಸನ್ನಿಕರ್ಷವನ್ನು ಅವಲಂಬಿಸಿದ ಅನುಭವ ದೃಷ್ಟಿಯಿಂದಲು ಕೂಡ ಪರಿಪೂರ್ಣ ಸ್ಥಿತಿಯಲ್ಲಿ ' ಪಶುಪತಿ-ಪಾಶ ' ಗುಣ ಸಾದೃಶ್ಯ ಏಕೀಕರಣವನ್ನೇ ಒಪ್ಪಿದರು.

ವಿಷಯಾನಂದಕಣಿಕಾನಿಃಸ್ಪೃಹೋ ನಿರ್ಮಲಾಶಯಃ ।
ಶಿವಾನಂದ ಮಹಾಸಿಂಧೌ ಮಜ್ಜನಾದೈಕ್ಯ ಮುಚ್ಯತೇ ॥೪॥
ನಿರ್ಧೂತ ಮಲಸಂಬಂಧೋ ನಿಷ್ಕಲಂಕ ಮನೋಗತಃ ।
ಶಿವೋಽಹಮಿತಿ ಭಾವೇನ ನಿರೂಢೋ ಹಿ ಶಿವೈಕತಾಂ ॥೫॥

ಶಿವೇನೈಕ್ಯಂ ಸಮಾಪನ್ನಶ್ಚಿದಾನಂದ ಸ್ವರೂಪಿಣಾ |
ನ ಪಶ್ಯತಿ ಜಗಜ್ಜಾಲಂ ಮಾಯಾಕಲ್ಪಿತ ವೈಭವಂ ||೬||
ಬ್ರಹ್ಮಾಂಡ ಬುದ್ಬುದೋದ್ಭೇದ ವಿಜೃಂಭೀ ತತ್ತ್ವವೀಚಿಮಾನ್ |
ಮಾಯಾಸಿಂಧುರ್ಲಯಂ ಯಾತಿ ಶಿವೈಕ್ಯವಡವಾನಲೇ ||೭||
ಮಾಯಾಶಕ್ತಿ ತಿರೋಧಾನಾಚ್ಛಿವೇ ಭೇದವಿಕಲ್ಪನಾ |
ಆತ್ಮನಸ್ತದ್ವಿನಾಶೇ ತು ನಾದ್ವೈತಾತ್ ಕಿಂಚಿದಿಷ್ಯತೇ ||೮||
ಪಶುತ್ವಂ ಚ ಪತಿತ್ವಂ ಚ ಮಾಯಾ ಮೋಹ ವಿಕಲ್ಪಿತಂ |
ತಸ್ಮಿನ್ ಪ್ರಲಯಮಾಪನ್ನೇ ಕಃ ಪಶುಃ ಕೋ ನು ವಾ ಪತಿಃ ||೯||

(ಸಿ. ಶಿ. ಪರಿ—೧೪.)

ಶಿವದೀಕ್ಷೆ ಪಡೆಯಬೇಕು. ಸ್ನಾನ, ಭೋಜನ, ನಿದ್ರೆ, ಜಾಗರಣ, ಮಲ ಮೂತ್ರ ವಿಸರ್ಜನ—ಇಂತು ಎಲ್ಲ ಕಾಲದಲ್ಲೂ ಶಿವಲಿಂಗವನ್ನು ಅಂಗದಮೇಲೆ ಧರಿಸಿರಬೇಕು. ಅದಕ್ಕೆ ಅನುಗುಣವಾದ ತಪಸ್ಸು, ದೀರ್ಘ ಕಾಲದ ಒಲವು–ಪ್ರೇಮ, ಸ್ವತಃ ಸಂಯಮ, ವಿಶಾಲ ಭಾವನೆ–ಇವೊಂದೂ ಇಲ್ಲದಲೆ, ಸುಮ್ಮಸುಮ್ಮನೆ 'ಶಿವ ಶಿವ' ಎಂದ ಮಾತ್ರಕ್ಕೆ ಶಿವಸಾಯುಜ್ಯ ಸಿಕ್ಕದು; ಅದೃಷ್ಟ ವಸ್ತು ದೃಷ್ಟಾಂತವಾಗದು; ಕ್ಷುದ್ರ ಅಹಂಗೋಲದಲ್ಲಿ ಜ್ಞಾನಭಾಸ್ಕರನು ಎಂದಿಗೂ ಬೆಳಗಲೊಲ್ಲನು–ಎಂಬುದನ್ನು ಖಚಿತಗೊಳಿಸಿದವರೂ ಅವರೇ ಸರಿ.

ನಿಜ ತಮೋಗುಣಪ್ರಭಾವಪೂರಿತ ಮನಸ್ಸು ಸಮಗ್ರ ಜಗತ್ ಪ್ರಕೃತಿಯತ್ತ ಕಣ್ಬಿಟ್ಟು ನೋಡಲಾರದು. ಪಕ್ವವಾದ ಶ್ರೀಫಲದ ಹೊರ ಭಾಗದಲ್ಲೇ ತುಂಬಿಗಳು ಹಾರಾಡಿದರೇನು ಫಲ? ಒಳಹೊಕ್ಕು ರಸಾಸ್ವಾದನ ಗೈಯಬೇಕು. ದುರಾಹಾರ, ದುರ್ವ್ಯವಹಾರ, ಭ್ರಷ್ಟಾಚಾರ, ಆತ್ಯಾಶೆ, ಅಶುದ್ಧ ಭ್ರಮಣೆ—ಇಂಥ ಪ್ರತಿಪಕ್ಷದ ಎದುರಿಗೆ ಯಾವ ಜನ್ಮದ ಸುಕೃತವೂ ಎದೆಕೊಟ್ಟು ನಿಲ್ಲಲಾರದು; ಗೆಲ್ಲಲಾರದು. ಎಂತಲೇ– "ರುದ್ರನಾಗಿ ರುದ್ರನನ್ನು ಪೂಜಿಸು. ಅದರಿಂದ ಪ್ರತಿಕೂಲ ಪಕ್ಷವನ್ನು ಗೆಲ್ಲುವೆ" ಎಂದು ಆಗಮವು ಕೂಗುತ್ತಿದೆ. "ಅಷ್ಟಾವರಣ ಸಂಪನ್ನನಾಗು. ಸತ್ಯವನ್ನು ನುಡಿ. ಪರಹಿತಾರ್ಥಾಗಮ ಪರಿಜ್ಞಾನಿಯಾಗು; ಶಿವಾಗ್ನಿ ತತ್ತ್ವ ವಿಜ್ಞಾನಿಯಾಗು; ಶಿವ ಪ್ರಸಾದ ಪ್ರಿಯನಾಗು. ಅದರಿಂದ ಆಗುವ ಅನು

ಕೂಲ ಅವರ್ಣನೀಯ "—ಎಂದು ವೇದವ್ಯಾಸ ಮುಖ್ಯ ಮಹಾಮುನಿಗಳು ಅನ್ನುತ್ತಿದ್ದಾರೆ.

ಕಲೌ ಕಾಲುಷ್ಯ ನಾಶಾಯ ಶಿವಲಿಂಗಂ ಪ್ರಪೂಜಯೇತ್ ॥೩೦೫॥
ಅಷ್ಟಾವರಣ ವಿಜ್ಞಾನೀ ಪಂಚಾಚಾರ ಪರಾಯಣಃ ।
ವೈದಿಕಂ ಕರ್ಮಕುರ್ವೀತ ಜ್ಞಾನೈಕಫಲ ಸಾಧನಮ್ ॥೩೦೬॥
(ಕ್ರಿಯಾ. ಉಪದೇಶ ೪.

ಶಿವೋ ಗುರುಃ ಶಿವೋ ದೇವಃ ಶಿವೋ ಬಂಧುಃ ಶರೀರಿಣಾಂ ।
ಶಿವ ಆತ್ಮ ಶಿವೋ ಜೀವ ಶಿವಾದನ್ಯನ್ನ ಕಿಂಚನ ॥೧॥
ಶಿವಮುದ್ದಿಶ್ಯ ಯತ್ಕಿಂಚಿದ್ದತ್ತಂ ಜಪಂ ಹುತಂ ಕೃತಮ್ ।
ತದನಂತಫಲಂ ಪ್ರೋಕ್ತಂ ಸರ್ವಾಗಮವಿನಿಶ್ಚಿತಮ್ ॥೨॥
(ಸ್ಕಾಂ. ಬ್ರ. ಅಧ್ಯಾಯ ೫.

ಶಿವಾತ್ಮ ಬೋಧೈಕ ರತಃ ಸ್ಥಿರಾಶಯಃ
ಶಿವಂ ಪ್ರಪನ್ನೋ ಜಗತಾಮಧೀಶ್ವರಮ್ ॥
ಶಿವೈಕ ನಿಷ್ಠಾಹಿತ ಶೀಲಭೂಷಣಂ
ಶಿವೈಕ್ಯ ವಾನೇಷ ಹಿ ಕಥ್ಯತೇ ಬುಧೈಃ ॥೩೭॥
(ಸಿ.ಶಿ. ಪರಿ ೧೩

ಈಗ ಇನ್ನೊಂದು ಮುಖವನ್ನು ಕುರಿತು ಊಹಿಸಿ ನೋಡೋಣ; ಪರೀಕ್ಷಿಸಿ ನಂಬೋಣ.

ಒಂದು ಮೋಸದ ಅಂಗಡಿ. ಕೆಲವೊಂದು ಖಾಲಿ ಡಬ್ಬಿಗಳ ಮೇಲ್ಗಡೆ ಯೇನೋ ಅಂಟುಚೀಟಿ (Lable) ಅಂಟಿಸಿದೆ. ಆ ಹೊಸ ಚೀಟಿಯ ಮೇಲೆ-ಸಾಮಾನಿನ ಹೆಸರು, ಅದರ ಬೆಲೆಯೂ ನಮೂದಿಸಿದೆ. ಅದಷ್ಟಕ್ಕೆ ಮೋಸಹೋಗಿ ಸಾಮಾನಿನ ಬೆಲೆಯಷ್ಟನ್ನೂ ತೆತ್ತು ಬರೀ ಡಬ್ಬಿಗಳನ್ನು ಕೊಂಡುಕೊಳ್ಳುವವರ ಬುದ್ಧಿವಂತಿಕೆ ಯಾವ ಮಟ್ಟಕ್ಕೆ ಸೇರಿದ್ದು ಎಂದು ಚಿಂತಿಸಿ—ಆ ಸಂಗತಿಯನ್ನು ಅಷ್ಟಕ್ಕೇ ಬಿಟ್ಟುಬಿಡೋಣ.

'ಶಿವ-ಜೀವ-ಜಗತ್' ಸಮತೋಲನ ಧೀಶಕ್ತಿ, ಅದಕ್ಕೆ ಸಂಬಂಧಿಸಿದ ಸಮಗ್ರ ಶ್ರುತಿ-ಸ್ಮೃತಿ-ಶಾಸ್ತ್ರ ಪರಿಶೀಲನೆಯ ಹಂಗು ಇಲ್ಲದ

ಡಾಂಭಿಕ ಆಚಾರ ಮತ್ತು ಹರಟೆಯ ಮಾತು—ಇವುಗಳಿಂದ ಜಿಜ್ಞಾಸು ಜೀವನಿಗೆ ಆಗಬಹುದಾದ ಅನುಕೂಲ-ಪ್ರತಿಕೂಲ ಚಿಂತನೆಯೂ ಸಹ ಅದರಂತೆಯೇ. ಶಿವೋಪಾಸನಾ ಫಲಾನುಭೂತಿ, ವ್ಯಕ್ತಿಧರ್ಮ ಪ್ರಾರಂಭ ದಿಂದ ವ್ಯಷ್ಟಿಧರ್ಮದವರೆವಿಗೂ ಏರದಿದ್ದ ಬಳಿಕ ಆ ಒಣವೇದಾಂತಕ್ಕೆ ಇನ್ನೆಲ್ಲಿ ಸಲ್ಲುವುದು ಸಲ್ಲಬೇಕಾದ ಗೌರವ! ನೀರಸ ಹಾಗೂ ಮಿಥ್ಯಶಬ್ದ ಜಾಲಕ್ಕೆ ಸಿಕ್ಕಿ ಬಿದ್ದುದರಿಂದ ಆ ಪ್ರಾಣಿಗಾದರೂ ಬರುವ ಲಾಭವೇನು!!

ಕ್ರಮಬದ್ಧ ಶಿವಲಿಂಗೋಪಾಸನಾ, ಶಿವಲಿಂಗಧಾರಣಾ, ಶಿವಧರ್ಮ ಪರಿಪಾಲನ ಕ್ರಿಯೆಯಿಂದ—ಹಾಗೂ, ಶಿವತತ್ತ್ವ ಶ್ರವಣ-ಮನನ-ನಿಧಿ ಧ್ಯಾಸನ ಸಾಮರ್ಥ್ಯದಿಂದ — 'ಆತ್ಮವತ್ಸರ್ವಭೂತಾನಿ'— ದಯಾ ಧರ್ಮದ ಪರಮಾರ್ಥ ಪರಿಚಯ ಸಂಪೂರ್ಣವಾಗಿ, ಪರಾನಂದ ಕೈಸೇರು ವುದರಲ್ಲಿ ಸಂದೇಹವೇ ಇಲ್ಲ; ಮಾನವ ಪರಿಸೀಮಿತ್ ಲಘುಶಕ್ತಿಯನ್ನು ದಾಟಿ, ದೇವರ್ಷಿ-ಗುರು-ಜಂಗಮ ಕೃಪಾಬಲೀಯ ಸೀಮೆಯನ್ನು ಪ್ರವೇಶಿಸಿ, ಅಲ್ಲಿಂದಲೂ ಮುಂದುವರಿದು—ಸಾಧಕನು ನಿಸ್ಸೀಮ ಪರಮಾತ್ಮ ಶಕ್ತಿ ಸಂಯೋಗವನ್ನು ಪಡೆಯಲೂ ಕೊರತೆಯಿಲ್ಲ.

ಸಕಲ ವೇದ ವೇದಾಂತ ಸಿದ್ಧಾಂತ ಸಂವಾದ ಪ್ರತಿಪಾದಿತ ಅವ್ಯಕ್ತ ಬ್ರಹ್ಮವೆಂಬುದೇ ಉಪಾಸ್ಯ ವಸ್ತುವು. ವ್ಯಕ್ತಸಾಧಕನೇ ಉಪಾಸಕನು. ಪೂಜ್ಯ-ಪೂಜಕರ ನಟ್ಟನಡುವಿನ ಸೇತುವೆ ಶಿವಲಿಂಗವೆಂಬುದು ವೀರಶೈವ ಪಕ್ಷ. ಈ ಸಂಗತಿಯನ್ನು 'ಪರಾವಿದ್ಯಾ ವಿಲಾಸ' ಬೃಹತ್ ಸಂಪುಟದಲ್ಲಿ ಚೆನ್ನಾಗಿ ವಿಮರ್ಶೆಮಾಡಿದ್ದಾಗಿದೆ. ಪ್ರಸಕ್ತ (Continuously) ಈ ಆರನೆಯ ಪ್ರಕರಣದಲ್ಲಿ ಸಂದರ್ಭಕ್ಕೆ ಅನುಗುಣ್ಯವಾಗಿ, ಶಿವನ ಅನುಗ್ರಹವನ್ನು ಸಂಪಾದಿಸಲು ಅಗತ್ಯವಾದ ಉಪಾಯದ ಬಗ್ಯೆ-ಪೂರ್ವಿಕರ ನಿಶ್ಚಿತ ಗುರಿಯತ್ತ ನಿರೀಕ್ಷಿಸುವಲ್ಲಿ ಗೊತ್ತಾದುದೇನು ?

" ಈಶಾವಾಸ್ಯಮಿದಂ ಸರ್ವಂ "

ಶ್ರುತಿಪ್ರಮಾಣದಂತೆ ಪೂರ್ವಾಪರ ಪಕ್ಷವೇನಿದೆ—ಆ ಬಗ್ಗೆ ಚರ್ಚೆ ನಡೆಸಿ, ಸರಿಗಂಡು ಒಂದು ತೀರ್ಪಿಗೆ ಬರಬೇಕು.—ಆ ವಿಷಯದಲ್ಲಿ ಎಲ್ಲ ದಾರ್ಶನಿಕರಂತೆ ಶಿವಸಿದ್ಧಾಂತ ಪಕ್ಷವೂ ಸಂಶೋಧಿಸಿತು. ವ್ಯಷ್ಟಿ-ಸಮಷ್ಟಿ ಬ್ರಹ್ಮಾಂಡ ಸಮಸ್ತದ ಕರ್ತೃ-ಭೋಕ್ತೃ-ನಿಯಂತೃ ಪರಮ ಶಿವನೇನೋ

ತನಗುಳ್ಳ ಮಹಾನ್ ಶಕ್ತಿಯಿಂದ ಸಾಕಾರನಾಗಿಯೂ ನಿರಾಕಾರನಾಗಿಯೂ ಇರಬಲ್ಲನು. ಅವನ ಅನುಗ್ರಹ ವಿಶೇಷವೇ ಸಕಲ ಜೀವಕೋಟಿಯ ಅಸ್ತಿತ್ವದ ಉದಾಹರಣೆಯೆಂದು ಸಿದ್ಧಾಂತಮಾಡಿದ್ದೂ ಆಯಿತು. ಶಿವ ಜ್ಞಾನಿಗಳು ಅದು ಸತ್ಯವೆಂದರು. ಅವರ ನಂಬಿಗೆಗೆ ಗುರೂಪದೇಶವೇ ಅತಿಶಯವಾಗಿ ಬೆಂಬಲ ನೀಡಿತು.

ಇದೀಗ ಭೌತಿಕ ವಿಜ್ಞಾನಿಗಳು ಅನುಮೋದಿಸುವ ಜಡ (Matter) ಮತ್ತು ಚೇತನ (Energy) ಈ ಎರಡು ಬಗೆಯ ಸೃಷ್ಟಿಯ ಅಭೇದ—ಸರ್ವಚೇತನ, ಅವ್ಯಕ್ತ ಚೈತನ್ಯವೇನುಂಟೋ ಅದರ ಲಕ್ಷಣಾತಿಶಯವನ್ನು ಅವೊತ್ತಿನ ಶಿವಸಿದ್ಧಾಂತವು ಪ್ರಸಿದ್ಧಪಡಿಸಿದೆ. ಬ್ರಹ್ಮ, ಇಂದ್ರ, ಪ್ರಜಾಪತಿ, ಪೃಥ್ವಿ, ವಾಯು—ಹೀಗೆ ಲೋಕಪ್ರಜ್ಞಾನ ಸ್ವರೂಪ ಆತ್ಮತತ್ತ್ವವನ್ನು ಅರಿತು ಮೇಲಕ್ಕೇರಿ ಅಮೃತನಾಗಬೇಕಾದರೆ ಪರಮಶಿವತತ್ತ್ವದಿರವನ್ನು ನಿಖರವಾಗಿ ಅರಿಯುವುದರಿಂದಲೇ ಸಾಧ್ಯ. ಇನ್ನು, ಆ ಪರಮಶಿವತತ್ತ್ವದ ಆಕಾರವೇನೋ ಸಾಕ್ಷಾತ್ತಾಗಿ ಚಿದಾತ್ಮನ (Supreme Soul) ಹೋಲಿಕೆಗೆ ಅನುಲಕ್ಷಿತವಾಗಿ ಇರುತ್ತಿದ್ದರೂ, ಅದರ ಔಪಾಧಿಕಸಾಕಾರದ ವಿಷಯದಲ್ಲಿ ಉಪೇಕ್ಷಿಸುವುದು ಸರಿಯಲ್ಲ. ಎಂದರೆ, ನಿಷ್ಕಲಮೂರ್ತಿಯನ್ನು ಒಪ್ಪಿಕೊಂಡು—ಅವನ ಸಕಲ ಮೂರ್ತಿತ್ವಕ್ಕೆ ಅನುಗ್ರಹ ರೂಪವಾದ ಕ್ರಿಯಾ ಸಂಬಂಧವನ್ನು ಹೇಳುವುದು ಸರಿ. ಅಖಂಡ ನಿಷ್ಕಲತ್ವವನ್ನೂ ಮತ್ತು ಅದರ ಲೀಲಾಪ್ರಯುಕ್ತ ಸದ್ಯೋಜಾತಾದಿ ಸಕಲತ್ವವನ್ನೂ ಒಟ್ಟುಗೂಡಿಸಿ ಆರಾಧಿಸುವುದೆಂದರೆ-ಸಕಲ ನಿಷ್ಕಲ ಭಾವವಿಶಿಷ್ಟ ಶಿವಲಿಂಗದ ಉಪಾಸನಾಮಾರ್ಗವೊಂದೇ ಇಗಿದೆ. ಶ್ರೇಷ್ಠ ದೈವೀತೇಜದ ಹಾಗೂ ಆ ಭಗವತ್ತತ್ತ್ವದ ಅತೀ ಸಮೀಪದ ಸಂಘಟನೆ ತನ್ಮೂಲಕ ಖಂಡಿತವಾಗಿ ಆಗುತ್ತದೆ. ವ್ಯಕ್ತ-ಶಿವಲಿಂಗ, ಅವ್ಯಕ್ತ-ಶಿವಮಂತ್ರ ಉಭಯದ ಐಕ್ಯತೆಯೇ ಆ ಶಿವಪ್ರಸಾದವು. ಕಿಂಚಿಜ್ಞಜೀವನು ತನ್ನ ಒಳ್ಳಿಡತೆಯ ಬಲದಿಂದ ಸರ್ವಜ್ಞನಾಗಿ ಸದ್ಧರ್ಮಪುರುಷನಾಗಿ ಪರಿವರ್ತನೆಗೊಂಡು ಸರ್ವೇಶ್ವರನಲ್ಲಿ ಅನನ್ಯವಾಗುವುದೇ ಶಿವಪ್ರಸಾದ ಸೇವನೆಯ ವಿಶೇಷ ಫಲವು-ಎಂದು ಅಂದಿನ ಗುರುವರ್ಗವು ಉಪದೇಶಿಸಿತು. ಗುರುಪುತ್ರರು ಆ ಧರ್ಮಸೂಕ್ಷ್ಮವನ್ನು ಗ್ರಹಿಸಿ ಧನ್ಯರಾದರು. ಅದೇ ಅವರ ನಿಶ್ಚಿತ ಗುರಿಯಾಯಿತು.

ಸ ಏಕೇನ ಪ್ರಜ್ಞೇನಾತ್ಮನಾಸ್ಮಾಲ್ಲೋಕಾದುತ್ಕ್ರಮ್ಯಾ ಮುಷ್ಮಿನ್ ।
ಸ್ವರ್ಗೇ ಲೋಕೇ ಸರ್ವಾನ್ ಕಾಮಾನಾಪ್ತ್ವಾಮೃತಃ ಸಮಭವತ್
ಸಮಭವತ್ ॥೪॥

ಐ.ಉ. ೧/೩.

ಯೇನೋಪಲಭ್ಯತೇ ಽಸ್ಮಾಭಿಸ್ಸಕಲೇನಾಪಿ ನಿಷ್ಕಲಃ ।
ಸ ಮೂರ್ತ್ಯಾತ್ಮಾ ಶಿವಃ ಶೈವಮೂರ್ತಿರಿತ್ಯುಪಚರ್ಯತೇ ॥೧೦॥
ಪ್ರಮಾಣಗಮ್ಯತಾಮಾತ್ರಂ ತತ್ಸ್ವಭಾವೋಪ ಪಾದಕಂ ।
ನ ತಾವತಾತ್ರೋಪೇಕ್ಷಾಧೀರುಪಲಕ್ಷಣ ಮಂತರಾ ॥೧೨॥
ಆತ್ಮೋಪಮೋಲ್ಬಣಂ ಸಾಕ್ಷಾನ್ಮೂರ್ತಿರೇವ ಹಿ ಕಾಚನ ।
ಶಿವಸ್ಯ ಮೂರ್ತಿಮೂರ್ತ್ಯಾತ್ಮಾ ಪರಸ್ತಸ್ಯೋಪ ಲಕ್ಷಣಮ್ ॥೧೩॥
(ವಾ.ಸಂ. ಪೂರ್ವಭಾಗ, ಅಧ್ಯಾಯ ೩೧.

* * * *

ಸುಸ್ತಿನ ಕಾವಲುಗಾರನಾಗಿ ಅಲ್ಲ; ಶಿಸ್ತಿನ ಶಿಪಾಯಿಯಾಗಿ ಶಿವ ಧರ್ಮದ ನೆರಳು ಸೇರಿದ ಮೇಲೆ ಅದಕ್ಕನುಸಾರವಾಗಿ ದೇಹ-ಮನ-ಭಾವ ಉದ್ಬೋಧನವಾಗಿ ಸತ್ಕ್ರಿಯಾಶಾಲಿಯಾಗುತ್ತಾನೆ ಸಾಧಕನು. ಗುರುಲಿಂಗ ಜಂಗಮ ನಿಂದೆ, ಶಿವನ ನಿಂದೆ, ಶಿವಕಥಾ ನಿಂದನೆ, ಶಿವಭಕ್ತರ ನಿಂದನೆ, ಪಾದೋದಕ ನಿಂದನೆ, ಶಿವ ನಿರ್ಮಾಲ್ಯ-ಶಿವ ಪ್ರಸಾದ-ಶಿವಧರ್ಮ ನಿಂದನೆ, ಅಷ್ಟಾವರಣ ನಿಂದನೆ, ಶಿವಾಗಮ-ಶಿವಕ್ಷೇತ್ರ-ಶಿವಾಚಾರ ಸಂಪ್ರದಾಯ ಗಳನ್ನು ಕೇಳಿ ಸಹಿಸಲಾರನು--ಆ ಗಣಾಚಾರಿ. ಗುರುವಿನ ಹಸ್ತ ಸ್ಪರ್ಶ ವಾದ ಹೃದಯದಲ್ಲಿ ಭಕ್ತಿಯ ಬೀಜ ಮೊಳಕೆದೋರಿತೆಂದರೆ, ಬಳಿಕ ಅದೇ ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ, ಸಮರಸ—ಹೀಗೆ ಆರು ಕಾಂಡಗಳುಳ್ಳದ್ದಾಗಿ ಸೊಗಸಾಗಿ ಬೆಳೆದು ಅಭಿವರ್ಧಿಸಿ, ಪರಮೇಶ್ವರನ ಸೌಭಾಗ್ಯ ಸಾಕಾರ ನಿರಾಕಾರ ತಾತ್ಪರ್ಯ ರೂಪ ಜ್ಞಾನ ಮತ್ತು ವೈರಾಗ್ಯ ಫಲಗಳನ್ನು ಹೊತ್ತು ನಿಲ್ಲುತ್ತದೆ. ಮುಂದೆ ಶಾಂಭವ ವಿದ್ಯೆಯಲ್ಲಿ ರಮಿಸುವ ಆ ವೀರಶೈವನ ವೀರ ಪ್ರಯತ್ನಕ್ಕೆ ದೊರಕೊಳ್ಳುವ ಪ್ರಯೋಜನ ಯಾವುದು ? ಅಂತರಂಗದ ಮನದ ಅರಳುವಿಕೆಯಿಂದ್ದಾಗಿ ಹೊರ ಚಿಮ್ಮುವ

ಶಿವಾನಂದ ಪ್ರಕಾಶವಷ್ಟೇ ಆ ಪ್ರಯೋಜನ. ಅಲ್ಲಿ ಶುಭಾಶುಭ ವಿಂಗಡನೆಯಿಲ್ಲ; ಆವಾವ ಪರಿಯ ಕರ್ಮ ಬಂಧನವೂ ಇಲ್ಲ. ಭಾವನೆಯ ಬೆಳಕಿನ ದ್ವೈತ, ಅದ್ವೈತ ಪ್ರತಿಭೇದ ಶೂನ್ಯ ಸುಸ್ಥಿತಿಯೇ ಅದಾಗಿದೆ.

ಶುಭಾಶುಭ ಫಲೈರೇಕಂ ಮೋಕ್ಷ್ಯಸೇ ಕರ್ಮ ಬಂಧನಮ್ ॥
ಭಕ್ತ್ಯರ್ಥಂ ಸ್ವೀಕೃತಂ ದ್ವೈತಂ ಅದ್ವೈತಾದಪಿ ಸುಂದರಮ್ ॥

* * * *

ಆದಿಯ ಅಗ್ನಿ ಲಿಂಗ, ನಡುವಣ ರೌದ್ರ ಲಿಂಗ, ಇದೀಗ ತನ್ನೆದುರಿಗಿರುವ ಪಂಚ ಸೂತ್ರ ಘಟಿತ ಶಿವಲಿಂಗ—ಅಂಗೈಯೊಳಗಣ ಆ ಲಿಂಗದೇವನ ನೋಡಿ ನೋಡಿ, ಭಾವ ಉಬ್ಬಿ—ಕಂಗಳ ಕಡೆಗೋಡಿ ಹರಿಯುವ ಪುಣ್ಯ; ನೋಟವೇ ಪ್ರಾಣವಾಗಿ-ಕೂಟವೇ ಸ್ಫೂರ್ತಿಯಾಗಿ ಉಳಿಯುವ ಪ್ರತಿಜ್ಞೆ. ಅಂಗವಿಕಾರ-ಚೇಷ್ಟೆಯ ಬೆಡಗ ತುಳಿದು ತುಂಡರಿಸಿ, ಲಿಂಗಾಚಾರ ನಿಯಮ ನಿಷ್ಪತ್ತಿಯ ಬಲಿಸಿಕೊಂಬ ಸನ್ನಾಹ; ಬೌದ್ಧಿಕ ಬಲವಿರುವನ್ನಕ್ಕ-ವೈಹಿಕ ಬಲುಮೆ ಇರುವನ್ನಕ್ಕ ಆವುದಾದರೊಂದು ಶಿಷ್ಟಾಚಾರದ ಉದ್ಯೋಗವಿಡಿದು ದುಡಿದು, ಲಭ್ಯ ಪದಾರ್ಥವನ್ನು ಪ್ರಸಾದವನ್ನಾಗಿ ಮಾಡಿ ಉಣ್ಣುವ-ಉಡುವ ಹೆಬ್ಬಯಕೆ; ಪರರ ದುಃಖದಲ್ಲಿ ಯಥಾಶಕ್ತಿ ಸಹಭಾಗಿಯಾಗುವ ಪ್ರೇಮ; ದೇಹದಲ್ಲಿನ ದಶವಾಯುಗಳಂತೆ ಕರ್ತವ್ಯ ಮುಖವಾಗಿರುವ ಪ್ರಾಣದಲ್ಲಿನ ದಶಲಿಂಗಗಳ ವಿವೇಕ; ಪರಾ ಲಿಂಗದ ಅಚ್ಚು ಕಟ್ಟಾದ ಉಪಾಸನೆ. ಇವೆಲ್ಲವೂ ಆ ಕಾಲದಲ್ಲಿ ಹೊರಹೊಮ್ಮುವ ಚಿಹ್ನೆಗಳು.

ಪರಾ ಚೈವಾಪರಾ ಚ ।

ಶಾಂತರು ಕಂಡು ನಲಿದು ಆನಂದಿಸಿ 'ಹೌದೆಂ'ಬ ಶಿವತತ್ತ್ವದ ಕಡೆಗೆ ಮನಸ್ಸು ಅಭಿಮುಖವಾದುದೇ ತಡ, ಅಚ್ಚ ಸ್ವಾತಂತ್ರ್ಯದ ಪ್ರಶ್ನೆಗೆ ಅನುಭವ ಧುರೀಣ ಮಾನವನು ಈಯುವ ಉತ್ತರ :

"ಸತ್ ಸಾಧಕನು ಒಲಿದು ವಾಸ ಮಾಡುವ ವಿಶಾಲ ಬುದ್ಧಿಯ ಬಯಲಿನಲ್ಲಿ—ಸುಬದ್ಧ ವೈಯಕ್ತಿಕ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಅನುಸರಣೆಯ ಘನ ಗಂಭೀರ ರಾಷ್ಟ್ರೀಯ ಚೈತನ್ಯ ಅಡಗಿದೆ. ವಿಶ್ವ ಸಾಮರಸ್ಯ—ಅವರ್ಣನೀಯ ಭಗವದ್ವ್ಯಾಪ್ತಿ Paradise

Regained ನಿದರ್ಶನ ಅಲ್ಲಿ ತುಂಬಾ ತುಂಬಿದೆ. ಪ್ರಾಮಾಣಿಕ ಶಿವೋಹಂ ಭಾವದ ಆ ಆವರಣದಲ್ಲಿ ಜಡ ಚೈತನ್ಯ ಸಮ್ಮಿಶ್ರಣ ಆಟ ಪಾಟ ವ್ಯವಸ್ಥೆ ನಡೆದು—ಆದರ್ಶ ಮಾನವೀಯತೆಯನ್ನು ಆಸ್ಥೆಯು ಉಗ್ಘಡಿಸುತ್ತಿದೆ. ಎಲುವಿಲ್ಲದ ಆತ್ಮನು ಎಲುವಿನ ಮನೆಯನ್ನು ತನಗಾಗಿ ನಿರ್ಮಿಸಿಕೊಂಡು—ನಿರ್ಮಮನಾಗಿ ನರ್ತಿಸುತ್ತಿದ್ದಾನೆ !

ಅಸ್ಥನ್ವಂತಂ ಯದನಸ್ಥಾ ಬಿಭರ್ತಿ !

ಪೂರ್ವಾಚಾರ್ಯರು ಪ್ರತಿಧ್ವನಿಸಿದ ಘಟನಾತ್ಮಕ ವಿಧಿ-ನಿಷಿದ್ಧ-ಪ್ರತ್ಯವಾಯ ಕರ್ತವ್ಯಾನು ಕ್ರಮಣಿಕೆ, ತತ್ಸಂಬಂಧ ಜ್ಞಾನ ಕ್ರಿಯಾ ಅನುಷ್ಠಾನ ಸರಣಿ ಇವೆಲ್ಲವೂ—ಜೀವಾತ್ಮ ಬುದ್ಧಿ ವಿಶೇಷವನ್ನು ಇವೊತ್ತಿನವರಿವಿಗೂ ಹೇಗೆ ಹೇಗೆ ನವೋ ನವೀನ ಸ್ಥಿತಿಯಲ್ಲಿ ಬೆಳೆಸುತ್ತಾ ಬಂದಿವೆ; ಎಷ್ಟೆಷ್ಟು ಸ್ವಾರಸ್ಯಮಯವಾಗಿ ಲೋಕವನ್ನು ಶಾಂತಗೊಳಿಸುತ್ತವೆ ? ಅವರು ಅರುಹಿದ ದೈವೀ ಪ್ರಜ್ಞೆಯ ಸಹಾಯದಿಂದ ಸಾಧಕನು ಐಹಿಕ-ಆಮುಷ್ಮಿಕ ಸೌಖ್ಯವನ್ನು ಎಷ್ಟರ ಮಟ್ಟಿಗೆ ರೂಢಿಸಿಕೊಳ್ಳಬಹುದು ?— ಎಂದೆಲ್ಲ ಆ ಎಚ್ಚೆತ್ತ ಜೀವನು ವಿಚಾರಿಸಿ-ವಿಚಾರಿಸಿ, ಅಷ್ಟೇ ಎಚ್ಚರಿಕೆಯಿಂದ ಸನ್ಮಾರ್ಗದಲ್ಲಿ ನಡೆದು, ಬಯಸಿದ ಬಯಕೆಯನ್ನು ಉಂಡು ತೃಪ್ತನಾಗುತ್ತಾನೆ. ವಿವಿಧ ದುಃಖಹೇತುವಾದ ರಾಗೋದ್ರೇಕಗಳನ್ನು ಸ್ವಯಂ ಇಚ್ಛೆಯಿಂದ ನಿಯಂತ್ರಿಸಿ, ಶೀಲ ಸಂವರ್ಧನೆ ಮಾಡಿಕೊಂಡು ಮುನ್ನಡೆಯುತ್ತಾನೆ. ಯೌಗಿಕರ ದೃಷ್ಟಿಯಲ್ಲಿ ಇದೇ ಶಕ್ತಿ ಪಾತಕ್ರಮ; ದ್ವೈತ ಪದ್ಧತಿಯಂತೆ ಇದೇ ಪೂರ್ಣ ಪ್ರಜ್ಞಾನುರಾಗ. ಶಿವಾದ್ವೈತಿಯು ಕಂಡುಕೊಂಡ ' ಲಿಂಗ ಅಂಗ ಸಾಮರಸ್ಯ 'ದ ಗುಟ್ಟೊ ಇದೇ ಆಗಿದೆ—ಇದೇ ಆಗಿದೆ", ಈ ಪ್ರಕಾರವಾಗಿ.

ಈ ಗುಟ್ಟನ್ನು ವಿಶಾಲ ಭೂಭಾಗದಲ್ಲಿ ವಿಶಾಲಭಾವನೆಯಿಂದ ಪ್ರಚಾರಮಾಡಿ ಜನರನ್ನು ಬದುಕಿಸುವ ಭಾರ—ಸಾಧು, ಸಂತ, ಜಂಗಮರ ಬೆನ್ನಮೇಲಿದೆ. ಆ ಭಾರವನ್ನು ಹೊತ್ತುದರಿಂದಲೇ ಅವರು ಗೂನುಬೆನ್ನಿನ ಐಯ್ಯನವರಾಗಿದ್ದಾರೆ !

ಪರೋಪಕಾರಕರಣೇ ವಿಚರಂತೀಹ ಸಾಧವಃ ॥ ೪೫ ॥

(ಕೈ. ಸಂ. ಅಧ್ಯಾಯ-೧೭)

ಆರ್ಥಿಕ ಉನ್ನತಿಯ ವ್ಯಸನವೊಂದೇ ಮೈತುಂಬ-ಮನದ ತುಂಬ ಭಾವದತುಂಬ ಘನವಾಗಿ ಕವಿಚಿಕೊಂಡವರಿಗೆ ಇನ್ನುಳಿದ ಸಾಮಾಜಿಕ, ಧಾರ್ಮಿಕ, ತಾತ್ವಿಕ, ಗೋಷ್ಠಿ ವಿಚಾರ ವಿನಿಯಮವೆಲ್ಲ ಗೊಡ್ಡು ಪುರಾಣ ವಾಗಿ-ಅಂತೆ ಕಂತೆಯ ಮೂಲೆಯಾಗಿ ಗೋಚರಿಸುವುದು ಸಹಜ. ರಾಜಕೀಯವೇ ಪಂಚಪ್ರಾಣವಾಗಿದ್ದವರದೂ ಇದೇ ಪಾಡು. ಅವರಿವರ ಮಾರ್ಗ ವೆಲ್ಲವ ಅರಿತು ಸರಿದೂಗಿಸಿಕೊಂಡು, ಮತ-ಮತಾಂತರದ ಹಲವು ಹನ್ನೊಂದು ದಾರಿಗಳನ್ನು ಏಕ ಮಾಡಿಕೊಂಡು, ಶಿವ ಪಥವೇ ನೈಜ ಲಕ್ಷ್ಯವಾಗಿ ಉಳ್ಳ, ಹಾಗೂ ಸ್ವಧರ್ಮ ವಾಂಛೀ ಸಂತೃಪ್ತ ಭದ್ರತಮ ಜೀವನ ಸಾಗಿಸುವಂಥವರ ಗತಿ-ಮತಿ ಮಾತ್ರ :—

ವಿಶ್ವದ ಅನಂತತೆಯ ಏಕೈಕ ಸುಸ್ಥಿತಿಯನ್ನು ಕನಸು ಮನಸಿನಲ್ಲಿಯೂ ಚಿಂತಿಸುತ್ತದೆ ; ಲೋಕವನ್ನು ತನ್ನಂತೆಯೇ ಎದುರಾ-ಎದುರು ಪ್ರಸನ್ನ ಮಾಡಿಕೊಂಡು ನೋಡುತ್ತಾ ಹೊಗುತ್ತದೆ. ಅಂಥ ಏಕಾಗ್ರತೆಗೆ ಸಿಕ್ಕುವ ಪ್ರತಿಫಲ—ಜೀವನ್ಮುಕ್ತಿ ಒಂದೇ ಅಲ್ಲ ; ಸರ್ವ ಸಮಾನತಾ ವರ್ತನೆಯೂ, ಇಲ್ಲಿಯೂ-ಅಲ್ಲಿಯೂ ಸಲ್ಲುವ ವ್ಯವಧಾ ಪರಿಶ್ರಮವೂ ಅವರೊಡನೆಯೇ ಕೂಡಿಕೊಂಡಿದೆ. ಮಾತು-ಮನ-ಮೈ ಈ ವೈಶಿಷ್ಟ್ಯ ತತ್ವತ್ರಯ ವಿಮಲೀ ಕರಣ ಪೂರ್ವಕ, ತನ್ನ ಜೀವಮಾನವನ್ನು ಸಾರ್ಥಕ ಪಡಿಸಿಕೊಳ್ಳುತ್ತಾನೆ ಆ ಬುದ್ಧಿ ಜೀವಿ. ತನ್ನ ಪ್ರಜ್ಞಾಶಕ್ತಿಗೆ-ಕುಶಲತೆಗೆ-ದೈಹಿಕ ಬಲಕ್ಕೆ ಸಂಗತ ವಾದ ವ್ಯಾಪಾರ, ವ್ಯವಸಾಯ, ಕೈಗಾರಿಕೆ, ರಾಜಕಾರ್ಯ ಈ ತೆರನಾದ ಉದ್ಯೋಗ ಒಂದರಲ್ಲಿ ನಿಷ್ಠನಾಗಿ ಇರುತ್ತಾ—ಪ್ರಾಪ್ತ ಅನ್ನ ಬ್ರಹ್ಮಕ್ಕೂ ಭೌತಿಕ ಭೋಗ ಭಾಗ್ಯ ವಿಶೇಷಕ್ಕೂ ಯಾವರೀತಿಯಿಂದಲೂ ಅಪವ್ಯಯ, ಅಪಚಾರ, ನ್ಯಾಯ ವಿರಹಿತ ಅವ್ಯವಸ್ಥೆ ಎಸಗದೆ—ಅಪಾತ್ರದಾನ ಪ್ರತಿ ಗ್ರಹಣ ಮೊದಲಾದ ಅಧರ್ಮಕ್ಕೆ ಕೈಹಾಕದೆ ಸ್ವಾರ್ಜಿತ ಧನ-ಧಾನ್ಯ ಸಂಪತ್ ಸಮೂಹವನ್ನು ತನ್ನ ಕುಟುಂಬದ ಸಮಾಜದ ಗುರುಲಿಂಗ ಜಂಗಮ ತ್ರಿಪುಟಿಯ ಸೇವೆಯ-ಉಪಯೋಗಕ್ಕಾಗಿ ವಿನಿಯೋಗಿಸಿ, ರಾಷ್ಟ್ರದ ಅಭಿವೃದ್ಧಿಗಾಗಿ ತನ್ನನ್ನು ಕೂಡ ಸಮರ್ಪಿಸಿ, ಆ ಸಮಷ್ಟಿ ಪೂರ್ಣ ಪ್ರಪಂಚದ ಒಂದು ಚೇತನ ಜೀವಿಯಾಗಿ ತಾನು ಇದ್ದುಕೊಂಡು, ಸನ್ಮಾರ್ಗ ದಲ್ಲಿ ವರ್ತಿಸುತ್ತಾ—ಶಿವ ಪ್ರಸಾದ ಜೀವಿಯಾಗಿದ್ದು ಸಂತಸ ಪಡುವುದು ಆ ಶಿವಧರ್ಮಿಗಳ ಅನುಗಾಲದ ಕರ್ತವ್ಯವೆಂದರೆ ಆಶ್ಚರ್ಯವಲ್ಲ. ...

ಅದಾವ ಕಾಲದಲ್ಲೋ ಅದಾವ ವೇಷ ಭೂಷಣ ನೀತಿ ನಿಯಮ ವ್ಯವಹಾರ ಶಕ್ತಿಯಿಂದಲೋ ಉತ್ತಮರಾಗಿ ಬಾಳಿ ಬದುಕಿ ಪವಾಡ ಪುರುಷರೆನಿಸಿಕೊಂಡ ಜಗದ್ಗುರು ಸಾರ್ವಭೌಮರು, ಶಕಪುರುಷರು, ಕವಿವಲ್ಲಭರು, ಪಂಡಿತೋತ್ತಮರು, ಭಾಷ್ಯಕಾರರು, ನನ್ನಯ್ಯ ನಾದಯ್ಯ ಮೊದಲಾದ ಪುರಾತನರ ಮಟ್ಟಿಗೇ ಅಲ್ಲ; ಇತ್ತೀಚೆಗೆ ಕರ್ಣಾಟಕ ಭೂವಲಯದಲ್ಲಿ ವೀರಶೈವರ ಬೆನ್ನಿನಲ್ಲಿ ಮೂಡಿ, ಕೊಡುಗೈ ದೊರೆಗಳೆನಿಸಿಕೊಂಡ–ಸ್ವಮತಾಚಾರ ವಿಚಾರ ಧುರೀಣರೆನಿಸಿಕೊಂಡ–ದಂಡನಾಕಯರೆನಿಸಿಕೊಂಡ ಲಿಂ॥ ಗುಬ್ಬಿ ತೋಟದಪ್ಪ, ಸಿರಸಂಗಿ ದೇಸಾಯಿ, ವಾರದ ಮಲ್ಲಪ್ಪ, ಸಕ್ಕರೆ ಕರಡಪ್ಪ, ಯಜಮಾನ ವೀರ ಸಂಗಪ್ಪ, ರಾಜಾ ಲಖಮನ ಗೌಡ, ಸರ್. ಕೆ.ಪಿ. ಪುಟ್ಟಣ್ಣ ಚೆಟ್ಟಿ, ಗುರಿಕಾರ ಮರಿಮಲ್ಲಪ್ಪ, ಅರಟಾಳ ರುದ್ರ ಗೌಡರು ಈ ಪ್ರಭೃತಿಗಳ ಬಾಳುವೆಯೂ ಪ್ರಸಾದಿ ಜೀವನಕ್ಕೆ ತಕ್ಕ ಉದಾಹರಣೆಯಾಗಿದೆ.

ಗುರು ಜಂಗಮರಲ್ಲಿ ಸಮಾಜ ಧರ್ಮದಲ್ಲಿ ಅವರಿಗಿದ್ದ ಭಕ್ತಿ ವಿಶ್ವಾಸ ಅತುಲ. ಅವರು ಪ್ರೇಮದಿಂದ ಅನುಮೋದಿಸಿದ ಶಿವದೀಕ್ಷಾವ್ಯವಸ್ಥೆ, ದಶಕರ್ಮ ಪದ್ಧತಿ, ಸ್ತ್ರೀ ಪುರುಷ ಸಮಾನತೆ, ರಾಜಕಾರ್ಯ ಪ್ರಸಕ್ತಿ, ಎಲ್ಲ ಕೋಮಿನ ಉನ್ನತಿಯ ಆಸೆ— ಅವರು ವಿಶೇಷ ರೀತಿಯಲ್ಲಿ ಅಭ್ಯಸಿಸಿದ ಶಿವಭಕ್ತಿಯ ವೀರ ವ್ರತ, ಏಕೇಶ್ವರ ವಾದ, ಅಷ್ಟಾವರಣ–ಪಂಚಾಚಾರ ಆಚರಣೆ, ಷಟ್‌ಸ್ಥಲ ತತ್ತ್ವ ಪರಿಜ್ಞಾನ, ಮೋಕ್ಷ ಸ್ವರೂಪ–ಇವೆಲ್ಲವೂ ಅವರನ್ನು ಮಹಾತ್ಮರಿಗೆ, ಶಾಸ್ತ್ರಜ್ಞರಿಗೆ, ಕರ್ಮಯೋಗಿಗಳಿಗೆ, ದಾರ್ಶನಿಕ ಪಟುಗಳಿಗೆ, ಶಿವಶರಣರಿಗೆ, ಮತೋದ್ಧಾರಕರಿಗೆ ಬಹಳ ಸಮೀಪದವರೆಂದೆನಿಸಿತು.

ಶರಣ ಬಸವೇಶ್ವರ, ಕೊಟ್ಟೂರು ಬಸವೇಶ್ವರ, ಕೋಲ ಶಾಂತಯ್ಯ, ಮಲೆಯ ಮಾದಯ್ಯ, ಮನ್ಮಥ ಸ್ವಾಮಿ, ಕಾಡ ಸಿದ್ಧೇಶ, ಕೆಂಡ ಗಣ್ಣಯ್ಯ–ಇನ್ನುಳಿದ ವಿಭೂತಿಗಳೆಲ್ಲರೂ ಮಹಾತ್ಮರೆನಿಸಿಕೊಂಡರು; ಮಹಾ ಸಂತರೆನಿಸಿಕೊಂಡರು.

ಸವೇಧಾದ್ಯಥಾ ಲೋಹೋ ಹೇಮತಾಂ ಪ್ರತಿ ಪದ್ಯತೇ ।

............................................................

ಪುರುಷ ಮುಟ್ಟದ ಕೆಬ್ಬುನ ಪೊನ್ನಾಗದೆ, ಎಲೆ ಅಯ್ಯಾ !

.............................................................................

ಅವರ ಸದ್ ಭಾವನೆ, ಸಚ್ಚಾರಿತ್ರ್ಯ, ಸತ್ಕ್ರಿಯೆ ; ಅವರ ದೇಹದ ಮೇಲೆ ಇಂದ್ರಿಯಂಗಳ ಮೇಲೆ ಪ್ರಾಣದ ಮೇಲೆ ಆದ ಶಿವ–ಗುರುವಿನ ಅನುಗ್ರಹ ಅಷ್ಟೊಂದು ಹೆಚ್ಚು ಬಲವುಳ್ಳದ್ದಾಗಿತ್ತು. ಕಾಯ–ಕರಣ–ಭಾವ ಅರ್ಪಣ ತಜ್ಞರು–ಅವರು. ಶಿಷ್ಯಸ್ಥಲ–ಶುಶ್ರೂಷುಸ್ಥಲ ಸೇವ್ಯಸ್ಥಲ ವಿಹಾರ ಶೀಲರು-ಅವರು. ಶಿವಧರ್ಮವನ್ನು ಕುರಿತು ಅವರ ಅನುಸರಣೆ, ಅನುಲಕ್ಷ್ಯ, ಅಧಿಕ ಮಮತೆ, ದಾಸೋಹಂ ಭಾವ—ಇವೆಲ್ಲವೂ ಸಮಕಾಲೀನ ಜನತೆಯನ್ನು ದಂಗುಪಡಿಸಿದವು. ತಮ್ಮ ಕುಲ ಪದ್ಧತಿಗೆ ವಿರುದ್ಧವಾಗದೆ ಇದ್ದುಕೊಂಡು, ಶಿವನಲ್ಲಿ ಚಿತ್ತವನ್ನು ಸಮನಿಸಿ—ಅವರು ಶಿವ ಪ್ರಸಾದ ತೇಜವೇ ಆಗಿ ಉಳಿದರು.

ತಮ್ಮ ಮಟ್ಟಿಗೆ ತಾವು ಧನ್ಯರಾದುದೇ ಅಲ್ಲ. ಸಾಮಾನ್ಯ ಜನರು ಕೂಡ–ವಿಶ್ವ ಜೀವಿಗಳಾಗಿ ವಿಶ್ವ ಮಾನವರಾಗಿ ವಿಶಾಲ ಬುದ್ಧಿವಂತರಾಗಿ ಬಾಳುವುದಕ್ಕೆ ಏನೇನು ಅಗತ್ಯವೋ ಆ ಅಗತ್ಯ ಶಿವಸಿದ್ಧಾಂತ ಬೋಧೆಯನ್ನೇ ಕುರಿತು ಅವರು ವ್ಯಾಖ್ಯಾನ ಮಾಡಿದರು. ಭಾವೀ ಪ್ರಜಾಸತ್ತೆಯ ಉನ್ನತಿಯ ಜೀವಾಳವಾಗಿ ನಿಂತರು. ಅವರ ಆ ಸ್ಥಿತಪ್ರಜ್ಞೆಯ ಮುಂದೆ–ಅವರ ಆ ಸಮ್ಯಕ್ ಸಮಾಧಿಯ ಮುಂದೆ–ಅವರ ಆ ಅಭಯ ಪ್ರಸಾದದ ಮುಂದೆ, ಆಶ್ರಿತ ಜನತೆ ಕ್ರಮವಾಗಿ ನಿಂತು ಅಭಿನಂದಿಸಿತು. ಅವರು ತೋರಿಸಿದ ಸಮಾಜ ಧರ್ಮ, ರಾಷ್ಟ್ರ ಧರ್ಮ, ಪ್ರಪಂಚ ಧರ್ಮ, ಕಾರ್ಯ ದಕ್ಷತೆ, ಓಜಸ್ಸು-ತೇಜಸ್ಸು-ಎಲ್ಲವನ್ನೂ ಹಿಂಬಾಲಿಸಿ ನಡೆದು ಅಕುಟಿಲ ನಾಗರಿಕರೆನಿಸಿಕೊಂಡವರೂ ಇದ್ದರು. ಅಂದಂದಿನ ಜನ ಜೀವನಕ್ಕೆ ರಾಷ್ಟ್ರ ಪ್ರಗತಿಗೆ ಒಗ್ಗುವಂತಿತ್ತು–ಅವರ ಸಾಹಸ, ಪೌರುಷ ದ್ಯೋತಕ ನಡವಳಿಕೆ. ಅವರ ಸಮ ಶೀತಲ ಪ್ರಕೃತಿ, ತತ್ಕಾಲೀನ ದುಷ್ಟ ಮಾನವ ಹವೆಯನ್ನು ನಿರ್ಮಲಗೊಳಿಸಿ ಸಾಧು ವಿಶ್ವಕ್ಕೆ ನೆಮ್ಮದಿ ತಂದಿತು ; ಅನುಯಾಯಿ ಕುಲವನ್ನು ಉದ್ಧರಿಸಿತು.

ಪರ ಪುರುಷಾರ್ಥಮಂ ಪರಹಿತಾರ್ಥಮನಗ್ಗಳ ಪಾರಮಾರ್ಥಮಂ
ನಿರುಪಮ ಲಿಂಗ ನಿಷ್ಠೆಯ ಮಹಾಗಣ ತುಷ್ಟಿಯ ನೀಶ ಗೋಷ್ಠಿಯಂ॥

ಸುರುಚಿರ ಸತ್ಯ ಶಾಂತಿ ದಮೆಯಂ ಕ್ಷಮೆಯುಂ ಅಭಯ ಪ್ರಸಾದವಮಂ
ಕರುಣಿಸು ದೇವ ಮೂಜಗದ ಜೀವರಿಗೂ ಗುರು ಶಂಕರೇಶ್ವರಾ ||

ಎಂದು, ಅವರು ಅನವರತ ಪ್ರಾರ್ಥನೆ ಸಲ್ಲಿಸುವರು—ದಯಾಳು ಪರಮ ಪ್ರಭು ಪರಮೇಶ್ವರನಿಗೆ ; ನಡೆದಂತೆ ನುಡಿದ ನಿತ್ಯರು ಅವರು.

* * * *

ಜಗತ್ತು ಜ್ಯೋತಿರ್ಲಿಂಗ ಸ್ವರೂಪವೂ, ಚಿದಾಕಾರವೂ ಆಗಿದೆ. ಆದರೆ ಒಂದಂಶವಾದ ಮಾನವ ಕುಲವು ತನ್ನ ಗರಿಮೆಗೆ ತಕ್ಕಂತೆ ತಲೆಯೆತ್ತಿ ಮೆರೆಯಬೇಕೆಂದಿದ್ದರೆ, ಒಳ್ಳೆಯ ಕೀರ್ತಿ–ಮಹತ್ತರವಾದ ಇಷ್ಟಾರ್ಥಸಿದ್ಧಿ–ತನುವಿಕಾರ–ಮನೋವಿಕಾರ–ಭಾವವಿಕಾರವಿಲ್ಲದ ಸುಸ್ಥಿತಿ, ಶ್ರೇಷ್ಠವಾಗ್ವಿಲಾಸ, ಉತ್ತಮ ವಂಶೋನ್ನತಿ ಇದಿಷ್ಟೂ ಬೇಕು. ಸಕಲ ಸೌಲಭ್ಯ ಸೌಭಾಗ್ಯ ಹೊಂದಿ ಸಂತೋಷದಿಂದಿರಬೇಕಾದರೆ—೧) ತನ್ನನ್ನು ತಾನು ತಿಳಿಯುವುದು, ೨) ತನಗೂ ವಿಶ್ವಕ್ಕೂ ವಿಶ್ವೇಶ್ವರನಿಗೂ ಇರುವ ಸತ್ಯ ಸಂನ್ನಿಕರ್ಷಣ ಸಂಸ್ಕೃತಿಯನ್ನು ಕುರಿತು ವಿಚಾರಿಸುವುದು, ೩) ವಿಶ್ವಶಕ್ತಿಯೊಡನೆ ವಿಶ್ವಜೀವನದೊಡನೆ, ಸರ್ವೋದಯ ಸಮಾಜ ಸಂವಿಧಾನದ ಸಂಗಡ ಸೇರಿ ಸಂತೋಷಗೊಳ್ಳುವುದು ; ೪) ಮನಸ್ಸೇ ಕಾತರಿಸುವುದಿದ್ದರೆ–ವಿಶ್ವಶಾಂತಿಗೋಸುಗವೇ ಕಾತರಿಸುವುದು, ೫) ಅಜ್ಞಾನ ಹಾಗೂ ಅನುಮಾನ ಸಮಸ್ಯೆಯ ಹಿಡಿತದಿಂದ ಪಾರಾಗುವುದು, ೬) ನೆರೆಹೊರೆಯವರನ್ನು ತನ್ನಂತೆಯೇ ಕಾಣುವುದು, ೭) ಆತ್ಮೋನ್ನತಿಗೋಸುಗವೇ ಅಧ್ಯಾತ್ಮ ವಿದ್ಯಾಭ್ಯಾಸ ಮಾಡುವುದು, ೮) ತಾನು ಮಾಡುವ ಧ್ಯಾನ, ಚಿಂತನೆ, ತಪಕ, ಸನ್ನಾಹ ಸರ್ವವನ್ನೂ ಪರಿಶುದ್ಧ ಶ್ರುತಿ-ಶಾಸ್ತ್ರ-ಆಗಮ-ಸ್ಮೃತಿ-ಪುರಾಣ-ಆದ್ಯರ ವಚನ ನಿಶ್ಚಯದ ಪ್ರಕಾರ, ಜೈವಿಕ ನಿತ್ಯ ಸುಖ ಶಾಂತಿ ಕೈವಲ್ಯದ ಸಲುವಾಗಿಯೇ ಮೀಸಲು ಮಾಡುವುದು ; ಮತ್ತು ೯) ಜೀವಗುಣವನ್ನು ದೇವಗುಣವನ್ನಾಗಿ ಪರಿವರ್ತನೆಗೊಳಿಸಲೋಸುಗವೇ ಬಗೆ ಬಗೆಯ ಪೂಜಾ–ಕೈಂಕರ್ಯ–ಉಪಾಸನೆ–ಯೋಗಾಭ್ಯಾಸ–ಯಜ್ಞ ಭೂಮಿಕಾ ಸಿದ್ಧತೆ ಮುಂತಾದ ಕ್ರಮಗಳನ್ನು ಕೈಗೊಳ್ಳುವುದು ; ಇಂಥ ಪಾಠಗಳನ್ನು ಆದ್ಯರು ಅಭ್ಯಾಸಮಾಡಿದರು. ಶಿವಪ್ರಸಾದದ ವಿಷಯದಲ್ಲಿ ಅವರ ನಂಬಿಕೆ ಯಥಾರ್ಥವಾಗಿಯೇ ಇತ್ತು. ಚತುರ್ವಿಧ ಪುರುಷಾರ್ಥ

ವನ್ನು ದೊರಕಿಸುವ ಶಿವಭಕ್ತಿಯನ್ನು ನಾನಾರೀತಿಯಲ್ಲಿ ಅಭಿವೃದ್ಧಿಗೊಳಿಸಿ ಕೊಳ್ಳುವುದಕ್ಕಿಂತಲೂ ಇನ್ನಾವ ಹೆಚ್ಚಿನ ಆಕಾಂಕ್ಷೆ ಬೇಕಾಗಿತ್ತು ಆ ಜ್ಞಾನ ಸಿದ್ಧರಿಗೆ? ತಮ್ಮ ಅಂತಃಕರಣ ಪಂಚೇಂದ್ರಿಯಗಳಲ್ಲಿ ಪುಣ್ಯದ ಬಲವು ಅವಿರತ ಇರುವಂತೆ ನೋಡಿಕೊಳ್ಳುವುದಕ್ಕಿಂತಲೂ ಇನ್ನಾವ ದುಮ್ಮಾನ— ಸುಮ್ಮಾನ—ಶಿವಸಂಕಲ್ಪ ಬೇಕಾಗಿತ್ತು, ಆ ಯೋಗಿವರರಿಗೆ?

ಆಧಾರ :—

ಜ್ಯೋತಿರ್ಲಿಂಗೇ ಚಿದಾಕಾರೇ ಸ್ವಪ್ರಕಾಶೇ ನಿರಂತರೇ ।
ಏಕೀಭಾವಮುಪೇತಸ್ಯ ಕಥಂ ಜ್ಞಾನಸ್ಯ ಸಂಭವಃ ॥೬೦॥
(ಶಿ.ಸಿ. ಪರಿ—೨೦

ಮುಕ್ತಿರೇವ ಪರಾತೃಪ್ತಿಃ ಪರಮಾನಂದ ಲಕ್ಷಣಮ್ ।
ನಿತ್ಯತೃಪ್ತಸ್ಯ ಮುಕ್ತಸ್ಯ ಕಿಮನ್ಯೈ ರ್ಭೋಗ ಸಾಧನೈಃ ॥೭೪॥
(ಸಿ.ಶಿ. ಪರಿ—೧೮

ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।
ಆತ್ಮನ್ಯೇವಾತ್ಮನಾ ತುಷ್ಟ ಸ್ಥಿತಪ್ರಜ್ಞಸ್ತಥೋಚ್ಯತೇ ॥೫೫॥
(ಗೀ—ಅ ೨.

ಯಸ್ಮಿನ್ನೃಚಸ್ಸಾಮ ಯಜೂಗ್ಂ ಷಿ
ಯಸ್ಮಿನ್ಪ್ರತಿಷ್ಠಾ ರಥನಾ ಭಾವಿ ಭಾರಾಃ ।
ಯಸ್ಮಿಗ್ಂ ಶ್ಚಿತ್ತಗ್ಂ ಸರ್ವಮೋತಂ ಪ್ರಜಾನಾಂ
ತನ್ಮೇಮನಃ ಶಿವಸಂಕಲ್ಪಮಸ್ತು ॥
(ಯಜು—

ಕಾಯವು ನೀರಿನ ಗುಳ್ಳೆ ನಿ
ಕಾಯವು ಮುಗಿಲುಗಳ ಚಂದದಿಂ ಮಿರುಗುವುದೈ ॥
ಪ್ರಾಯವು ಮಿಂಚಿನೊಲನಿಶಂ
ಕಾಯುವ ದೇವಂ ನೀನೊರ್ವನ್ನೆ ಸಿರಿಸಂಜುಂಡಾ ॥

ರಾಜರ್ಷಿ ಮುಮ್ಮಡಿ ಕೃಷ್ಣರಾಜ,
ಸಿರಿಸಂಜುಂಡ ಶತಕ

"ನಾನು ಸ್ವಾಮಿಯು, ನಾನು ದೇವರು, ನಾನು ದೇವಪುತ್ರ"

ಹೀಗೆಂಬ ವೈಯಕ್ತಿಕ 'ಅಹಂ ಬ್ರಹ್ಮತ್ವ'ಕ್ಕೆ ಒಳಗಾಗದ, ದೇಹಾಭಿಮಾನವೇ ಮುಂತಾದ ವಿವಿಧ ವಿಕಲ್ಪಭಾವನೆಯ ನೆರಳಿನಲ್ಲಿ ನಿಲ್ಲದ ಚಿದಾಕಾಶ ಸ್ವರೂಪವಾದ ಆಕಾಶ ವಸ್ತುವಿನೊಡನೆ ಏಕೀಕೃತನಾದ ಪರಮಾತ್ಮಪ್ರಸಾದಜೀವಿಗೆ ಸುಖ-ದುಃಖ ಉಪಾಧಿಯ ಆವಾವ ಬಂಧನವೂ ಇರುವುದಿಲ್ಲ. ಅಜ್ಞಾನ ಜನ್ಯವಾದ ಜಾತಿ, ವರ್ಣ, ಆಶ್ರಮ ಮೊದಲಾದ ಅಶುದ್ಧವಾಸನೆಯಾದರೂ ಅವನ ಬಳಿ—ಅದೇಕೆ ಸುಳಿದೀತು ? ದೇಹದ ಹಂಗೇ ಇಲ್ಲದವನನ್ನು ಕುಟುಂಬ ಪೋಷಣಾದಿ ವ್ಯಾಪಾರಭಾಗವು ಹೇಗೆ ಸೋಕೀತು ? ಇಲ್ಲ, ಅವುಗಳ ಉಪಹತಿಯೊಂದೂ ಅವನಿಗಿರುವುದಿಲ್ಲ.

ಅವನ ಚರಮನಿರೀಕ್ಷೆ: ಪ್ರಪಂಚ ನಿಯಮನಾದಿ ಪಂಚಮಹಾಕೃತ್ಯಗಳ ಮೂಲಪುರುಷನಾದ ಪರಮಶಿವನ ಅನುಗ್ರಹವನ್ನು ಗಳಿಸುವ ಕಡೆಗೆ, 'ಭೂ' ಧಾತುವೇ ಮೊದಲಾಗಿ 'ಶಿವ' ಧಾತು ಕೊನೆಯಾದ—ಮೂವತ್ತಾರು ಮಹಾ ಧಾತುಗಳ ಮೂಲ ಅನುಭವವನ್ನು ಪೂರ್ತಿಯಾಗಿ ಪಡೆಯಬಯಸುವುದು, ಮತ್ತು ಆ ಅನಾದಿ ಆತ್ಮಚೈತನ್ಯದ ಕೃಪೆಯನ್ನು ಆಗುಮಾಡಿಕೊಳ್ಳುವುದು, ಇದಿಷ್ಟರ ಕಡೆಗೇ ಅವನ ಮನವಿದೆ ಎಂದ ಬಳಿಕ, ಅವನನ್ನು ಈಗಿನ ಪಂಚಭೌತಿಕದೇಹ ಸಂಬಂಧ ಚಲನ-ವಲನ, ರುದ್ರ-ವಿಷ್ಣು-ಬ್ರಹ್ಮ-ಇಂದ್ರ ಪದವಿಯ ಸಂಕೋಲೆ ಎನಿತೆನಿತೂ ಮುಟ್ಟುವಂತಿಲ್ಲ. ಈ ಮೊದಲೇ ಐದನೆಯ ಪ್ರಕರಣದಲ್ಲಿ ಹೇಳಿದಂತೆ, ಇಷ್ಟ--ಪ್ರಾಣ--ಭಾವಲಿಂಗ ಪರ್ಯಾಯ ಪರಶಿವ ಬ್ರಹ್ಮದೊಳಗೆ ಐಕ್ಯವಾಗುವುದೊಂದೇ ಸಾಕು—ಅವನಿಗೆ. ಆ ದೈವೀ ಉನ್ಮಾದದ ಆನಂದದಲ್ಲಿ ಹುಟ್ಟದ-ಬೆಳೆದ-ಸುಷುಪ್ತಿ ಮೊದಲಾದ ಉತ್ತರ ಕ್ಷಣದ ಅವಸ್ಥೆಗಳನ್ನು ಪ್ರೀತಿಸುತ್ತಿರುವ ಜಗತ್ತಿನೊಡನೆ ಪ್ರೇಮದಿಂದ ಆಡುತ್ತಾ, ಹಾಡುತ್ತಾ, ಅನಾದಿ ಗುರುಮೂರ್ತಿಯ ಪೂರ್ಣಕರುಣೆಯಲ್ಲಿ ಬೆರೆದು ಚಿನ್ಮಯನಾಗುವನು ; ಚಿದ್ರೂಪಿಯಾಗುವನು—ಆ ಪರಮಭಾಗ್ಯಶಾಲಿ ! ಇನ್ನಿಲ್ಲ ಅವನಿಗೆ ಜನನ-ಮರಣ.

ಅಹಂಬ್ರಹ್ಮೇತಿ ಭಾವಸ್ಯ ವಸ್ತುದ್ವಯ ಸಮಾಶ್ರಯಃ |
ಏಕೀಭೂತಸ್ಯ ಚಿದ್ವ್ಯೋಮ್ನಿ ತದಭಾವೋ ವಿನಿಶ್ಚಿತಃ ||೪೫||

['ಅಹಂ ಬ್ರಹ್ಮೇತಿ ಭಾವಸ್ಯಾಹಮಿತಿ ಬ್ರಹ್ಮೇತಿ
ವಸ್ತು ದ್ವಯಾಪೇಕ್ಷೋ ಭವತಿ'-ತತ್ತ್ವಪ್ರದೀಪಿಕಾವ್ಯಾಖ್ಯಾ.]

ಏಕೀಭಾವೇನ ರೂಢಸ್ಯ ನಿಷ್ಕಲಂಕೇ ಚಿದಂಬರೇ ।
ಕ್ವ ಜಾತಿವಾಸನಾಯೋಗ ಕ್ವ ದೇಹತ್ವಂ ಪರಿಭ್ರಮಃ ॥೪೬॥
ನ ಬಿಭೇತಿ ಜರಾಮೃತ್ಯೋರ್ನಕ್ಷುಧಾಯಾ ವಶಂ ವ್ರಜೇತ್ ।
ಪರಿಪೂರ್ಣ ನಿಜಾನಂದ ಸಮಾಸ್ವಾದಾ ನ್ಮಹಾ ಸುಖೀ ॥೪೯॥

(ಸಿ.ಶಿ. ಪರಿ–೧೮

*  *  *  *



## ಸರ್ವಾಂಗಾನುಭೂತಿಯೋಗ

ಭರತಖಂಡದಲ್ಲಿ ಬಹಳ ಹಿಂದಿನಕಾಲದಿಂದಲೂ ಕ್ರಮ ಪ್ರಾಪ್ತ ನಿರಂಕುಶ ಪ್ರಭುತ್ವದ, ಇಲ್ಲವೇ ಸಾಂಕುಶ ಪ್ರಭುತ್ವದ, ಇಲ್ಲವೇ ಜನತಂತ್ರ-ಸ್ವತಂತ್ರ ಪ್ರಭುತ್ವದ ಯಾವದೇ ದೇಶವಾದರೂ ತನ್ನಲ್ಲಿ—ನ್ಯಾಯಾಂಗ, ಕಾರ್ಯಾಂಗ, ರಕ್ಷಣಾಂಗ, ಕೃಷಿ-ಶಿಕ್ಷಣ-ಧರ್ಮಾಡಳಿತ, ಹೀಗೆ ಹರೆ ಹನ್ನೆರಡು ಅಂಗಗಳನ್ನು ಏರ್ಪಡಿಸಿಕೊಂಡು, ಅವುಗಳ ಕರ್ತವ್ಯವನ್ನು ಒಮ್ಮುಖಮಾಡಿಕೊಂಡು—ಚಾಕಚಕ್ಯತೆಯಿಂದ ಆಡಳಿತ ನಡೆಸಿ, ತನ ಅತಿಶಯವನ್ನು ಹೇಗೆ ಹೆಚ್ಚಿಸಿಕೊಂಡುದುಂಟೋ ಅದೇ ಪ್ರಕಾರ—

ಅಲ್ಲಿಯ ಮತಮತಾಂತರ ಪೀಠಾಧಿಕಾರಿಗಳೂ ತಂತಮ್ಮ ಸಮಾಜದ ಹಾಗೂ ನಾಡಿನ ಸಮುನ್ನತಿ ತಂತ್ರ ಸೂಕ್ಷ್ಮವನ್ನು ಚೆನ್ನಾಗಿ ಗ್ರಹಿಸಿಯೂ, ವಿಶ್ವಸೌಖ್ಯದತ್ತ ಗಮನಿಸಿಯೂ, ಆತ್ಮಬುದ್ಧಿಯನ್ನು ಅವಲಂಬಿಸಿಯೂ ಇದ್ದವರಾಗಿ, " ದೇವ-ಜೀವ " ದರ್ಶನೋಪದೇಶದಮೂಲಕ, ಎಲ್ಲ ಮಾನವರ ಜೀವನ ವ್ಯವಹಾರವನ್ನು ಸುವ್ಯವಸ್ಥೆಗೊಳಿಸಿದರು. ಜನರಲ್ಲಿ ಆತ್ಮವಿಕಾಸ ಜ್ಞಾನವನ್ನು ಬೆಳೆಯಿಸಿ, ಆಧ್ಯಾತ್ಮ ಸಾಧನೆಗೆ ತೊಡಗಿಸಿ, ಮನದ ಜಂಜಡವ ಬಿಡಿಸಿ, ಅವಿದ್ಯಾದಿ ಕ್ಲೇಶ ಪಂಚಕದ ಸೆರೆಯಿಂದ ಜೀವನನ್ನು ಮುಕ್ತಗೊಳಿಸಿದರು. ಅವರ ಸಾಹಸದ ಫಲವಾಗಿ, ಮಾನವನು ಶುದ್ಧ ನಾಗರಿಕನಾದನು. ತನ್ನಗೋಸುಗ ನೆಮ್ಮದಿಯ ರಾಜ್ಯವನ್ನು ನಿರ್ಮಿಸಿಕೊಂಡನು. ದುಷ್ಕೃತ್ಯದ—ದುರ್ದೆಸೆಯ ಬಿರುಗಾಳಿಯ ಹೊಡೆತದಿಂದ ಸಜ್ಜನರನ್ನು ಸಲಹುವವನಾದನು. ಅವಿವೇಕದ—ದೌರ್ಜನ್ಯದ ಮೊಟ್ಟೆಯಂತಿದ್ದ ಪಾಪಿಗಳನ್ನು ದಂಡಿಸಿ, ಲೋಕದ ತುಂಬ ಶಾಂತಿಯನ್ನು ತುಂಬುವವನಾದನು.

ರಾಷ್ಟ್ರರಾಷ್ಟ್ರಗಳ, ಪ್ರಾಂತ್ಯ ಪ್ರಾಂತ್ಯಗಳ ಜನರ ಅನುರಾಗ, ಸ್ವಾತಂತ್ರ್ಯಪ್ರಿಯತೆ ಯಾವ ಪ್ರಕಾರ ಇತ್ತೋ ಅದಕ್ಕೆ ಅನುಸಾರವಾಗಿ—ಅಲ್ಲಲ್ಲಿ ಅವರವರ ಆಚಾರವಿಚಾರ ಕಲಾಪರಂಪರೆಯೇ ಕ್ರಮವಾಗಿ ಬೆಳೆಯುತ್ತಾ ಬಂದಿತು. ಅಂತಹ ಪ್ರಸಂಗಗಳಲ್ಲಿ ಸಹ ಜೀವನ-ಸಹ ಅಭ್ಯಾಸವು ಜಾಗತಿಕ ಒಕ್ಕೂಟವನ್ನು ಸ್ಥಾಪಿಸಲು ಅವಕಾಶವಾದಂತಾಯಿತು.

ಕಾಲ ಪರಿಪಕ್ವವಾದಾಗ—ಬಹು ಜನರ ಮನಸ್ಸಿನಲ್ಲಿ ಧರ್ಮಜಾಗೃತಿ ಪರಿಜ್ಞಾನ ಒಡಮೂಡಿದಾಗ, ವಿಶ್ವಸಾಂಸ್ಕೃತಿಕ ಬಾಂಧವ್ಯವನ್ನು ಸ್ಥಾಪಿಸಿದ್ದೂ—ಸ್ಥಿರಗೊಳಿಸಿದ್ದೂ ಉಂಟು. ನಾನಾ ದೇಶಗಳ-ನಾನಾ ಭಾಷೆಗಳ ಹಲವಾರು ಮತಗಳ ಐಕ್ಯತೆಗೆ ಭಾರತೀಯ ಧರ್ಮಕ್ರಾಂತಿಕಾರರ ಹೋರಾಟ ಅತಿಯಾಗಿ ಸಹಾಯಮಾಡಿತು.

ದೇಶಕಾಲ ಪರಿಸ್ಥಿತಿಯನ್ನು ಗಮನಿಸಿ, ಅವರವರ ಮತಧರ್ಮವನ್ನು ಸರಿಪಡಿಸಿಕೊಳ್ಳಬೇಕೆಂಬುದೂ—ಸಂರಕ್ಷಿಸಿಕೊಳ್ಳಬೇಕೆಂಬುದೂ, ಪರಸ್ಪರ ಪ್ರೇಮ-ಐಕಮತ್ಯ-ಸಂಘಟನೆಗಳಿಂದಲೇ ಜನರು ತಮ್ಮ ತಮ್ಮ ನೆಮ್ಮದಿಯನ್ನು ಕಾಯ್ದುಕೊಳ್ಳಬೇಕೆಂಬುದೂ ಎಲ್ಲ ಸುಶಿಕ್ಷಿತರ ಅಭಿಲಾಷೆಯಾಗಿತ್ತು. ಅಭಿಜ್ಞರ ಅಭಿಪ್ರಾಯವಾಗಿತ್ತು. ಸರಿಸುಮಾರಾಗಿ ಪ್ರಪಂಚದ ರಾಜ್ಯಾಂಗ-ಧರ್ಮಾಂಗ ಏಕತ್ವ ಯಾವಾಗಲೂ ಇತ್ತು. ಎಲ್ಲರೂ ಆಸ್ತಿಕರೇ ; ಎಲ್ಲರೂ ಜೀವನ ವ್ಯವಹಾರವನ್ನು ಕುಶಲತೆಯಿಂದ ನಡೆಸತಕ್ಕವರೇ ; ಎಲ್ಲರೂ ಉಪಯುಕ್ತ ಕಲಾಕೋವಿದರೇ; ಎಲ್ಲರೂ ಏಕೈಕಬ್ರಹ್ಮಸೂತ್ರಬದ್ಧರೇ ಆಗಿದ್ದರು.

ಸುಧಾರಿತ ಜನಾಂಗ, ತಂತಮ್ಮ ಆಚಾರ-ವಿಚಾರ-ನೀತಿ ಗೌರವಕ್ಕೆ ಈ ವರಿವಿಗೂ ಚ್ಯುತಿ ತಂದುಕೊಂಡದ್ದಿಲ್ಲ. ವೀರಶೈವ ಧರ್ಮಾನುಯಾಯಿಗಳು ಕೂಡ, ಪ್ರಚಲಿತ ಯುಗಶಕ್ತಿಯನ್ನು ಉಲ್ಲಂಘಿಸದೆಯೂ ಹಿರಿಯ ಸಂಪ್ರದಾಯವನ್ನು ಕಡೆಗಣಿಸದೆಯೂ ಎಚ್ಚರಿಕೆಯಿಂದ ಹೋಗುತ್ತಿದ್ದಾರೆ. ಭರತಖಂಡವನ್ನು ತಮ್ಮ ಶಾಶ್ವತ ಅಧೀನತೆಗೆ ಒಳಪಡಿಸಿಕೊಳ್ಳಲು ಅಪೇಕ್ಷಿಸಿ, ಆಂಗ್ಲೇಯ ಮುಂದಾಳು ಒಬ್ಬರು—"To Kill a Nation, Kill its Literature" ಎಂದರು. ಒಂದು ಜನಾಂಗವನ್ನು ಹಾಳುಮಾಡಬೇಕಾಗಿದ್ದರೆ, ಅದರ ಪೂರ್ವ ಸಂಸ್ಕೃತಿಯನ್ನು-ಸಾಹಿತ್ಯವನ್ನು ಮೊಟ್ಟಮೊದಲು ಹಾಳುಮಾಡಬೇಕು" ಎಂದು ಈ ಸೂಚನೆ. ಅಂತಹ ಸಂದರ್ಭಗಳು ಒಂದರಮೇಲೊಂದು ಹಾಯ್ದು ಬಂದಾಗಲೂ ವೀರಶೈವರು ವಂಚಿತರಾಗಲಿಲ್ಲ. ತಮ್ಮ ಸಂಸ್ಕೃತಿ-ಸಭ್ಯತೆ-ಸಾಹಿತ್ಯರಾಶಿಯನ್ನು ಸಂರಕ್ಷಿಸಿಕೊಳ್ಳುತ್ತಲೇ ಬಂದರು. ಶಿವಧರ್ಮ ನಿಂದಕರೊಡನೆ ಹೋರಾಡಿದರು. ಶಿವದ್ರೋಹಿಗಳನ್ನು ಸದೆಬಡಿದು ಶಿವ ಸಂಸ್ಕೃತಿಗೆ ಎರಡೆಣಿಸಿದ ದುಷ್ಟರಿಗೆ ಶಾಪವಿತ್ತುದೂ ಸತ್ಯ. ಒಮ್ಮೊಮ್ಮೆ

ತಾವಿದ್ದ ಸ್ಥಳವನ್ನು ಬಿಟ್ಟು ಬಿಟ್ಟು, ಮತ್ತೆಲ್ಲಿಗೋ ಒಕ್ಕಲು ಹೋಗಿ ಅಲ್ಲಿ ಮನೆ ಹೊಲ ಮಾಡಿ—ವ್ಯಾಪಾರ ವ್ಯವಸಾಯ ಮೊದಲಾದ ವೃತ್ತಿಯಲ್ಲಿ ನಿರತರಾದುದೂ ಸರಿ; ಶಿವಶಾಸನ ಹಾಗೆಯೇ ಇದೆ.

ಶಿವನಿಂದಾಕರಂ ದೃಷ್ಟ್ವಾ ಘಾತಯೇದಥವಾ ಶಪೇತ್ ।
ಸ್ಥಾನಂ ವಾ ತತ್ಪರಿತ್ಯಜ್ಯ ಗಚ್ಛೇದ್ಯದ್ಯಕ್ಷಮೋ ಭವೇತ್ ॥೩೮॥

(ಸಿ. ಶಿ. ಪರಿ—೯)

ಇಷ್ಟಕ್ಕೆ ಮುಗಿಸಿ ಬಿಡಲಿಲ್ಲ;

"ಎನ್ನ ಕಂದಿಸುತ್ತ ಬಹಳ
ಎನ್ನ ಬಾಧಿಸುತ್ತ ಬಿಡದೆ
ಎನ್ನನೊಂದು ನೆವಗಳಿಂದ ಕಾಡಿದವರಿಗೆ ॥
ಎನ್ನ ಕೊಂದಡವರಿಗೆಲ್ಲ
ಎನ್ನ ಪೂಜೆ ಫಲಗಳೆಲ್ಲ
ಉನ್ನತದೊಳವರಿಗಾಗಿ ಸುಖದಿ ಬಾಳಲಿ ॥"

ಎಂದು, ಅಪ್ಪಗಳು ಅಂದು ಬಿಟ್ಟರು. 'ಸ್ಪರ್ಧೆಗೆ ಸ್ಪರ್ಧೆ-ಮುಯ್ಯಿಗೆ ಮುಯ್ಯಿ' ಎನ್ನದ ಇಂಥ ಸ್ಥಿತಿಗೆ—ವೈರಾಗ್ಯದ ಉಜ್ವಲತೆ, ಗಾಂಭೀರ್ಯ ಪೂರ್ಣ ವೀರವಿರತಿ, ಸರ್ವಾರ್ಪಣದ ಉದ್ದೇಶ, ಭಕ್ತಿಯ ಆವೇಶ ಸರಿಯಾದ ಕಾರಣ.

ನೈಷ್ಠಿಕ ವೀರ ಮಾಹೇಶ್ವರನು ಸರ್ವ ಸಂಗ ಪರಿತ್ಯಾಗಿಯಾಗಿ, ದಾರ್ಶನಿಕನಾಗಿ, ಕವಿಯಾಗಿ, ಕೀರ್ತನಕಾರನಾಗಿ, ಪೂಜಾರಿಯಾಗಿ, ವ್ಯಾಖ್ಯಾನ ಪಟುವಾಗಿ, ದೇಶಿಕನಾಗಿ, ಪುರೋಹಿತನಾಗಿ, ಜೋಯಿಸನಾಗಿ, ಶಾಸ್ತ್ರಿಯಾಗಿ, ವೈದ್ಯನಾಗಿ, ಪತ್ರಿಕಾ ಸಂಪಾದಕನಾಗಿ—ವಿವಿಧ ಕಲೆಗಾರರೊಡನೆ ಸಾಹಿತಿಗಳೊಡನೆ ವಿಜ್ಞಾನಿಗಳೊಡನೆ ವಿಶ್ವಾಸದಿಂದ ಬೆರೆದು ಶಿವ ಸಿದ್ಧಾಂತವನ್ನು ಪ್ರಕಾಶಗೊಳಿಸಿದ್ದಾನೆ; ಪ್ರಕಾಶಗೊಳಿಸುತ್ತಾನೆ. ಅವನ ಕರ್ಮ ಕೌಶಲ್ಯವನ್ನು 'ಸರ್ವಾನುಭೂತಿಯೋಗ'ವೆಂಬ ಅಭಿಧಾನ ದಿಂದ ಕರೆದು ಗೌರವಿಸಿದರೆ ತಪ್ಪೇನು? ಇನ್ನಿತರ ಧ್ಯಾನಯೋಗ, ಜ್ಞಾನ ಯೋಗ, ಭಕ್ತಿಯೋಗ, ಕ್ರಿಯಾಯೋಗ, ಬುದ್ಧಿಯೋಗ, ಮಂತ್ರಯೋಗ,

ಪೂರ್ಣಯೋಗ ರಹಸ್ಯವೆಲ್ಲವೂ ಈ ಸರ್ವಾನುಭೂತಿಯೋಗದಲ್ಲಿ ಸಮರಸವಾಗಿ ಹೋಗಿದೆ-ವಿಲೀನವಾಗಿ ಬಿಟ್ಟದೆ ಎಂದರೆ ಬರುವ ಕುಂದೇನು ?

ಸರ್ವಾನುಭೂತಿಯೋಗಶೀಲರು ಯಾರೇ ಇರಲಿ ಅವರು ಎಲ್ಲ ಕಾಲದಲ್ಲೂ ಎಲ್ಲ ದೇಶದಲ್ಲೂ ಒಳ್ಳೆಯ ಪೌರರು, ಸಶಕ್ತರು, ತತ್ತ್ವಜ್ಞರು, ಶಿಷ್ಟರು, ಲೋಕಸೇವೆಗೆ ಸದಾ ಸನ್ನದ್ಧರೂ ಆಗಿ ಇದ್ದಾರೆ. ಪ್ರಪಂಚದ ಎಲ್ಲ ಭಾಗದಲ್ಲೂ-ದಾರಿದ್ರ್ಯ, ಅಜ್ಞಾನ, ಅಸ್ವಾತಂತ್ರ್ಯ-ರೋಗರುಜಿನ-ಅನಾಗರಿಕತೆ-ಅವಿದ್ಯೆ ಇಲ್ಲದೇ ಹೋಗಲಿ ; ಜನ ಜನರಲ್ಲಿ ಮದ ಮಾತ್ಸರ್ಯ ಕ್ರೋಧ ಅವಹೇಳನ ದುರ್ಗುಣ, ಜಾತಿ ವೈಶೇಷ್ಯ-ವೈಶಿಷ್ಟ್ಯ ಮಥನಭಾವ ಇಲ್ಲದೆ ಹೋಗಲಿ ; ವಿಶ್ವದಲ್ಲಿ ಆನಂದದ ಹೊಳೆ ಹರಿಯಲಿ ; ಅದರೊಡನೆ ಭಗವದಿಚ್ಛೆ ಬೆರೆತು ಒಳ್ಳೆಯ ಫಲವೀಯಲಿ—ಎಂದು ಅವರು ಬಯಸುವುದು ಸ್ವಾಭಾವಿಕ ! ಸಲಹೆಗಾರ ಮಂಡಲಿ ಕೃತಿಗಿಳಿಯಲಿ ; ಅವರ ಭುಜಕ್ಕೆ ಭುಜ ಕೊಟ್ಟು ದುಡಿದು ಉದ್ಧಾರವಾಗಲಿ !!

* * * *

ಕತ್ತಿ, ಗುರಾಣಿ, ಸಿಡಿಮದ್ದು, ಅಣುಬಾಂಬಿನ ಹೆದರಿಕೆ ತೋರಿಸಿ ಅಡಗಿಸಲಾಗದ ಅವಿವೇಕವನ್ನು ಅವಿದ್ಯೆಯ ಮತ್ತು ಅನೃತದ ಕ್ರೂರ ಬಲವನ್ನು—ಅನೈಕ ಮತ್ಯವನ್ನು ಆಧ್ಯಾತ್ಮ ವಿದ್ಯಾಭ್ಯಾಸ ಪ್ರಯತ್ನ ಒಂದರಿಂದಲೇ ದೂರಕ್ಕೆ ಅಟ್ಟಿ ಎಲ್ಲೆಲ್ಲೂ ಶಾಂತಿಯನ್ನು ಸ್ಥಾಪಿಸಬಹುದು. ಮುನ್ನಿನ ಋಷಿಗಳು ಮುನಿಗಳು ಮಹಾಂತರು ಒಡೆಯರು ಈ ಕಾರ್ಯ ಮಾಡಿ ತೋರಿಸಿದ್ದಾರೆ. ರಾಜಮಹಾರಾಜ ಸಾರ್ವಭೌಮರು ಈ ಬಗ್ಗೆ ಒಳ್ಳೆಯ ಉದಾಹರಣೆಯಾಗಿದ್ದಾರೆ. ವಿವಿಧ ಕಾವ್ಯ ಶಾಸ್ತ್ರ ವಿನೋದ-ವೈಜ್ಞಾನಿಕ ವಿಮರ್ಶಕರೂ ಈ ಹಾದಿಯಲ್ಲಿ ನಡೆದಿದ್ದಾರೆ. ಅಂದಂದಿನ ಸಮಸ್ತ ದುಃಖಗಳನ್ನು ಬೌದ್ಧಿಕ ಪ್ರಯತ್ನದಿಂದ ನಿವಾರಿಸಿಕೊಂಡುದಕ್ಕೆ ಇತಿಹಾಸವಿದೆ.

ತಾರ್ಕಿಕ ' ಪ್ರಮಾಣ-ಪ್ರಮೇಯ-ಪ್ರಮಾ ' ನ್ಯಾಯಾನುಸಾರವಾಗಿ ಸದ್ಧರ್ಮ ಸ್ವರೂಪವನ್ನು ಆಳವಾಗಿ ಅಭ್ಯಾಸ ಮಾಡುವುದಾದರೆ, ಸರಿಯಾದ ಕ್ರಮದಲ್ಲಿ ಮೂಲ ಶಿವತತ್ತ್ವವನ್ನು ಉಪಾಸನೆ ಮಾಡುವುದಾದರೆ—ಆಧ್ಯಾತ್ಮಿಕ, ಅಧಿ ಭೌತಿಕ, ಅಧಿ ದೈವಿಕ ತಾಪತ್ರಯಗಳು—ಬಗೆ

ಬಗೆಯ ಉಪಟಳಗಳು ಕಳಚಿ ಬೀಳುವುದು ಅನುಭವ ಸಿದ್ಧ. ಸಾಧಕ ವ್ಯಕ್ತಿಯ ಗುಣ-ಬುದ್ಧಿ-ಭಾವನೆಯನ್ನು ಪರೀಕ್ಷಿಸಿ ಆ ಉಪಾಸನಾ ಪದ್ಧತಿಯನ್ನು ಗುರು ಹಿರಿಯರು ಹೇಳಿ ಕೊಡುವರು. ಬೀಗಕ್ಕೆ ತಕ್ಕ ಬೀಗದ ಕೈ ಯಜಮಾನನಿಗೆ ಗೊತ್ತುಂಟು ತಾನೇ ?

ಸಾಧಕನಾದರೂ ಶ್ರದ್ಧಾ ಮುಖದಿಂದಲೇ ಮುನ್ನಡೆದು ವಿಜಯಿಯಾಗಬೇಕು. ವಿಜ್ಞಾನ ಮತ್ತು ಧರ್ಮ, ಈ ಎರಡರ ಸಮನ್ವಯ ಸಿದ್ಧಾಂತವೇ ಶಿವಸಿದ್ಧಾಂತ. ಜಗತ್ತಿನ ಮತ್ತು ಮಾನವನ ಅಭಿವೃದ್ಧಿಯ ಸಿದ್ಧಾಂತ ಇದು. ಭಾರತೀಯ ದಾರ್ಶನಿಕರು ವಿಮರ್ಶಿಸುವ 'ದೇವ-ಜೀವ-ಜಗತ್' ಅಥವ 'ತತ್-ತ್ವಂ-ಅಸಿ' ಅಥವ 'ಜ್ಞಾನ-ಕ್ರಿಯಾ-ಭಕ್ತಿ' ವಿವೇಕವನ್ನು, ಇಲ್ಲವೆ 'ಜ್ಞಾನ-ವಿಜ್ಞಾನ-ಪ್ರಜ್ಞಾನ' ವಿಶೇಷವನ್ನು ಸದ್ಗುರುವಿನ ಮುಖದಿಂದ ಕೇಳಿ-ಚಿಂತಿಸಿ-ದೃಢ ಮಾಡಿಕೊಳ್ಳಬೇಕು ; ಸತ್ಯಶುದ್ಧನಾಗಬೇಕು-ಮಾನವ ; ಎನ್ನುತ್ತಿದೆ ಶಾಸ್ತ್ರವಾಣಿ. ಹೀಗೆ ಆದವನೇ ಶಿವಪ್ರಸಾದಿಯು.

ಪ್ರಜ್ಞಾ ನೇತ್ರೋ ಲೋಕಃ ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ ||
(ಐ.ಉ. ೩/೧/೩)

ಅಜ್ಞಾನ ಮಲಿನಂ ಚಿತ್ತದರ್ಪಣಂ ಯೋ ವಿಶೋಧಯೇತ್ |
ಪ್ರಜ್ಞಾವಿಭೂತಿ ಯೋಗೇನ ತಮಾಹುರ್ಗುರು ಸತ್ತಮಃ ||೨೫||
(ಸಿ.ಶಿ. ಪರಿ--೧೩

ಯಾವತ್ಸಂಜಾಯತೇ ಕಿಂಚಿತ್ಸತ್ತ್ವಂ ಸ್ಥಾವರ ಜಂಗಮಂ |
ಕ್ಷೇತ್ರ ಕ್ಷೇತ್ರಜ್ಞ ಸಂಯೋಗಾತ್ತದ್ವಿದ್ಧಿ ಭರತರ್ಷಭ ||೨೬||
ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಂ |
ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ||೨೭||
ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಂ
ನ ಹಿ ನಸ್ತ್ಯಾತ್ಮನಾಽಽತ್ಮಾನಂ ತತೋ ಯಾತಿ ಪರಾಂಗತಿಂ ||೨೮||
(ಗೀ. ಅ-೧೩.

ಮನುಷ್ಯಪ್ರಯತ್ನದಿಂದ ಸಾಧಿಸಲಾಗದ ಕೆಲಸವೇನೂ ಉಳಿದಿಲ್ಲ ;

ಉಳಿಯುವಂತಿಲ್ಲ. ಇದು ಅಭಿಜ್ಞರ ಮತ. ಸೌದೆಯಲ್ಲಿದ್ದ ಬೆಂಕಿಯನ್ನು ಘರ್ಷಣೆಯಿಂದ ಹೊರಕ್ಕೆ ತಂದವನು, ಹಾಲಿನಲ್ಲಿದ್ದ ತುಪ್ಪದ ಗುಣವನ್ನು ಕಂಡು ಸವಿದವನು, ನೆಲದೊಳಗಣ ನಿಧಿ ನಿಧಾನ ಜಲರಾಶಿಯನ್ನು ಮೇಲ-ಕ್ಕೆತ್ತಿದವನು, ನೀರಿನಲ್ಲಿದ್ದ ಬೆಂಕಿಯ-ಗಾಳಿಯಲ್ಲಿದ್ದ ಶೈತ್ಯದ ಆಕಾಶದಲ್ಲಿದ್ದ ಅಭಿಗಮನ ಶಕ್ತಿಯ ಉಪಯೋಗವನ್ನು ಪಡೆದವನು—ಮನುಷ್ಯ. ಇಂಥ ಸಾವಿರಾರು ಬಗೆಯ ಸಾಹಸಕ್ಕಿಂತಲೂ ಮೇಲಾದುದು—ತನ್ನ ಶರೀರದ ಷಡಾಧಾರಗಳಲ್ಲಿ ಷಟ್ ಪ್ರಣವ ಸ್ವರೂಪಿ ಪರಶಿವಬ್ರಹ್ಮನನ್ನು ದರ್ಶನ ಮಾಡಕಲಿತುದು ; ಮತ್ತು ಆ ವಿಮಲ ಪರಂಜ್ಯೋತಿ ಪ್ರಕೃತಿಯೊಡನೆ ಕೂಡಿ ಸುಖಿಸಕಲಿತುದು ಮಾತ್ರವೆಂದು ಹೇಳಬಹುದು ;

* * * *

ಈ ಹಿಂದಿನ ಮೂರು ಪ್ರಕರಣಗಳಲ್ಲಿ ಕಂಡಂತೆ—ಭಸ್ಮ ರುದ್ರಾಕ್ಷ ಧಾರಣೆ, ಶಿವಮಂತ್ರ ಜಪಾನುಷ್ಠಾನ, ಶಿವಲಿಂಗೋಪಾಸನೆ-ಈ ಚತುರ್ವಿಧ ಕರ್ತವ್ಯಗಳಲ್ಲಿ ಸಾಧಕನು ನಿಷ್ಠನಾದುದರ ಮುಖ್ಯ ತಾತ್ಪರ್ಯವೇನು ? ತನ್ನ ಸುತ್ತಲೂ ಮತ್ತು ಜಗತ್ತಿನ ತುಂಬಾ-ಶಾಂತಿ, ಐಕಮತ್ಯ, ಶಿವಾನುಭವ ಪರಿಸರವನ್ನು ಕಂಡು, ಎಲ್ಲೆಡೆಯಲ್ಲೂ 'ಶಿವಧರ್ಮವ್ಯಾಪ್ತಿ' ವಿಶೇಷ ವನ್ನು ಅರಿತು-ತಾನು ಪರಮಸುಖಿಯಾಗಬೇಕು : ನಿತ್ಯತೃಪ್ತನಾಗಬೇಕು- ಎಂಬಿಷ್ಟೆ ಆಲೋಚನೆಯಿಂದ ಅಲ್ಲವೇ ? ಸರಿ. ಇಂಥ ಆಲೋಚನೆ ಯಶಸ್ವಿ ಯಾಗಲು, ಸಾಧಕನು ಕಾರ್ಯಸಾಧನೆಗಾಗಿ ತನ್ನ ಗುರುವಿನ ಮೇಲ್ಪಂಕ್ತಿ ಯಂತೆ ಸ್ವಧರ್ಮನಿಷ್ಠನಾಗುತ್ತಾ ಹೋಗಬೇಕು ; ವ್ಯಕ್ತಜಗತ್ತು ಶಿವ ಪ್ರಸಾದವೇ ನಿಜವೆಂದು ನಂಬಿ ನಡೆಯಬೇಕು. ಸಮಾಜದ ಹಿತಕ್ಕೆ ಪ್ರತಿಯೊಬ್ಬ ವ್ಯಕ್ತಿಯೂ ತಕ್ಕಷ್ಟು ಬಾಧ್ಯಸ್ಥನೇ ಆಗಿರುತ್ತಾನೆಂಬುದು ಸಟೆಯಲ್ಲ.

ಈಗ ಶಿವಧರ್ಮಿಯ ನಡೆ-ನುಡಿ-ಅನುಭವದ ಮಾತು :

ವೀರಶೈವನು ನಿಗಮಾಗಮ ಸಮ್ಮತ—ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಧರ್ಮವನ್ನು—ಶಿವಧರ್ಮವನ್ನು ಪಾಲಿಸುತ್ತಾನೆ. ಮಾನವನ ಸ್ಥೂಲಶರೀರದ ಶಿರಸ್ಸೇ ಮೊದಲಾದ ಅಷ್ಟಾಂಗಗಳನ್ನು ಸಂರಕ್ಷಿಸುವ ಮತ್ತು ಅವುಗಳನ್ನು ಸದುಪಯೋಗಕ್ಕೆ ಸಜ್ಜುಗೊಳಿಸುವ ಸಾಮರ್ಥ್ಯ ಅಷ್ಟಾವರಣ

ಧರ್ಮಕ್ಕೆ ಇರುವುದನ್ನು ಅವನು ಕಂಡು ಅನುಭವ ಮಾಡಿಕೊಂಡಿದ್ದಾನೆ. ಇಂದ್ರಿಯಜನ್ಯ, ಸ್ವಯಂಕೃತ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತ—ಅಷ್ಟಾವರಣ ಧರ್ಮಾಚರಣೆಯೊಂದೇ ಎಂದು ಭಾವಿಸಿಕೊಂಡಿದ್ದಾನೆ.

ಇನ್ನು ತನ್ನ ಸೂಕ್ಷ್ಮಶರೀರದ ಅಸ್ತಿತ್ವಕ್ಕೆ-ಪ್ರಾಣಾದಿವಾಯು ಪಂಚದ ಅವಶ್ಯಕತೆ ಹೇಗೋ ಹಾಗೆ—ಸದಾಚಾರ, ಶಿವಾಚಾರ, ಗಣಾಚಾರ, ಲಿಂಗಾಚಾರ, ಭೃತ್ಯಾಚಾರ—ಈ ಐದರ ಆವಶ್ಯಕತೆಯನ್ನೂ ಒಪ್ಪುತ್ತಾನೆ. ತನ್ನ ಅಂತರಂಗ ಬಹಿರಂಗ ಜೀವನವನ್ನು ಮಡಿಮಾಡಿ ಬೆಳಗಿಸುವ ಮತ್ತು ತನ್ನನ್ನು ಅಮರ-ಅಮಲ-ಅಕಲಂಕ ಪದಾರ್ಥವನ್ನಾಗಿ ಮಾಡಿ, ಅಚ್ಯುತ ಶಿವಪ್ರಸಾದದಲ್ಲಿ ಸ್ವಸ್ಥವಾಗಿ ಇರಿಸುವ ಶಕ್ತಿ—ಈ ಐದು ಬಗೆಯ ಆಚಾರಗಳಿಗೇ ಉಂಟೆಂಬುದನ್ನು-ಪರೀಕ್ಷಿಸಿ ದೃಢೀಕರಿಸಿದ್ದಾನೆ.

ಇದರಂತೆಯೇ,

ಶಿವಾಗಾರಮಿದಂಪ್ರೋಕ್ತಂ ಶರೀರಂ ಬೋಧದೀಪಿತಂ |
ಷಟ್ತ್ರಿಂಶತ್ತತ್ತ್ವ ಘಟಿತಂ ಸುಮನಃ ಪದ್ಮಪೀಠಕಂ ||೪೬||

..................................................................

(ಸಿ.ಶಿ. ಪರಿ—೧೯

ಇತ್ಯಾದಿ ವಾಕ್ಯಾರ್ಥವನ್ನು ಪರ್ಯಾಲೋಚಿಸಿ, ಗುರೂಪದೇಶದ ಮೂಲಕ—ಭಕ್ತಾದಿ ಷಟ್‌ಸ್ಥಲಗಳ, ಮೂವತ್ತಾರು ಮಹಾತ್ತತ್ತ್ವ (ದ್ರವ್ಯ) ಗಳ ಸಂಪೂರ್ಣ ಯೋಗ್ಯತೆಯನ್ನು ತಿಳಿದು ಪ್ರಯೋಜನಹೊಂದಿ ; ಅನಂತ—ಅಮಲ ಅತ್ಯಂತ ಮಹತ್ವಯುತ ಅಂಡಾಂಡ-ಬ್ರಹ್ಮಾಂಡ-ಪಿಂಡಾಂಡ ಸಹ ಚಿಂತನ, ಸಹ ಜೀವನ, ಸಾಹಚರ್ಯಯೋಗ ಪರವಶನಾಗಿದ್ದಾನೆ. ಷಟ್‌ಸ್ಥಲ ಬ್ರಹ್ಮಿಯ ಸೃಷ್ಟಿಯಲ್ಲಿ ಇಡೀ ಜೀವಕೋಟಿಯ ಅಭ್ಯುದಯ ನಿಶ್ಶ್ರೇಯಸಗಳು ಸದಾ ಅಪೇಕ್ಷಿತ. ಎಣ್ಣೆ-ಬತ್ತಿ-ಹಣತೆ ಒಂದಾಗಿ ಜ್ಯೋತಿಯ ಬೆಳಕಿಗೆ ತವರಾದಂತೆ, ಇಲ್ಲಿ ಅಷ್ಟಾವರಣ-ಪಂಚಾಚಾರ-ಷಟ್‌ಸ್ಥಲಗಳ ಐಕ್ಯದ ಅನುಭವ. ಇದುವೇ ಸರ್ವಾನುಭೂತಿ ಬೋಧೆಯ ಒಳಗುಟ್ಟು.

ಶಿವಯೋಗಿಯ ಪಾಲಿಗೆ ಶಿವಭಕ್ತ ಸಮಾಜದ ಎಲ್ಲರೂ ಸರಿಸಮಾನರು. ಬಾಷ್ಪುಬಲದಲ್ಲಿ ಎಲ್ಲರೂ ಸಮಗ್ರ ಆರ್ಥಿಕ ಸ್ವಾತಂತ್ರ್ಯ, ಔದ್ಯೋ

ಗಿಕಸ್ವಾತಂತ್ರ, ಬುದ್ಧಿಸ್ವಾತಂತ್ರ, ಸಮಾಜಸ್ವಾತಂತ್ರ್ಯ ವಾಕ್‌ಸ್ವಾತಂತ್ರ್ಯ ಧರ್ಮಸ್ವಾತಂತ್ರ್ಯ ವಿಶ್ವಕ್ಕೇ ಬೇಕು. ನೈತಿಕ ಪುನರುತ್ಥಾನ—ಶಿಷ್ಟಾಚಾರ ಪ್ರೇಮ—ಸತ್ಯ ನಿಷ್ಠೆ ಈ ಎಲ್ಲವನ್ನೂ ಎಲ್ಲರೂ ಅಂಗೀಕರಿಸಬೇಕು. ಶಿವಪ್ರಸಾದ ಸೇವನೆಯಿಂದ—ಮನಃ ಪ್ರಸಾದ ಸಿದ್ಧಿ; ಉತ್ತಮ ಆರೋಗ್ಯ ಭಾಗ್ಯ ಸಮೃದ್ಧಿ ; ಅಂತಃಕರಣ ಶುದ್ಧಿ ; ಸಕಲ ಆಧಿ ವ್ಯಾಧಿ ನಿವಾರಣೆ ; ಅನಂತಾನಂತ ಲೌಕಿಕ ವ್ಯಸನ ಪರಿಹಾರ ; ಭವಭಯ ವಿನಾಶ. ಹೀಗಾಗಿ—ಪ್ರಾಪಂಚಿಕ ಸೌಖ್ಯಕ್ಕೂ ಬೇಕು, ಪಾರಲೌಕಿಕ ಆನಂದಕ್ಕೂ ಬೇಕು—ಶಿವಪ್ರಸಾದ—ಶಿವನ ಅನುಗ್ರಹ!

ಮನಃ ಪ್ರಸಾದ ಸಿದ್ಧ್ಯರ್ಥಂ ನಿರ್ಮಲ ಜ್ಞಾನಕಾರಣಂ ।
ಶಿವಪ್ರಸಾದಂ ಸ್ವೀಕುರ್ವನ್ ಪ್ರಸಾದೀತ್ಯೇಷು ಕಥ್ಯತೇ ॥೯॥
ಆರೋಗ್ಯ ಕಾರಣಂ ಪುಂಸಾಮಂತಃಕರಣ ಶುದ್ಧಿದಂ ।
ತಾಪತ್ರಯ ಮಹಾರೋಗ ಸಮುದ್ಧರಣ ಭೇಷಜಂ ॥೧೩॥
(ಸಿ.ಶಿ. ಪರಿ—೧೧.)

ಕಡೆಗಾದರೂ, ಪೂರ್ವಜನ್ಮದ ಪುಣ್ಯವಶದಿಂದ, ಇಹಲೋಕದಲ್ಲಿ ತಾನು ಅನುಸರಿಸಿದ ಶಿವಧರ್ಮಾಚರಣೆಯ ಸಾಮರ್ಥ್ಯದಿಂದ—ನದಿಯೊಳಗೆ ನದಿಯು ಬೆರತಂತೆ ಪರಮ ಶಿವಲಿಂಗದ ನಿತ್ಯನಿರ್ವಾಣ ಸ್ಥಿತಿಯೊಳಗೆ ಒಂದಾಗಿ ನಿತ್ಯಪ್ರಸಾದಿಯಾಗುವುದು, ಸತ್ಯಪ್ರಸಾದಿಯಾಗುವುದು, ಪರಮ ಪ್ರಸಾದಿಯಾಗುವುದು, ಪರಮಾತ್ಮನ ಷಟ್‌ಸ್ಥಲ ಲೀಲೆಯ ಪರಿಣಾಮ ಪ್ರಸಾದಿಯಾಗಿ—ಆ ಸಂಭಾವನಾತ್ಮಕ, ವಿಧೇಯಾತ್ಮಕ ಚಿತ್‌ಚೇತನದ ಕೂಟದಲ್ಲಿ ಕೂಡಿ—ತತ್‌ಸಂಬಂಧ ಆನಂದ ನಿದ್ರೆಯಲ್ಲಿ ಓಲಾಡುವುದೂ—ಅವರಿಗೆ ಇಷ್ಟ!

ಶಿವಪ್ರಸಾದ ಭೋಗದ ವಿಷಯದಲ್ಲಿ ಶಾಂತರ—ಅನುಭಾವಿಗಳ ಅಭಿಪ್ರಾಯ ಹೇಗಿದೆ? ಅದನ್ನು ಹೀಗೆ ಸಂಗ್ರಹಿಸಿ ಹೇಳಬಹುದು :

ಪ್ರತಿ ಮನುಷ್ಯ—ಮನುಷ್ಯರಿಗೂ, ಮನುಷ್ಯರಿಗೂ—ಪ್ರಾಣಿಕುಲಕ್ಕೂ, ಮನುಷ್ಯರಿಗೂ—ಗ್ರಹ ನಕ್ಷತ್ರ ದಿಗ್ದೇವತಾ ಅಜ ಹರಿ ರುದ್ರಗಣಕ್ಕೂ ನಿಕಟತ್ವ ಏರ್ಪಡಬೇಕು; ಆತ್ಮೀಯತೆ ಬೆಸೆಯಬೇಕು. ಎಂತಹ ಸಾಮಾನ್ಯ ಜೀವಿಗಾದರೂ ಆತ್ಮಶಕ್ತಿಯೂ ಮಸ್ತಿಷ್ಕದ ಸುಪ್ತ ಪ್ರತಿಭೆಯೂ ಸತ್ವಯುತವಾಗಬೇಕು; ಸಕಲ ಜೀವಾವಳಿಗೆ ನಿರಂತರ ನೆಮ್ಮದಿ ಇರಬೇಕು. 'ಸಕ್ಕರೆ

ಅದರ ರುಚಿ' ಇದ್ದಂತೆ ಇಹ-ಪರ ಸ್ವರೂಪ ಸಮೈಕ್ಯತೆಯನ್ನು ಕಾಣಬೇಕು. ಸಮಾಜವಾದಕ್ಕೆ ಐಹಿಕ ಸ್ವರೂಪವನ್ನೇ ಹೆಚ್ಚಾಗಿ ನೀಡಿ ಗೌರವಿಸಬೇಕು. ಧಾರ್ಮಿಕ ರಂಗದ ಕರ್ತವ್ಯ ಸ್ಥಗಿತವಾಗಲೇಬಾರದು. ಮಾನವ, ನಿರಾಶಾವಾದಿಯಾಗಕೂಡದು. ಆದರೆ, ದುರಾಶೆಗೆ ತಿಲಾಂಜಲಿ ಕೊಡಪವರು ಯಾರೂ ಮುಂದುವರಿಯಲಾರರು. ಹೀಗೆಯೇ ನಿತ್ಯ-ನೈಮಿತ್ತಿಕ ಕಾಮ್ಯ ಸತ್ಕರ್ಮಗಳಿಗೆ ಪ್ರಚೋದನೆ, ನಿಯಮ–ನಿಬಂಧನೆಗಳ ಸತ್ಪ್ರವೃತ್ತಿಗೆ ಸ್ಥಾನ ಮರ್ಯಾದೆ ಅಗತ್ಯ.

ಇಂಥ ಸಾರವತ್ತರ ನಿಸ್ವಾರ್ಥದ ಮೆಚ್ಚು, ಲೋಕಸೇವಾ ಸಂಕಲ್ಪ, ಇಷ್ಟಾರ್ಥವ ದೊರಕಿಸಿಕೊಳ್ಳುವ ಕೆಚ್ಚು–ದಿಟ್ಟತನ–ನೈತಿಕ ಧಾರ್ಮಿಕ ಪ್ರೇಮ ಸಂಯುಕ್ತ ಜೀವಿಗಲ್ಲದೆ ಇನ್ನಾರಿಗುಂಟು? ಅದರ ಅಧಿಕತರ ಸತ್ತ್ವ ಬ್ರಹ್ಮತೇಜದಲ್ಲಿ ಅಡಗಿದೆ. ಯಾವ ಯಾವ ಕ್ಷತ್ರಿಯ ಬಲಕ್ಕೂ ಬಗ್ಗದ ದೌರ್ಜನ್ಯತೆಯು ಬ್ರಹ್ಮತೇಜಕ್ಕೆ ತಲೆತಗ್ಗಿಸುತ್ತದೆ ಎಂದು ವ್ಯಾಸಮಹರ್ಷಿ ಕೂಗಿ ಹೇಳಿದ್ದಾನೆ; ಅಲ್ಲವೇ?

ದಿಗ್ಬಲಂ ಕ್ಷತ್ರಿಯ ಬಲಂ ಬ್ರಹ್ಮತೇಜೋ ಬಲಂ ಬಲಂ ||

(ಮಹಾಭಾರತ.)

ಬ್ರಹ್ಮತೇಜದ ಉದಯಕ್ಕೆ ಸತ್ಸಾಧನೆ, ಸಮ್ಯಕ್ ಉಪಾಸನೆ, ಶಿವ ಪ್ರಸಾದದ ಬಲ ಬೇಕೇ-ಬೇಕು ಎನ್ನುವ ಸರ್ವತೋ ಭದ್ರ ವಚನಗಳು:

ಅಪಿ ಚೇತ್ಸು ದುರಾಚಾರೋ ಭಜಂತೇ ಮಾಮನನ್ಯ ಭಾಕ್ |
ಸಾಧುರೇವ ಸಮಂತವ್ಯಃ ಸಮ್ಯಗ್ವ್ಯವಸಿ ತೋಽಪಿ ಸಃ ||೩೦||

(ಗೀ-ಅಧ್ಯಾಯ ೯)

ಪ್ರಸಾದಾದೇವ ಸಾ ಭಕ್ತಿಃ ಪ್ರಸಾದೋ ಭಕ್ತಿ ಸಂಭವಃ |
ಯಥಾ ಚಾಂಕುರತೋ ಬೀಜಂ ಬೀಜತೋ ವಾ ಯಥಾಂಕುರಃ ||೩೦||
ಪ್ರಸಾದ ಸಾಧನಂ ಧರ್ಮಸ್ಸ ಚ ವೇದೇನ ದರ್ಶಿತಃ |
ತದಭ್ಯಾಸವಶಾತ್ಸಾಮ್ಯಂ ಪೂರ್ವಯೋಃ ಪುಣ್ಯ ಪಾಪಯೋಃ ||೩೨||
ಸಾಮ್ಯಾತ್ಪ್ರಸಾದ ಸಂಪರ್ಕೋ ಧರ್ಮಸ್ಯಾತಿಶಯಸ್ತತಃ |
ಧರ್ಮಾತಿಶಯ ಮಾಸಾದ್ಯ ಪಶೋಃ ಪಾಪ ಪರಿಕ್ಷಯಃ ||೩೩||

..........................................................................
ಶಿವಧರ್ಮಾನ್ವಯಸ್ಯಾಸ್ಯ ಶಿವಜ್ಞಾನ ಸಮನ್ವಯಃ ॥೩೭॥
ಜ್ಞಾನಾನ್ವಯ ವಶಾತ್ಪುಂಸಃ ಸಂಸಾರೇ ದೋಷ ದರ್ಶನಂ।
ತತೋ ವಿಷಯ ವೈರಾಗ್ಯಂ ವೈರಾಗ್ಯಾದ್ಭಾವ ಸಾಧನಂ ॥೩೮॥
..........................................................................
ಯೋಗೇನ ತು ಪರಾ ಭಕ್ತಿಃ ಪ್ರಸಾದಾಸ್ತದನಂತರಂ।
ಪ್ರಸಾದಾನ್ಮುಚ್ಯತೇ ಜಂತುರ್ಮುಕ್ತಃ ಶಿವಸಮೋ ಭವೇತ್ ॥೪೦॥
(ವಾ.ಸಂ. ಉತ್ತರ ಭಾಗ-ಅಧ್ಯಾಯ ೩)

ಎಲವೋ ಎಲವೋ ಪಾಪಕರ್ಮವ ಮಾಡಿದವನೇ,
ಎಲವೋ ಎಲವೋ ಬ್ರಹ್ಮ ಹತ್ಯವ ಮಾಡಿದವನೇ,
ಒಮ್ಮೆ ಶರಣೆನ್ನೆಲವೋ!
ಒಮ್ಮೆ ಶರಣೆಂದೊಡೆ ಪಾಪ ಕರ್ಮಂಗಳು ಓಡುವವು;
ಸರ್ವ ಪ್ರಾಯಶ್ಚಿತ್ತಕ್ಕೆ ಹೊನ್ನ ಪರ್ವತಂಗಳೈದವು—
ಓರ್ವಂಗೆ ಶರಣೆನ್ನ, ನಮ್ಮ ಕೂಡಲ ಸಂಗನು ದೇವಂಗೆ!

(ಬಸವಣ್ಣ-)

—ಹೀಗೆ ದುರ್ವಿಧಿಯ ಬಿಡುಗಡೆಗಾಗಿ, ದುಷ್ಟಟದ ನಿರ್ಮೂಲನಕ್ಕಾಗಿ, ದುರಾಚಾರದ ಪರಿಶಮನಕ್ಕಾಗಿ ಶಿವಪ್ರಸಾದವನ್ನು ದೊರಕಿಸಿಕೊಳ್ಳುವಂತೆ ಕಿಂಚಿಜ್ಞ ಜೀವಿಗೆ ಸಲಹೆ ನೀಡುತ್ತಿದ್ದಾರೆ—ಧರ್ಮೋದ್ಧಾರಕರು, ಸತ್ಯ ಶರಣರು. ಸ್ತ್ರೀ ಪುರುಷರೆನ್ನದೆ, ಬಡವ ಭಾಗ್ಯವಂತರೆನ್ನದೆ, ನಮ್ಮವರು-ನಿಮ್ಮವರು ಎನ್ನದೆ ಎಲ್ಲ ಪತಿತರನ್ನೂ ಪಾಮರರನ್ನೂ ಪಶುಜೀವಿಗಳನ್ನೂ ಪಾಪಭರಿತರನ್ನೂ ಉದ್ಧರಿಸಲೆಳಸುತ್ತಾರೆ—ಬ್ರಹ್ಮಸ್ವರೂಪಜ್ಞರು.

ಆತ್ಮಶ್ರೀಯ ಅಭಿವೃದ್ಧಿಯನ್ನು ಯಥೇಚ್ಛವಾಗಿ ಅಪೇಕ್ಷಿಸುತ್ತಿರಬೇಕು; ಜೊತೆಯಲ್ಲಿಯೇ ಇನ್ನಿತರ ಸಮಸ್ತ ಲೋಕಾಸಕ್ತಿಯನ್ನೂ ಧನಕನಕಾದಿ ವೈಭವವನ್ನೂ ಪಥ್ಯರೂಪವಾಗಿ ಬಳಸುತ್ತಿರಬೇಕು; ಸಮಸ್ತ ಪ್ರಾಣಿವರ್ಗದ 'ಯೋಗ-ಕ್ಷೇಮ'ವನ್ನೂ ಹಾರೈಸುತ್ತಿರಬೇಕು. ಏಕೆಂದರೆ—ಆತ್ಮಸಂಪತ್ತು ಜೀವನಾಡಿಯಿದ್ದಂತೆ; ಉಳಿದ ಲೌಕಿಕ ಭೋಗಭಾಗ್ಯವು

ಜೀವವನ್ನಾಶ್ರಯಿಸಿ ಬೆಳೆವ ದೇಹದಂತೆ. 'ಎನಗೆ ಭೋಗ ಭಾಗ್ಯ ಬೇಡ' ಎನ್ನುವ ತೀವ್ರ ವಿರಕ್ತಿಯು ಮಾತು—ಹೆಚ್ಚಿನದು; ಅವನಿಗೆ ಲೋಕದ ನಾನಾರೀತಿಯ ಪ್ರಗತಿಗಿಂತಲೂ ಅಪರೋಕ್ಷ ತತ್ತ್ವಜ್ಞಾನದ ವೈಶಿಷ್ಟ್ಯ ಹೆಚ್ಚಿನದಾಗಿ ಕಾಣುತ್ತದೆ. ಅದೇನೋ ಸರಿಯೇ. ಆದರೆ, ಪ್ರಾಪಂಚಿಕನು ಆಧ್ಯಾತ್ಮಿಕ ಜೀವಿಯಾಗಿ ಇದ್ದುಕೊಂಡು ಪರಮೇಶ್ವರನ ಅನುಗ್ರಹವನ್ನು ಸಂಪಾದಿಸಿಕೊಂಡು ಧನ್ಯನಾಗುವುದೂ, ಲೋಕಸೇವಾ ನಿರತನಾಗಿ-ರಾಜತಂತ್ರವಿಶಾರದನಾಗಿ-ಕವಿಯಾಗಿ-ಕಲೆಗಾರನಾಗಿ ಪ್ರಸಿದ್ಧಿಗೆ ಬರುವುದೂ ಅಷ್ಟೇ ಹೆಚ್ಚಿನದಾಗಿದೆ.

ಪ್ರಯೋಜನ ಮನುದ್ದಿಶ್ಯ ನ ಮಂದೋಪಿ ಪ್ರವರ್ತತೇ ।

'ಪ್ರಯೋಜನಕ್ಕೆ ಬಾರದ ಕೆಲಸಕ್ಕೆ ಎಂಥ ಮಂದಬುದ್ಧಿಯುಳ್ಳವನಾದರೂ ಕೈ ಹಾಕಲೊಲ್ಲನಷ್ಟೆ!'

*  *  *  *

ಭಸಿತಾಭ್ಯಸ್ತ ಧೃತ ತ್ರಿಪುಂಡ್ರ ವರ ರುದ್ರಾಕ್ಷಾಂಗ ಲಿಂಗಾಂಗ ಯೋ ।
ಗಸಮಾಧಿಸ್ಥಿತ ಸಾಧ್ಯಸಿದ್ಧ ಮನುರಾಟ್ ಪಂಚಾಕ್ಷರೀ ಮಂತ್ರ ಜಾ ॥
ಪ ಸಮೇತಾತ್ಮ ಶಿವಸ್ವರೂಪ ವಿಲಸಚ್ಛ್ರೀ ತಾಂತರಂಗಾನು ಭಾ ।
ವ ಸುಖಾಕಾರ ನಪಾರ ಪಾರಮಹಿಮಂ ಭಕ್ತಂ ಶಿವಾವಲ್ಲಭಾ ॥೨೯॥

(ಮಗ್ಗೆ ಮಾಯಿದೇವ ಪ್ರಭು-ಶಿವಾವಲ್ಲಭ ಶತಕ.

ದೇಹ ಸೌಂದರ್ಯಕಾರಕ ಭಸ್ಮರುದ್ರಾಕ್ಷಾಲಂಕಾರ; ಇಂದ್ರಿಯ ಬಲವೇಧಕ—ಮನಶುದ್ಧಿದಾಯಕ ಶಿವಪಂಚಾಕ್ಷರೀ ಜಪವಿನ್ಯಾಸ; ಆತ್ಮಾನಂದ ಬೋಧಕ-ಭವಭಯ ಸಂತಾರಕ ಇಷ್ಟಲಿಂಗ ಪೂಜಾನಿಷ್ಠೆ— ಈ ನಾಲ್ಕು ಭವ್ಯಉಪಕರಣಗಳನ್ನು ಉಪಯೋಗಿಸಿಕೊಂಡು ಮಹಾದೇವನ ಕೃಪಾಪ್ರಸನ್ನತೆ ಮಾಡಿಕೊಂಡ ಸಾಧಕನು ಆಗಲೇ ಹೇಳಿದಂತೆ;

'ಸರ್ವಂ ಶಿವಮಯಂ ವಿಶ್ವಂ'

(ಸಿ.ಶಿ. ೧೧/೭೩.

ಸಿದ್ಧಾಂತದ ಪ್ರಕಾರ ವರ್ತಿಸುವವನಾಗಿ;

'ಶಿವತನ್'

(ತೈತ್ತಿ. ಸಂ. IV ೫. ೧. ವಾಜಸ. ಅ ೧೬.

ಶುಭ ಸ್ವಭಾವ ಸಮನ್ವಿತನಾಗುತ್ತಾನೆ. ಆ ಆತ್ಯಂತಿಕ ಮೋಕ್ಷ ಪಕ್ಷಕ್ಕೆ ಮಿಾರಿದ ಚಂದ್ರಬಲ-ತಾರಾಬಲವಿನ್ನಿಲ್ಲ; ಮೇಲ್ಮಟ್ಟದ ಸೌಖ್ಯ ವಿನ್ನಿಲ್ಲ.

"ಲಿಂಗ, ವಿಭೂತಿ, ರುದ್ರಾಕ್ಷಿ—ಇವ ಮೂರಾಟಕ್ಕೆ
ಹೇರಿಕೊಂಡು ತಿರುಗುವ ಎತ್ತುಕತ್ತೆಗೆ ಮುಕ್ತಿಯುಂಟೆ?"

(ಚೆನ್ನಬಸವಣ್ಣನ ವಚನ ೨೧೯

ಎಂದು ಪ್ರಶ್ನಿಸುವುದರಲ್ಲಿ ಔಚಿತ್ಯವಿದೆ. ಹೇಗೆಂದರೆ—ವೀರಶೈವಧರ್ಮ ಸಿಂಧು ಗ್ರಂಥದ ಪ್ರಕಾರ, ಧರ್ಮಸಾಧಕನಲ್ಲಿ ಸಮತೆ, ಸತ್ಯ, ಅಂತರಾತ್ಮ ವಿವೇಚನೆ, ನುಡಿದಂತೆ ನಡೆ, ನಿತ್ಯಾನಿತ್ಯ ವಿವೇಕ, ನಿಮ್ನಾತಿನಿಮ್ನರನ್ನು ಮೇಲೆತ್ತುವ ಚಿತ್ತವೃತ್ತಿ, ಗುರು-ಲಿಂಗ-ಜಂಗಮಕ್ಕೆ ತನುಮನಧನ ಸಮ ರ್ಪಣ ಇಂಥ ಸುಗುಣಗಳು ಇದ್ದ ವಿನಾ ಶಿವಾನುಗ್ರಹವಿಲ್ಲ.

'ವೀರಶೈವಾಚಾರ ಪ್ರದೀಪಿಕಾ' ಗ್ರಂಥದಲ್ಲಿ ಹೇಳಿದ ಪ್ರಕಾರ- (೧) ಉತ್ಪಾದನ ಶೀಲ, (೨) ಆಚಾರ ಶೀಲ, (೩) ಉದ್ಯೋಗ ಶೀಲ, (೪) ಉತ್ಕಲಿತ ಶೀಲ, (೫) ಸಂಬಂಧ ಶೀಲ, (೬) ಪ್ರಸನ್ನ ಶೀಲ, (೭) ಉತ್ತಮ ಶೀಲ, (೮) ಜ್ಞಾನ ಶೀಲ—ಸಂಪನ್ನನಾಗದ ಹೊರತು ಪರಮೇ ಶ್ವರನ ವಿರಾಟ್‌ಸ್ವರೂಪ ಪ್ರಜ್ಞೆ ಉಂಟಾಗುವುದೇ ಇಲ್ಲ. ಎಂದ ಬಳಿಕ ಶಿವಧರ್ಮೋಪಾಸನಾ ಕರ್ತವ್ಯವೆಲ್ಲವೂ ಒಂದು ಅಚ್ಚುಗಟ್ಟಾದ ಯೋಜ ನೆಯ ಪ್ರಕಾರ ರಚನಾತ್ಮಕವಾಗಿಯೇ ನಡೆಯಬೇಕು. ಎಂದರೇನೇ ಸಾಧ ಕನ ಮನಸ್ಸಿಗೆ ಹಿತ, ನೆರೆಹೊರೆಯ ಜನಾಂಗಕ್ಕೆ ಮೆಚ್ಚು. ಇತರರೂ ಇದನ್ನೇ ಅನುಸರಿಸಕಲಿಯುತ್ತಾರೆ. ಜನಾಂಗಕ್ಕೆ-ವಿಶ್ವಕ್ಕೆ ತಾನು ಮಾಡ ಬೇಕಾಗಿರುವ ಸೇವೆ ಇನ್ನೂ ಬಹಳವಿದೆ ಎನ್ನುವ ಭಾವನೆ ಉತ್ಕಟವಾಗಿರ ಬೇಕು. ಪೂರ್ವಿಕರ ಸಚ್ಚರಿತ್ರೆಯ ನೆನಪನ್ನು ಆಗಿಂದಾಗ್ಗೆ ಮನಕ್ಕೆ ತಂದು ಕೊಳ್ಳುತ್ತಿರಬೇಕು. ತನ್ನ ಪ್ರತಿ ಕರ್ತವ್ಯವೂ ಪ್ರಾಮಾಣಿಕವಾಗಿರಬೇಕು. ಶಂಕಾತೀತವಾಗಿರಬೇಕು. ಇಂತಹ ಪರಾವಿದ್ಯೆಯ ಅಭ್ಯಾಸದಿಂದಲೇ ಜಗನ್ನಾಥನ ಅನುಗ್ರಹಸಿದ್ಧಿ; ಅದೇ ಮುಕ್ತಿ.

ಸೈಷಾ ವಿದ್ಯಾ ಪರಾ ಜ್ಞೇಯಾ ಸತ್ತಾನಂದಪ್ರಕಾಶಿನೀ ।
ಮುಕ್ತಿರಿತ್ಯುಚ್ಯತೇ ಸದ್ಭಿರ್ಜಗನ್ಮೋಹ ನಿವರ್ತಿನೀ ॥೪೩॥

ಭಕ್ತಾದಿನಾಮಾ ಪರಧರ್ಮಯೋಗಾತ್
ಪ್ರಾಪ್ತೈಕಭಾವಃ ಪರಮಾದ್ಭುತೇನ ॥
ಶಿವೇನ ಚಿದ್ವ್ಯೋಮಮಯೇನ ಸಾಕ್ಷಾ
ನ್ಮೋಕ್ಷಶ್ರಿಯೋ ಭಾಜನತಾ ಮುಪೈತಿ ॥೪೪॥

(ಸಿ. ಶಿ. ಪರಿ—೧೪.

ಪೋಷಕನು ಚೆಲ್ಲಿದ ಕಾಳು-ಕಡ್ಡಿಯನ್ನು ತಿಂದು, ನೀರು ಕುಡಿದು ನಲವಾಂತು, ಎತ್ತರದ ಮುಗಿಲಲ್ಲಿ ಹಾರಾಡುವ ಬೆಳಂಬೆಳಗಿನ ಪಾರಿವಾಳ ದಂತೆ—ಆ ಶಬ್ದ ಮುಗ್ಧ ಜೀವಿಯ ಕಲ್ಯಾಣ ಜೀವನ! ಬಟ್ಟಬಯಲ ತಾಯ ತೊಡೆಯಮೇಲೆ ಮೆತ್ತನೆಯ ಹಾಸಿಗೆಯಲ್ಲಿ ಮಲಗಿರುವ ತುರೀಯಾ ತೀತ ಸಮಾಧಿಸಿದ್ಧ ಮಗುವಿಗೆ ಆ ತಾಯಿಯ ಸಾತ್ವಿಕತಮ ನಲ್ಮೆಯ. ಸಖ್ಯವೇ ಸಖ್ಯ! ಉಳಿದ ಹಲವಾರು ಸೌಕರ್ಯಗಳು ಕಾಲುಕಸ.

ಹೊರಗಣ್ಣಿಗೆ ಹಣಕಾಸಿನ ಮುಗ್ಗಟ್ಟು, ಊಟ-ಉಪಚಾರದ ಕೊರತೆ ಕಾಣುತ್ತಿದ್ದರೂ, ಒಳಗಣ ವೈಚಾರಿಕ ಶ್ರೀ ಉನ್ನತಿಗೆ ಎಳ್ಳಷ್ಟೂ ಕೊರತೆ ಯಿಲ್ಲ; ಶಿವಪ್ರಸಾದ ಸಂಪತ್ತಿಗಿಂತ ಮಿಗಿಲಾದ ಸಂಪತ್ತು-ಸೌಭಾಗ್ಯ-ಕೀರ್ತಿ ಕಾಮನೆ, ಆ ಕೊಡಗೂಸಿಗೆ ಬೇಕಾಗಿಲ್ಲವೆಂದರೂ ಚೆನ್ನು.

* * * *

ಇದ್ದ ವಿಚಾರ.

ದೀಪೋ ಭಕ್ಷಯತೇ ಧ್ವಾಂತಂ ಕಜ್ಜಳಂ ಚ ಪ್ರಸೂಯತೇ !
ಯಥಾನ್ನಂ ಭುಂಕ್ಷ್ಯತೇ ಲೋಕೇ ತಥಾ ಬುದ್ಧಿಃ ಪ್ರಜಾಯತೇ ॥

"ದೀಪವು ಕಪ್ಪಾದ ಕತ್ತಲೆಯನ್ನು ನುಂಗುವುದರಿಂದ ಕಪ್ಪುಬಣ್ಣದ ಕರಕನ್ನು ಉಗುಳುತ್ತದೆ ಅದರಂತೆಯೆ, ನಾವು ಯಾವರೀತಿಯ ಅನ್ನ ವನ್ನು ಸೇವಿಸುತ್ತೇವೆಯೋ ಅದಕ್ಕೆ ಅನುಸಾರವಾದ ಬುದ್ಧಿ ಬರುತ್ತದೆ." ದುರ್ಜನರ ಸಹವಾಸ, ಭ್ರಷ್ಟಾಚಾರದ ಐಶ್ವರ್ಯ—ಇವರ ದೆಸೆಯಿಂದ ಮಾನವನ ಬುದ್ಧಿಯು ಕೆಟ್ಟು, ಅಲ್ಲಿ ದಾನವೀಯತೆ ತೊರಚಿಮ್ಮುತ್ತದೆ. ದುಷ್ಟ ದುರ್ಯೋಧನನ ಅನ್ನದಿಂದ ಜೀವಿಸಿದ ಪ್ರಯುಕ್ತ ಭೀಷ್ಮದ್ರೋಣ ರಂಥ ಮಹಾಪುರುಷರು ಅಧರ್ಮಕ್ಕಿಳಿದರು; ಸರ್ವನಾಶವಾಯಿತು.

ಅಂಥ ಪರಿಸ್ಥಿತಿ ಲೋಕಕ್ಕೆ ಅನೇಕ ಆವರ್ತಿ ಪ್ರಾಪ್ತವಾಗಿದೆ. ಚರಾಚರ ಜೀವಜಾಲ ಸಾವು-ನೋವು ಉಂಡಿದೆ. ಸಜ್ಜನರು ಮರಮರ ಮರುಗಿದ್ದಾರೆ. ಅದು ನಿಸರ್ಗದ ನಿಯಮುವೆನ್ನೋಣವೆ? ಸರಿಯಲ್ಲ.

ಆದಿಯಲ್ಲಿ, ಬುದ್ಧಿಜೀವಿಯು ತನ್ನ ಸುತ್ತಣ ದುರ್ಜೀವಿ ದುರ್ಜೀವನ-ದುರವಸ್ಥಾ-ದುರ್ಯೋಗಕ್ಕಾಗಿ ಚಿಂತಿಸಿದನು; ಕಣ್ಣೀರಿಟ್ಟನು, ತನ್ನ ಮತ್ತು ತನ್ನ ಅನುವಿನ ಜಗದ ಅನಂತಾನಂತ ಪ್ರಕಾರದ ಆಗು-ಹೋಗು, ಯೋಗ-ಕ್ಷೇಮ ಚಿಹ್ನೆಯನ್ನು ನಿಜದ ಒರೆಗಲ್ಲ ಮೇಲೆ ಒರೆದೊರೆದು ಪರೀಕ್ಷಿಸಿದನು. ಅತಿ ಸುಂದರತಮ ನಿರಾತಂಕ ಜೀವನ-ಅತಿಮಾನುಷ ಶಕ್ತಿ ಬೇಕೆಂದರೆ ವಿಶ್ವವು ಅಂತರ್ವಿಜ್ಞಾನವನ್ನೇ ಆಶ್ರಯಿಸಬೇಕೆಂಬ ತೀರ್ಮಾನಕ್ಕೆ ಬಂದನು.

" ನಾನ್ಯಃ ಪಂಥಾ ಅಯನಾಯ ವಿದ್ಯತೇ "

" ಉದ್ದಿಸ್ಯ ಸಾಧನೆಗಾಗಿ ಶಿವಧರ್ಮ ಪಂಚಕದ ನೆರವು ಪಡೆದನು. ಆ ಸುಯೋಗದಿಂದ ನಿಃಸಂಜ್ಞ ವಿಶ್ವಪ್ರಜ್ಞೆ (Collective unconscious) ಸನ್ನಿಹಿತವಾಯಿತು; ಸಚೇತನ-ಸತರ್ಕ-ಸತ್‌ಪ್ರೇರಣೆ ದೊರಕಿತು. ಜೀವಿ ಜೀವಿಯ ಸಹಬಂಧುತ್ವ-ಸೋದರತ್ವ-ಸಹಜೀವನ ವ್ಯವಸ್ಥೆಯೂ ಆಯಿತು "—ಎಂದು ಹೇಳಲು, ಆ ಜಾಡಿನ ಸೂಕ್ಷ್ಮತೆಯನ್ನು ಕುರಿತ ಮಾತುಕತೆ ಈತನಕ ಆರು ಪ್ರಕರಣಗಳಲ್ಲಿ ಬೆಳೆದುಬಂದಂತಾಯಿತು.

'ದೇವ.ಜೀವ-ಜಗತ್' ತತ್ತ್ವದರ್ಶನದ ಅಭ್ಯಾಸದಿಂದ ನಾಳಿನ ಮಾನವ ಕುಲದ ಶುಭೋನ್ನತಿಯೂ, ವಿಶ್ವ ಜಾಗೃತಿಯೂ, ವಿಶ್ವಶಾಂತಿ ಸ್ಥಾಪನೆಯೂ ನಿಜವಾಗಿ ಆಗುವುದೆಂಬ ಶಿವಸಿದ್ಧಾಂತದ ಸೂಚನೆಯನ್ನು ಪ್ರಕಟಿಸಿದ್ದೂ ಆಯಿತು. ಆಗಲಿ.

ಮಾನವನು ಪಶುಗುಣದಿಂದ ದೇವಗುಣಕ್ಕೆ ಏರಿದ ಈ ಕ್ರಮವನ್ನು ಕುರಿತು ಹೆಚ್ಚಿಗೆ ವಿವರಣೆ—' ಮಹಾವರಣ ಸಂಹಿತೆ ' ಯಲ್ಲಿ ಇರುತ್ತದೆ. ಸದ್ಯಕ್ಕೆ ಗ್ರಂಥವಿಸ್ತಾರ ಭೀತಿಯಿಂದ ಈ ಪ್ರಕರಣವನ್ನು ಇಷ್ಟಕ್ಕೆ ನಿಲ್ಲಿಸೋಣ.

೭

ಹಿಂದಣ ಪ್ರಕರಣವನ್ನು ಅಭ್ಯಸಿಸಿದ ಮನಸ್ಸು ಕೊಂಚ ಗೊಂದಲಕ್ಕೆ ಸಿಕ್ಕಿಕೊಂಡಿದೆ. 'ಒಂದ ಹೇಳ ಹೋಗಿ, ಒಂಭತ್ತ ಹೇಳಬಾರದಾಗಿತ್ತು" ಎಂದುಕೊಂಡಿದೆ. ಒಣಗಿದ ನಾಲಿಗೆಗೆ ರಸವು ಕಸವಾಗಿ ಕಾಣುವಂತೆ ಅಲ್ಲೆಲ್ಲ ಭಾವ ಕಸವಿಸಿಯಾಗಿದ್ದಂತೆ–ಕಲಕಿಹೋಗಿದ್ದಂತೆ ಕಳೆದುಕೊಂಡಿದೆ. ಹೊರನೋಟಕ್ಕೆ ಆ ಊಹೆ ಸರಿಯೇ ಸರಿ! ಆದರೆ, ಒಳನೋಟ–ಮನಸ್ಸಿನ ವಿಕಸತೆಯತ್ತ ಬೆದಕುರೆಪ್ಪೆ ಹಾಕುತ್ತದೆ. ಭಗವಂತನಿಗೆ ನೈವೇದ್ಯ ಮಾಡಿದ ಹಾಲು-ಹಣ್ಣು-ಗೋಡಂಬಿ-ಉತ್ತುತ್ತೆ-ಪತ್ರ-ಪುಷ್ಪವಷ್ಟೇ ಪ್ರಸಾದವಲ್ಲ. ಜಡ ಜೀವಿ ಚೇತನವಿಶಿಷ್ಟವಾಗುವುದೂ ಆದರ ಒಂದಂಗ-ಎನ್ನುತ್ತದೆ. ನಡೆಯುವ ನಾಣ್ಯಕ್ಕೆ ಎರಡು ಮುಖಗಳೂ ಸಮಕಲಿಲ್ಲದಂತಿರಬೇಕು—ಅಲ್ಲವೇ? ಎಂದು ಸಮಾಧಾನ ಮಾಡಿಕೊಳ್ಳುತ್ತದೆ—ಆ ನೋಟ.

ಕೇವಲ ಶೀತಲ (ಜಡ) ವಸ್ತುವಿನ ಮೇಲೆ ಶಿವಪ್ರಸಾದದ ಗೂಢ ಕ್ರಿಯೆ ಅಭಿವ್ಯಕ್ತವಾಗುವದಿಲ್ಲ. ಲೌಕಿಕ ಮನೋಧರ್ಮವೇ ವಿಶೇಷವಾಗಿ ಪ್ರಸರಿಸಿದಾಗಲೂ—ಪಾರಲೌಕಿಕ ಪ್ರಸಾದ ಚೇತನದ ಅನುಭವ, ಜಿಜ್ಞಾಸು ಬಳಗಕ್ಕೆ ಬೇಗನೆ ಆಗುವದಿಲ್ಲ. ಏಕೆಂದರೆ–ಸಮ್ಯಕ್ ಶಿವಪ್ರಸಾದದ ಚಿಹ್ನೆಯಾದರೂ ಸಾಧಕ ಹೃದಯದ ಅಂತರಾಳದಿಂದ ಉಕ್ಕಿ ಹರಿಯುವ ಒಂದು ಪರಮಾನುಭವಲಹರಿ. ಆದರ ಆಧಾರದಲ್ಲಿ ಅರಳಿದ ಆತ್ಮದ ಚೌಕಟ್ಟಿಗೆ ಕೃತಕ ಪ್ರಸಾದ ಶಕ್ತಿಯ ಹಂಗು ಅಷ್ಟಾಗಿ ಸೇರದು. ಬೇರು ಬಲ್ಲವನಿಗೆ ಎಲೆ ತೋರಿದಹಾಗೆ. ತನ್ನ ಕಿಂಚಿಜ್ಞತೆಯನ್ನು ತಾನು ನೆನೆಸಿಕೊಂಡಾಗ ಅನುಯೋಗಿ ತಲೆಕೆರೆಯಬೇಕಾಗುತ್ತದೆ, ಅದು ಆತ್ಮಗೌರವದ ಕೇಡು!

'ದೇವ ಮತ್ತು ಪ್ರಕೃತಿ' ತತ್ತ್ವಕೂಟ, ವಂಚನೆಯ ಸಂಗತಿಯಲ್ಲವೆಂಬುದಂತೂ ಪ್ರತ್ಯಕ್ಷವಾದುದೇ; ಸಾಧಕನಿಗೆ–ಅದೇ ಭಗವಂತನ ವಿರಾಟ್‌ಸ್ವರೂಪ ಸಂದರ್ಶನ ಸಮಯ. ಆಗ ಆನಂದವೇ ಆನಂದ; ವಿಶ್ವದಲ್ಲಿ ಯಃಕಶ್ಚಿತ್ ಪದಾರ್ಥ ಇಲ್ಲವೇಇಲ್ಲವೆಂಬುದು ಅಂದು ನಿರ್ಣಯವಾಗಿ ಬಿಡುತ್ತದೆ. ಅಕುಟಿಲ ಶಿವೋಪಾಸನಾ ಪ್ರಭಾವದಿಂದ ಆಗತಕ್ಕದ್ದು ಆ ತೀರ್ಪು-

ಶಿವೋಪಾಸನೆ, ಬಹಿರಂಗದ ಭಕ್ತಿಯ ವೈಭವದ ಪೂಜೆಗೆ ಒಲಿದ ಪರಮಶಿವನು, ಅಂತರಂಗದ ಪ್ರಾಣಲಿಂಗವಾಗಿ ನಿಂತು ಅಲ್ಲಿಯೂ ಅದೇ ವೈಭವದ ಪೂಜೆಗೊಳ್ಳುವನು. ಆನಂದತುಂದಿಲನಾಗುವನು. ಅಲ್ಲಿ ಅವನ ಪೂಜೆಗೆ—ಕ್ಷಮೆಯೇ ಜಲ, ವಿವೇಕವೇ ವಸ್ತ್ರ, ಸತ್ಯವೇ ಆಭರಣ, ವೈರಾಗ್ಯವೇ ಪುಷ್ಪಮಾಲಿಕೆ, ಸಮಾಧಿ ಸಂಪತ್ತಿಯೇ ಕನ್ನಡನಾಡಿನ ಶ್ರೀಗಂಥ, ಅಹಂಕಾರ ಪರಿತ್ಯಾಗವೇ ಅಕ್ಷತೆ, ಶ್ರದ್ಧೆಯೇ ಧೂಪ, ಜಗದ್ವ್ಯಾಪಿತ ಮಹಾಜ್ಞಾನವೇ ದೀಪ, ಪ್ರಾಪಂಚಿಕ ಭ್ರಾಂತಿ ನಿರ್ಮೂಲನವೇ ನೈವೇದ್ಯ, ಶಬ್ದಮುಗ್ಧ ಆಕರ್ಷ ದೃಷ್ಟಿಯೇ ಘಂಟಾನಾದ, 'ನಾನು-ನನ್ನದು' ಮಮಕಾರ-ಭೋಗ-ಭಾಗ್ಯ-ಐಂದ್ರಿಕ ಗುಣಸಂಬಂಧ ವಿಹೀನತೆಯೇ ತಾಂಬೂಲ, ಜಗತ್ ಜೀವನ-ಕಾಮವಾಸನಾ ವಿಹೀನತೆಯೇ ಪ್ರದಕ್ಷಿಣೆ, ನಿಸ್ವಾರ್ಥ ಬುದ್ಧಿಯುತ ಆಧ್ಯಾತ್ಮಿಕ ಕ್ರಿಯಾಸಕ್ತಿಯೇ ನಮಸ್ಕಾರ ಕ್ರಿಯೆ. ಈ ಪ್ರಕಾರದಿಂದ ಸೇವೆ ಸಲ್ಲಿಸುತ್ತಾ ಇದ್ದು, ಆಗಲೇ-ಅದೇ ಹುರುಪಿನಿಂದ ಜ್ಞಾನಲಿಂಗದ ಅರ್ಥಾತ್ ವಿಶ್ವೇಶ್ವರ ತೇಜದ ಒಲವನ್ನು ಪಡೆದುಕೊಂಡನೆಂದರೆ- ಅದುವೇ ಇಷ್ಟಾರ್ಥಸಿದ್ಧಿ. ಅದುವೇ ಶಿವಪ್ರಸಾದ ಪ್ರಾಪ್ತಿಯ ಕುರುಹು!

ಬದ್ಧೇಂದ್ರಿಯ ನವದ್ವಾರೇ ಬೋಧದೀಪೇ ಹೃದಾಲಯೇ ।  
ಪದ್ಮಪೀಠೇ ಸಮಾಸೀನ ಚಿಲ್ಲಿಂಗಂ ಶಿವವಿಗ್ರಹಂ ॥  
ಭಾವಯಿತ್ವಾ ಸದಾಕಾಲಂ ಪೂಜೆಯೇದ್ಭಾವ ವಸ್ತುಭಿಃ ॥೧೫॥

* * * *

(ಸಿ. ಶಿ. ಪರಿ ೧೨

ಆದರೆ, ಪೂರ್ವಪ್ರಸಿದ್ಧ ಪ್ರಸಾದಿಸ್ಥಲದ ಸಿದ್ಧಿಯೇ ಆಗದಿದ್ದ ಸಾಧಕನು ಪ್ರಾಣಲಿಂಗಸ್ಥಲಧರ್ಮವನ್ನು ಹೇಗೆ ಸಂಪಾದಿಸಬಲ್ಲನು? ಗುರು-ಲಿಂಗ-ಜಂಗಮ ಮಾಹಾತ್ಮ್ಯ ವಿಶೇಷಾನುಭವವನ್ನು ಪಡೆಯದ ವಿನಾ ಇನ್ನೆಂತು ಪರಮೇಶ್ವರನ ಕೃಪಾ ಪ್ರಾಪ್ತಿ? ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನ-ಇಷ್ಟಲಿಂಗಾರ್ಚನಾ ಪ್ರೇಮ-ಪಂಚಾಕ್ಷರಾಭ್ಯಾಸ-ವಿಶ್ವಸ್ವರೂಪ ಚಿಂತನ, ಶಿವಸೃಷ್ಟಿಯ 'ಇದಮಿತ್ಥಂ' ವಿಜ್ಞಾನ ನಿರ್ಣಾಯಕ ಘಟ್ಟದ ಪರಿಶ್ರಮ—ಇವೊಂದೂ ಇಲ್ಲದವನಿಗೆ ಇನ್ನೆಂತು ಸಂಸಾರತಾಪ ನಿವೃತ್ತಿ? ಅಟ್ಟಕ್ಕೆ ಹತ್ತಲಾರದವನು ಬೆಟ್ಟಕ್ಕೆ ಹತ್ತಿಯಾನೇ!

ಗುರುಲಿಂಗಾದಿ ಮಾಹಾತ್ಮ್ಯ ವಿಶೇಷಾನುಭವಸ್ಥಿತಿಃ ।
ಯಸ್ಮಾತ್ ಶಿವಪ್ರಸಾದಾತ್ ಸ್ಯಾತ್ತದಸ್ಯ ಮಹಿಮೋಚ್ಯತೇ ॥೬೫॥

* * * *

ಯಜ್ಞಾಸ್ತಪಾಂಸಿ ಮಂತ್ರಾಣಾಂ ಜಪಶ್ಚಿಂತಾ ಪ್ರಬೋಧನಂ ।
ಪ್ರಸಾದಾರ್ಥಂ ಮಹೇಶಸ್ಯ ಕೀರ್ತಿತಾನಿ ನ ಸಂಶಯಃ ॥೬೮॥

(ಸಿ. ಶಿ, ಪರಿ—೧೧

ಎಂತಲೇ, ಧೀರೋದಾತ್ತ ಮತಿಯು 'ಸುಸ್ತಿನ ಕಾವಲುಗಾರನಾಗಿ ಅಲ್ಲ, ಶಿಸ್ತಿನ ಸಿಪಾಯಿಯಾಗಿ ದೇಹ-ಮನ-ಭಾವ ಉದ್ಬೋಧನ ಮಾಡಿಕೊಂಡು ಕಡೆಗೆ 'ಸರ್ವಾನುಭೂತಿಯೋಗಿ' ಯಾಗಿ ಪರಿವರ್ತಿತನಾದನೆಂದೂ ಸ್ಥಿರಮುಕ್ತಿಸಂಪನ್ನನಾದನೆಂದೂ ಈ ಹಿಂದೆ ಹೇಳಿದೆವು. ಅಂಥ ಸಂದರ್ಭದಲ್ಲಿ ಅವನ ಚರ್ಯೆ-ಕ್ರಿಯೆ-ಜ್ಞಾನ-ಯೋಗಶಕ್ತಿ ಹೇಗೆ ಹೇಗೆ ಬೆಳೆದುಬಂತು? ಪ್ರಪಂಚ ಮತ್ತು ಪರಮಾರ್ಥ ಉಭಯವನ್ನೂ ಹೇಗೆ ಸರಿದೂಗಿ ನೋಡಿದನು? ಎನ್ನುವ ಬಗೆಗೆ ಕೊಟ್ಟ ವಿವರಣೆ—ಒಮ್ಮೊಮ್ಮೆ ಕ್ರಮವಾಗಿಯೂ, ಒಮ್ಮೊಮ್ಮೆ ತಿರುಗು ಮುರುಗಾಗಿಯೂ ಕಂಡುಬಂದಿರಬೇಕು. ಹಾಗೆ ಬೇರೆ ಬೇರೆ ಭಾವಿಸಿ ಉಗುಳು ನುಂಗುವ ಗಡಬಿಡಿಯಲ್ಲಿ ಸಾಧಕ ಮನಸ್ಸಿಗೆ ಅಧಿಕಾರಿ ಧರ್ಮದಂತೆ ಏನಾದರೂ ನೋವಾಗಿದ್ದರೆ—ಅದೂ ಒಂದು ಬಗೆಯ ಸಾಧನೆಯ ಫಲವೇ ಎನ್ನೋಣ. ಚಿಕ್ಕಂದಿನಲ್ಲಿ ಎಡವಿಬಿದ್ದು—ಎದ್ದು ನಡೆಗಲಿತ ಮಗು ಮುಂದೆ ಚೆನ್ನಾಗಿಯೇ ಓಡಾಡುತ್ತದೆಯಷ್ಟೆ!

ಇನ್ನು 'ಶಿವೋಪಾಸನಾವಿವೇಕ' ವೆಂಬ ಈ ಏಳನೆಯ ಪ್ರಕರಣವು ಈ ಪ್ರಬಂಧದ ಮಹತ್ವದ ಭಾಗ. ಇದು ಐದು ಮತ್ತು ಆರನೆಯ ಪ್ರಕರಣಗಳ ಪೂರಕ ಪ್ರಕರಣವೆಂದರೂ ಒಪ್ಪು. ಹೀಗಾಗಿ ವಿವರಣೆ ಇಲ್ಲೂ ಸ್ವಲ್ಪ ಹೆಚ್ಚು ಎನ್ನದ ಉಪಾಯವಿಲ್ಲ.

ಪ್ರಾರಂಭ ಹೀಗೆ: ಶಿವದೀಕ್ಷೆ ಪಡೆಯದಲೆ, ಶಿವಲಿಂಗಧಾರಣೆ ಯಿಲ್ಲದಲೆ, ಅಂದ ಚಂದದ ಪತ್ರೆ ಪುಷ್ಪಗಳಿಂದ ಅಲಂಕರಿಸಿ ಪೂಜಿಸಿ ಕರದಿಷ್ಟಲಿಂಗಮೂರ್ತಿಯನ್ನು ಕಣ್ತುಂಬ ನೋಡಿ ನಲಿದು ಮೈಮರೆದು ತಲ್ಲೀನನಾಗದೆ, ಭಾವ ಉಬ್ಬಿ ಕಣ್ಣೀರ ಕಡೆಗೋಡಿ ಹರಿಯುದೆ—ಬೇರೆ ಯಾವ

ಉಪಾಯಗಳಿಂದಲೂ ಶಿವಪ್ರಸಾದವು ಲಭಿಸುವುದಿಲ್ಲ; ಶಿವಧರ್ಮವು ಪೂರ್ಣ ವಾಗುವದಿಲ್ಲ.—ಈ ಅಂಶವನ್ನು ತಿಳಿದಬಳಿಕ,

ನ ನಶ್ಯತಿ ತಮೋ ನಾಮ ಕೃತಯಾ ದೀಪವಾರ್ತಯಾ

'ದೀಪದ ಸುದ್ದಿ ತೆಗೆಯುವುದರಿಂದ ಕತ್ತಲೆಯೇನೂ ನಿವಾರಣೆ ಯಾಗುವುದಿಲ್ಲ' ಎಂಬ ಮಾತಿನ ಅರ್ಥ ತಿಳಿದಂತಾಯಿತು. ಕತ್ತಲೆಯಲ್ಲಿ ಬೆಳಕು ನೀಡಲು ದೀಪ, ಹೊಳೆ ದಾಟುವುದಕ್ಕೆ ಅನುಕೂಲವಾದ ತೆಪ್ಪ (ಲಂಗರು Anchor) ಉಪಯೋಗಕ್ಕೆ ಬಂದಂತೆ; ಅಲ್ಲದ ಸಲ್ಲದ ಜಗದ್ವ್ಯಸನಗಳಿಂದ ದೂರನಾಗಿ—ಜಾಗೃತನಾಗಿ ಶಿವಯೋಗಾನುಸಂಧಾನದ ಅಖಂಡತೇಜದೊಡನೆ ಬೆರೆದು ಆನಂದದಿಂದ ಬೆಳಗಬೇಕಾದರೆ— ಉಪಮಾತೀತ ಸ್ಥಿರವಿಶ್ರಾಂತಿ ರಂಜಿತನಾಗಬೇಕಾಗಿದ್ದರೆ—ಸಾಧಕನು ಅಥವಾ ಜಡಜೀವಿಯು ಶಿವಧರ್ಮಪದ್ಧತಿಯ ಪ್ರಕಾರ ಶಿವಲಿಂಗೋಪಾಸನಾ ಕರ್ತವ್ಯನಿಷ್ಠನೇ ಆಗಬೇಕು—ಎಂದು ಹೇಳಿದಂತಾಯಿತು. ಈಗ ಶಿವಲಿಂಗೋಪಾಸನೆಯ ಆ ಮಾರ್ಗ ಮತ್ತು ಆದರ ಅನುಸರಣೆಯ ಮಾತು ಕತೆ;

ನಾಯಮಾತ್ಮಾ ಬಲೇನ ಹೀನಃ ।

ಶ್ರುತಿಯ ಆಧಾರದಮೇಲೆ ಆ ಸಮಸ್ಯಾವಿಮರ್ಶೆ:

ಹತ್ತಾರು ತೂತು ಬಿದ್ದು ಕೆಲಸಕ್ಕೆ ಬಾರದ, ಕುಟ್ಟೆಹುಳ ತಿಂದು ಸತ್ವಹೀನವಾದ ಕೋಲುಗಳಿಂದ ತೆಪ್ಪಕಟ್ಟಿ ಮಾಡುವುದೇನು? ಯಾರಿಗೆ ಗುರು-ದೈವ ಭಕ್ತಿಯಿಲ್ಲವೋ ಯಾರಿಗೆ ದೈವಿಕ ಜ್ಞಾನ-ಕ್ರಿಯೆಯ ಜಾಡು ತಿಳಿಯದೊ ಅಂಥವರು ಪರಮಾತ್ಮನನ್ನು ಪಡೆಯಲು ಹೇಗೆ ಅರ್ಹರು, ಮೈ-ಮನ-ಮಾತುಗಳಮೇಲೆ ನಿಯಂತ್ರಣವಿಲ್ಲದೆ ಹೋದಾಗ, ಆತ್ಮಬಲ ಪ್ರವರ್ಧನವಾದರೂ ಹೇಗೆ ಆದೀತು? ಆಗುವಂತಿಲ್ಲ. ಅತ ಏವ, ವಿಶ್ವತೋಮುಖ-ವಿಶ್ವತೋಬಾಹು—ವಿಶ್ವತೋಪಾದ ಭಗವಚ್ಚೈತನ್ಯ ಪ್ರಸಾದ ವನ್ನು ಹೊಂದುವ ಕೆಚ್ಚು-ನೆಚ್ಚು, ಸಚ್ಚಾರಿತ್ರ್ಯ-ನೀತಿ ನಿಯಮ--ಸದಾ ಚರಣೆ-ಪಿಂಡಸ್ಥಲ ಪರಾಮರ್ಶಕನೊಬ್ಬನಿಗೇ ಮೀಸಲು. ದೇವರಿಲ್ಲದ ಗುಡಿಗೆ ಪಾಳುಬಿದ್ದಂಗಡಿಗೆ ಯಾರೂ ಹೋಗುವುದಿಲ್ಲ. ಶ್ರದ್ಧೆ-ವಿಶ್ವಾಸ ಗಳಿಲ್ಲದ ಮನಸ್ಸಿನಮೇಲೂ ಶ್ರೇಯಸ್ಸಿನ ಧೂಳು ಸೋಂಕುವುದಿಲ್ಲ.

ಅಂದಬಳಿಕ, ಬುದ್ಧಿ ಜೀವಿ ಮೊಟ್ಟಮೊದಲು ಸತ್ಯಸ್ಥಿರೀಕರಣ ಶೀಲನಾಗಬೇಕು. ಲೌಕಿಕವಾಗಿ ರಸಾಯನಶಾಸ್ತ್ರ, ಭೌತಶಾಸ್ತ್ರ, ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರ–ಇನ್ನಿತರ ಯಾವದೇ ವೈಜ್ಞಾನಿಕ ರಹಸ್ಯವನ್ನು ಭೇದಿಸುತ್ತಿರಲಿ; ಅಥವಾ ಭೇದಿಸಿ ವಿಜಯಿಯಾಗಿರಲಿ. ಅಂಥ ಅವಸರದಲ್ಲೂ ಅವನು ಸಾಂಖ್ಯಯೋಗ ಅಥವ ಪಿಂಡಭಾವ ಲಕ್ಷಣ ಜ್ಞಾನಾರ್ಜನೆ ಮಾಡುವುದನ್ನು ಕೈಬಿಡಬಾರದು; ಧರ್ಮವನ್ನು ಹೀಂಕರಿಸಬಾರದು. ಛಂದಸ್ಸು, ಅಲಂಕಾರ, ನಿರುಕ್ತ, ಕಲ್ಪ, ವ್ಯಾಕರಣ, ಭಾಷಾಶಾಸ್ತ್ರಜ್ಞನೇ ಆಗಿರಲಿ—ಆಗಲೂ ತಾರಕಯೋಗ ಅಥವ ಪದ ಭಾವ—ಶಿವಷಡಕ್ಷರೀ ಮಹಾಮಂತ್ರಜ್ಞನಾಗದೆ ಉಳಿಯಬಾರದು. ಡಾರ್ವಿನ್ ಸಿದ್ಧಾಂತ, ಗೆಲಿಲಿಯೋ ಸಿದ್ಧಾಂತ, ಆರ್ಕಿಮಿಡಿಸನ ನಿಯಮಗಳು—ಇಂಥ ಯಾವ ಯಾವುದರ ಪ್ರಜ್ಞೆಯೇ ಇರುತ್ತಿರಲಿ; ಆಗಲೆಲ್ಲಾ ಪರತತ್ತ್ವದ ಸೃಷ್ಟಿ-ದೃಷ್ಟಿ, ಅಮನಸ್ಕ ಲಕ್ಷ್ಯ, ಅಥವಾ ಜಗತ್ಪ್ರಸಿದ್ಧ ರೂಪಭಾವ-ಶಿವಾಕಾರ ವೃತ್ತಿ ಪ್ರಜ್ಞೆ ಜ್ಞಾಪಕದಲ್ಲೇ ಇರುತ್ತಿರಬೇಕು; 'ಆತ್ಮವತ್ ಸರ್ವಭೂತೇಷು' ಭಗವಂತನು ಸರ್ವಾಂತರ್ಯಾಮಿ, ದೇವರಾಜ, ದೇವದೇಶಿಕ ಶಿಖಾಮಣಿ. ಅವನನ್ನು ಸಾಕಲ್ಯೇನ ತಿಳಿಯುವುದು ಸುಲಭವಲ್ಲ. ಆದರೆ, ಆಸುರಾವಿಷ್ಟ ನಡತೆಯಿಂದಲ್ಲ ದೇವಗುಣವಿಭೂಷಿತರಾಗಿ, ಜನರು ಅವನನ್ನು ಉಪಾಸನೆ ಮಾಡಬೇಕು; ಕಾಣಬೇಕು-ಅರಿದು ಭಾವೈಕ್ಯರಾಗಬೇಕು. ಇನ್ನು ವೇದ ವೇದಾಂತ ವೈರಾಗ್ಯದ ಮಾತನ್ನು ಆಡುವಾಗಲೂ-ಪರೋಪದೇಶ ಪಾಂಡಿತ್ಯ ಪ್ರದರ್ಶನ ಸಮಯದಲ್ಲೂ—

ಸಾಕ್ಷಾತ್ ಪರಮ ಸದ್ಯೋಜಾತ ತೇಜೋರಹಸ್ಯವೊಂದು, ತನ್ನ ಒಳಮನೆಯಲ್ಲಿ ಅಂತರ್ಗತವಾಗಿರುತ್ತದೆಯೆಂಬುದನ್ನು, ಅಥವ–'ಯಾದೃಶೀ ಭಾವನಾ ತಾದೃಶೀ ಸಿದ್ಧಿಃ'—ಮನವಿದ್ದಲ್ಲಿ ಮಹಾದೇವ—ವಾಕ್ಯ ಗಾಂಭೀರ್ಯವನ್ನು ಊಹಿಸಿ ತಿಳಿದು, ಆ ಸತ್ಯತೀರ್ಥದಲ್ಲಿ ಮುಳುಗಿ–ತ್ರಿಕರಣಗಳನ್ನು ಸ್ವಚ್ಛಗೊಳಿಸಿ ಕೊಳ್ಳುವವನಾಗಬೇಕು. ಹೀಗಾದಾಗ, ಅವನ ಓದುಗಾರಿಕೆಗೆ—ಅವನಿಗುಳ್ಳ ಕಾವ್ಯ ಕಾದಂಬರೀ ನಾಟಕ ರಚನಾಶಕ್ತಿಗೆ–ಅವನ ನವೋನವೀನ ವೈಜ್ಞಾನಿಕ ಗ್ರಂಥಾಭ್ಯಾಸಕ್ಕೆ ಇನ್ನೂ ಮಿಗಿಲಾದ ಕಾಂತಿ ಕೂಡಿಬರುತ್ತದೆ; ಆತ್ಮಸಾಕ್ಷಿಯಾಗಿ ಪರಿಣತೆಯ ಅಂತಸ್ತು ಪುಟ್ಟ

ಬರುತ್ತದೆ; ಅಭೇದ್ಯ ಚಿದ್ವಸ್ತು ಶಿವನಂದಿದೇವನ–ಆತ್ಮಾನುಭಾವಿ ಶಿವ ಚಿದ್ರೂಪ ವಿದ್ಯಾಧರ ಚಕ್ರವರ್ತಿ ಶಾಂತಲಿಂಗ ಗುರುವಿನ ಅಡಿ ಮಿಡಿದು ಅಮರನಾಗುವ ಪುಣ್ಯ ಕೂಡಿಬರುತ್ತದೆ. ಇದೊಂದು ಇಲ್ಲದ–ಆತ್ಮವಂಚನೆಯ ಧರ್ಮಪ್ರಚಾರ—ಡಂಭ ಡೌಳಿನ ಮೆರವಣಿಗೆ, ಅದು ಬರಡು—ನಿಷ್ಪ್ರಯೋಜನ.

* * * *

ಪರಮಾತ್ಮನು ಸತ್-ಚಿತ್-ಆನಂದ-ನಿತ್ಯ-ಪರಿಪೂರ್ಣ ಅಂತರ್ಯಾಮಿಕ ಶಕ್ತಿಯ ಲಕ್ಷಣವನ್ನು ಅರಿದು, ಸರ್ವಾಂಗ ಲಿಂಗಾಭರಣನಾಗಬೇಕೆಂದು ಇಚ್ಛಿಸುವವನು, ಮೊಟ್ಟಮೊದಲು ಆಣವ ಮಲ ಮತ್ತು ಮಾಯಾಮಲ ವಿರಹಿತನಾಗಬೇಕು. ಕ್ರಮಬದ್ಧ ಭಸ್ಮ–ರುದ್ರಾಕ್ಷ ಧಾರಣದಿಂದ ಹೀಗೆ ಆಗಲು ಸಾಧ್ಯ. ಶಿವಪಂಚಾಕ್ಷರೀ ಮಹಾಮಂತ್ರ ಜಪಾಚರಣೆಯಿಂದ ವಾಸನಾಮಲ ಹರಣ; ಶಿವಲಿಂಗಾರ್ಚನಾ ಕಾರಣವಾಗಿ ಸದ್ಭಾವದ ಅರಿವು-ಆವಿಷ್ಕಾರ, ಹೃದಯ ಸ್ಫುರಣ. ಆಕಾಶ ತತ್ವದ ಕ್ರಿಯಾಕೌಶಲ್ಯರೂಪ ಶಿವಪ್ರಸಾದ ದೊರಕೊಂಡಲ್ಲಿ—ಶಿವತ್ವಾಭಿಗಮನ, ಬೂದಿಮುಚ್ಚಿದ ಕೆಂಡದಂತೆ–ಶಿವಯೋಗ ತಪಸ್ಸಾಮ್ರಾಜ್ಯ ಪೀಠದಲ್ಲಿ ಶ್ರೀಮದ್ಘನಲಿಂಗಮೂರ್ತಿಯಾಗಿ ಓಲಗಂಗೊಡುವ ದಿವ್ಯಶಕ್ತಿ ವಶಮಪ್ಪುದು—ಆಗ,

ಇಲ್ಲವಾದರೆ—

"ಹೊಸ್ತಿಲಲ್ಲಿ ಹುಲ್ಲುಹುಟ್ಟಿ, ಮನೆಯೊಳಗೆ ರಜತುಂಬಿ,
ಮನೆಯೊಳಗೆ ಮನೆಯೊಡೆಯನಿದ್ದಾನೊ—ಇಲ್ಲವೊ ?
ತನುವಿನಲ್ಲಿ ಹುಸಿತುಂಬಿ, ಮನದೊಳಗೆ ವಿಷಯತುಂಬಿ,
ಮನದೊಳಗೆ ಮನೆಯೊಡೆಯನಿಲ್ಲ"

ಎನ್ನುವ, ಭಕ್ತಿಭಂಡಾರಿ ಬಸವಣ್ಣನ ಮಾತನ್ನು ಸ್ಮರಿಸಿಕೊಳ್ಳಬೇಕಾಗುತ್ತದೆ; ತನಗೆ ತಾನೇ ಅಳಬೇಕಾಗುತ್ತದೆ—ಸಾಧಕ ಜೀವ !

ಎನಲಾಗಿ, ಸಮಯೋಚಿತ ಶುಭಜೀವನಕ್ಕೆ ಮಾರ್ಗವೀಯುವ ಶಿವಪೂಜಾವಿಷಯದಲ್ಲಿ, ಸಾಧಕನು ಮುಖ್ಯವಾಗಿ ತಿಳಿದಿರಬೇಕಾದ ಅಂಶಗಳಾವುವು ? ಆ ಬಗ್ಗೆ-ಅವನ ವಿಶಾಲದೃಷ್ಟಿ–ನಿಮಿಷ ನಿಮಿಷದ ಕರ್ತವ್ಯ–ಸಾಹಸ, ಎಷ್ಟೊಂದು ಅಚಲವಾಗಿರಬೇಕು ? ಆತ್ಮೋದ್ಧಾರದ ಗರಡಿ ಮನೆಯಲ್ಲಿ

ಅವನ ಸರಳ ಜೀವನದ ರೀತಿ-ಧರ್ಮಾನುರಾಗ ಹೇಗೆ ಒಂದಾಗಿ ಬೆಳೆಯ ಬೇಕು? ಈ ಎಲ್ಲ ರಹಸ್ಯಗಳ ಸಾಮಾನ್ಯ ವಿಮರ್ಶೆ—ಈಗ.

(ಅ) ಶಿವೋಪಾಸನಾ ಕರ್ತವ್ಯದಲ್ಲಿ ಪರಂಪರಾಗತ.

## ವಿಧಿ-ನಿಷೇಧ ಪ್ರಕ್ರಿಯಾ ಪರಿಚಯ ಭಾಗ

### ೧) ಉಪಾಸನೆಗೆ ಏಕಾಗ್ರಚಿತ್ತ ಏಕಾಂತವಾಸ ಅಗತ್ಯ.

ಪಾಶುಪತ, ಗಾಣಾಪತ್ಯ, ಶಾಕ್ತೇಯ, ಸೌರ, ಸೋಮ, ಕೌಮಾರ, ಭೈರವ, ಕಾಳಾಮುಖ ಪಂಥದವರೆಲ್ಲರೂ ಶೈವರು. ಇವರು ಶಿವನನ್ನು ಶಿವ ಲಿಂಗರೂಪದಿಂದಲೇ ಉಪಾಸಿಸುತ್ತಾರೆ-ಅರ್ಚಿಸುತ್ತಾರೆ. ಸಾಕಾರ-ನಿರಾಕಾರ ಉಭಯವನ್ನೂ ಶಿವಲಿಂಗದ ಒಲುಮೆಯಿಂದಲೇ ಪ್ರಸನ್ನಮಾಡಿಕೊಳ್ಳು ತ್ತಾರೆ. ವೀರಶೈವರ ಇಷ್ಟಲಿಂಗೋಪಾಸನೆಯು ಇತರರ ಅನುಸರಣೆಗಿಂತ ವೈಶಿಷ್ಟ್ಯವಾದುದು; ಸಾರಾಸಾರ ವಿವೇಕಯುತವಾದುದು. ಇವರನ್ನು ಮಹಾಪಾಶುಪತರೆನ್ನುವರು.

ಪ್ರಾಯಃ, ಪೂಜ್ಯ-ಪೂಜಕ ಮಟ್ಟದ ವಿಸ್ತಾರ ಸ್ಥಿತಿಯಲ್ಲಿ ಶಿವ-ಜೀವರ ದ್ವೈತ ಪ್ರಸರಣೆಯನ್ನೂ, ದ್ವೈತದ ವಿಲಯದೆಸೆಯಲ್ಲಿ 'ಜೀವತ್ವ ನಿವೃತ್ತಿ-ಶಿವತ್ವ ಪ್ರಕಾಶ' ಲಕ್ಷಣವನ್ನೂ, 'ಉಪಾಸನಾ' ಶಬ್ದವು ಸೂಚಿಸುತ್ತದೆ. ಈ ಸೂಚನೆಯನ್ನು ವೀರಶೈವರು ಅನುಮೋದಿಸುತ್ತಾರೆ. ಇನ್ನೂ ಮುಂದೆ ಹೋಗಿ, "ಪರ್ಯುಪಾಸನಾ" ಸಂಪನ್ನರಾಗುತ್ತಾರೆ. ಪರಿ+ಉಪಾಸನಾ=ಇದು ಅನವರತ ಮಾಡುವ ಉಪಾಸನೆ; ನಿತ್ಯಾಭಿ ಯೋಗ. ಸ್ವಸ್ವರೂಪ ಚಿಂತನಾಸ್ಪದ ಪರಮ ವಿಶ್ರಾಂತಿಯೇ—ಇಲ್ಲಿ ಅಭಿ ಲಕ್ಷ್ಯವು. 'ಜ್ಞಾನದಂತೆ ಆಚರಣೆ' ಎಂಬ ಈ ಬಗೆಯ ನಿಬಂಧನೆಯಲ್ಲಿ-ಆಸ್ಥೆಯುಲ್ಲಿ ಔಚಿತ್ಯವಿದೆ; ಜ್ಞಾನ-ಕ್ರಿಯಾ ಪ್ರಚೋದನೆಯಿದೆ.

ಉಪಾಸನೈವ ಸಂಯೋಗಃ ಸಂಯೋಗೋದ್ವೈತ ಸಂಲಯಃ ।
ದ್ವೈತಸ್ಸನ್ ವಿಲಯಶ್ಚೈವ ನಿವೃತ್ತಿಃ ಪರಿಕೀರ್ತಿತಾ ।
ನಿವೃತ್ತಿರೇವ ವಿಶ್ರಾಂತಿಃ ವಿಶ್ರಾಂತಿಃ ಪರಮಂ ಪದಮ್ ॥

(ಶಿವಾ—

ಇದೇ ಅಭಿಪ್ರಾಯವನ್ನು,

ಗೌರವಿತ ಪ್ರೀತಿಹೇತು ಕ್ರಿಯಾ ಪೂಜಾ ।

ಎಂದು ಬೇಕಾದರೂ ವಿಶ್ಲೇಷಣೆಮಾಡಿ ಹೇಳಬಹುದು. ಪೂಜಾ ವಸ್ತುವಿನ ಯೋಗ್ಯತೆಗೆ ಅನುಗುಣವಾಗಿ ಸಾತ್ವಿಕಾದಿ ಗುಣಪ್ರವೃತ್ತಿವಿಡಿದು ಸಲ್ಲಿಸುವ ಸೇವೆಯೇ ಇಲ್ಲಿ 'ಪೂಜಾ' ಶಬ್ದದಿಂದ ಕರೆಯಲ್ಪಟ್ಟಿದೆ.

ಇಂಥ ಸಂದರ್ಭವಲ್ಲಿ ಪೂಜಾರಿಯ ಎದುರಿಗೆ ಎರಡು ರೀತಿಯ ಪ್ರವೃತ್ತಿಗಳು ನಲಿದಾಡುವುದನ್ನು ಕಾಣುವೆವು. ಎರಡು ಹಾವುಗಳು ಒಂದಕ್ಕೊಂದು ಅಭಿಮುಖವಾಗಿ ಹೆಡೆ ಬಿಚ್ಚಿ, ನಿಂತು ನಲಿನಲಿದು ಆಟ ವಾಡುವಂತೆ—ಅಲ್ಲ; ಸಗುಣ—ನಿರ್ಗುಣ, ಹೀಗೆ ದ್ವಿಮುಖ ಲಕ್ಷ್ಯವೂ ಅಲ್ಲಿಲ್ಲ. 'ಲೀಲಾ ಮತ್ತು ಕೇವಲ' ಬ್ರಹ್ಮಸೂತ್ರ ಸಮ್ಮತಿಯಂತೆ, ಆ ನಲಿವು-ಉಲಿವು!

ಒಂದನೆಯದರಲ್ಲಿ ಸಾಂಘಿಕಪ್ರಭಾವ ಎದ್ದು ಕಾಣುತ್ತದೆ. ಸಮಾಜಕ್ಕೂ ಸಾಧಕನಿಗೂ, ಅಥವಾ ಸಾಧಕನಿಗೂ, ಪರಮಶಿವನಿಗೂ ಇರುವ ಭಾವೈಕ್ಯತೆಯನ್ನು ಅದು ವ್ಯಕ್ತಪಡಿಸುತ್ತದೆ. ಶಿವಲಿಂಗವು ಸೇವ್ಯ ಪ್ರತೀಕವೆಂದೂ ಸಾಧಕನು ಸೇವಕನೆಂದೂ ಅಲ್ಲಿ ಭಾವಿಸಲ್ಪಡುತ್ತದೆ. ಪ್ರತೀಕಕ್ಕೆ ಸಂಬಂಧಪಟ್ಟ ಕೆಲವು ಪ್ರತಿಮೆಗಳನ್ನಾದರೂ ಆಗ ಏರ್ಪಡಿಸಿಕೊಳ್ಳಬಹುದು.

ಅಂಥ ಶಿವನ ಅನುಗ್ರಹವನ್ನು ಸಂಪಾದಿಸಲು—ಅವನ ಪೂರ್ವ ಚರಿತ್ರೆಯ ಶ್ರವಣ, ಅವನ ನಾಮಸಂಕೀರ್ತನ, ಅವನ ದಿವ್ಯಸ್ವರೂಪ ಸ್ಮರಣ—ಈ ಮೇರೆಗೆ ಒಂಭತ್ತು ಬಗೆಯ ಭಕ್ತಿಯ ಅನುಸರಣೆ ಭಕ್ತನಿಗೆ ಬೇಕೇಬೇಕಾಯಿತು.

"ಮನೆಯಲ್ಲಿದ್ದಾಗ ಶಂಕರನ ರಕ್ಷಣೆ; ಮನೆಯ ಹೊರಗಡೆ ಸ್ಥಾಣುವಿನ ರಕ್ಷಣೆ; ಸಕಲ ಪ್ರದೇಶಂಗಳಲ್ಲಿ ಸದಾಶಿವನ ರಕ್ಷಣೆ; ನಿಂತಾಗ ಜಗತ್ಪತಿಯ ರಕ್ಷಣೆ; ನಡೆಯುವಾಗ ಪ್ರಮಥಪತಿಯ ರಕ್ಷಣೆ; ಕುಳಿತಾಗ ವೇದ್ಯವೇದ್ಯನ ರಕ್ಷಣೆ; ಮಾರ್ಗಂಗಳಲ್ಲಿ ನೀಲಕಂಠನ ರಕ್ಷಣೆ; ಬೆಟ್ಟಗಳಲ್ಲಿಯೂ ದುರ್ಗಪ್ರದೇಶಗಳಲ್ಲಿಯೂ ತ್ರಿಪುರಾಂತಕನ ರಕ್ಷಣೆ; ಅರಣ್ಯಾದಿಗಳಲ್ಲಿ

ನಿಂತಾಗ ಮಹಾಶಕ್ತಿಧರನಾದ ಕಿರಾತ ರುದ್ರನ-ಮೃಗವ್ಯಾಧನ ರಕ್ಷಣೆ; ಭೀಕರ ಶತ್ರುಸೈನ್ಯಗಳನ್ನು ಗೆಲುವಲ್ಲಿ ವೀರಭದ್ರನ ರಕ್ಷಣೆ ಬೇಕಾಯಿತು."

"ಮಹಾಮೃತ್ಯು ಅಪಮೃತ್ಯುಗಳಂ ಸುಡು ಸುಡು! ರೋಗಭಯಂ ಹಾರಿಸು ಹಾರಿಸು! ವಿಷಸರ್ಪಭಯಮಂ ಪರಿಹರಿಸು ಪರಿಹರಿಸು! ಶತ್ರುಗಳಂ ಹೊರಡಿಸು ಹೊರಡಿಸು! ತ್ರಿಶೂಲದಿಂದ ಇರಿ ಇರಿ! ಕುಠಾರದಿಂದ ಖಂಡಿಸು ಖಂಡಿಸು! ಖಡ್ಗದಿಂದ ಛೇದಿಸು ಛೇದಿಸು! ಖಟ್ವಾಂಗದಿಂದ ಕೊಲ್ಲು ಕೊಲ್ಲು! ಮುಸಲದಿಂದ ಹೊಡಿ ಹೊಡಿ! ಬಾಣಂಗಳಿಂದ ಭಯಪಡಿಸು ಭಯಪಡಿಸು! ಭೂತಂಗಳನ್ನು ಓಡಿಸು ಓಡಿಸು! ಕೂಷ್ಮಾಂಡ, ಭೇತಾಳ, ಮಾರೀಗಣ, ಬ್ರಹ್ಮರಾಕ್ಷಸರಂ ಅಂಜಿಸು ಅಂಜಿಸು! ಎನಗೆ ಅಭಯವಂ ಕೊಡು ಕೊಡು! ನಿನ್ನಂ ನಂಬಿದಂಥ ನನ್ನಂ ಸಂತೋಷಗೊಳಿಸು ಸಂತೋಷಗೊಳಿಸು; ಹಸಿವು-ಬಾಯಾರಿಕೆ-ನರಕಭಯದಿಂದ ನನ್ನನ್ನು ಉದ್ಧರಿಸು ಉದ್ಧರಿಸು" ಹೀಗೆಂದು ಬೇಡಿಕೊಂಡುದೂ ಆಯಿತು.

ಅಂತಃಸ್ಥಿತೋ ರಕ್ಷತು ಶಂಕರೋ ಮಾಂ
ಸ್ಥಾಣುಃ ಸದಾ ಪಾತು ಬಹಿಃಸ್ಥಿತೋ ಮಾಂ ||
ತದಂತರೇ ಪಾತು ಪತಿಃ ಪಶೂನಾಂ
ಸದಾಶಿವೋ ರಕ್ಷತು ಮಾಂ ಸಮಂತಾತ್ ||೨೨||

.......................................................

ಮಾರ್ಗೇಷು ಮಾಂ ರಕ್ಷತು ನೀಲಕಂಠಃ
ಶೈಲಾದಿದುರ್ಗೇಷು ಪುರತ್ರಯಾರಿಃ ||

.......................................................

ಘೋರಾರಿ ಸೇನಾರ್ಣವದುರ್ನಿವಾರೇ
ಮಹಾಭಯಾದ್ರಕ್ಷತು ವೀರಭದ್ರಃ ||೨೫||

ಜ್ವಲಜ್ವಲ ಮಹಾಮೃತ್ಯುಭಯಯಮಪಮೃತ್ಯುಭಯಂ ನಾಶಯ ನಾಶಯ, ರೋಗಭಯ ಮುತ್ಸಾದಯೋತ್ಸಾದಯ, ವಿಷಸರ್ಪಭಯಂ ಶಮಯ ಶಮಯ, .......................................................

... ....ಕೂಷ್ಮಾಂಡ ಭೇತಾಳ ಮಾರೀಚ ಬ್ರಹ್ಮರಾಕ್ಷಸಗಣಾನ್ ಸಂತ್ರಾಸಯ ಸಂತ್ರಾಸಯ......................... "

(ಸ್ಕಾಂ. ಬ್ರ. ಅಧ್ಯಾಯ ೧೨.

ಶಿವನು ಸರ್ವಜ್ಞನು-ದೋಷರಹಿತ; ತಾನು ಕಿಂಚಿಜ್ಞ-ಅಸಾಮಾನ್ಯ ದೋಷಿ- ಪಾಪಮಾಡಿದವ, ತನ್ನ ಸಮಸ್ತಾಪರಾಧಗಳ ಕ್ಷಮೆಗಾಗಿ ಆ ಮಹಾರುದ್ರನನ್ನು ಯಾಚಿಸಲೇ ಬೇಕು, ಇಲ್ಲವಾದರೆ-ಘೋರ ನರಕವೇ ಗತಿ, ಎಂಬ ನಂಬಿಕೆಯೂ ಅದಕ್ಕೆ ಗಂಟುಬಿತ್ತು.

ವೀರಶೈವ ಸಿದ್ಧಾಂತದ ಪ್ರಕಾರ ಅಂಥ ಆಲೋಚನೆ ಗೌಣ. ಏಕೆಂದರೆ, ಗುಣ-ಸ್ವಭಾವ ಪ್ರವಿಷ್ಟ ಮಹಾರುದ್ರನು ಒಮ್ಮೊಮ್ಮೆ ಕಾಲಭೈರವ ನೃತ್ಯಕ್ಕೆ ಅಣಿಯಾಗಿಬಿಟ್ಟುದಾದರೆ—ಅವನ ಸ್ವೈರಕೃತ್ಯಕ್ಕೆ ಉಪಶಮನವೆಲ್ಲಿ? ಇವೊತ್ತಿನ ಮಹಾವಿಜ್ಞಾನಿಯೆನಿಸಿಕೊಂಬುವವನಾದರೂ ತನ್ನ ಬಳಿಯಿರುವ ಅಣುಬಾಂಬು-ಜಲಜನಕ ಬಾಂಬು-ಇನ್ನೂ ಏನೇನೋ 'ಘುಂ ಘುಂ' ಎನಿಸಿಬಿಟ್ಟಾಗ, ಆದಾವನೋ ಒಬ್ಬ ಹುಂಬನು-ತನ್ನ ತಲೆಯನ್ನುಳಿಸಿಕೊಳ್ಳಲು ಮರದ ಪೊಟ್ಟರೆಯನ್ನೋ-ಹುಲ್ಲು ಗುಡಿಸಲನ್ನೋ ಆಶ್ರಯಿಸಹೋದರೆ ಭವಿಷ್ಯ ಹೇಗೆ? ಮೃತ್ಯುವಿಗೆ ಹೆದರಿದರೆ ಅವಿತುಕೊಳ್ಳಲು ಸ್ಥಳ ಯಾವುದು? ಎಲ್ಲವೂ ಭಯಾನಕ, ದುಸ್ಥಿತಿ-ದುರ್ವಿಧಿ! ಅದು ವಿಷಘಳಿಗೆ; ಪರಿಹಾರಕ್ಕೆ ಮಾರ್ಗವಿಲ್ಲ!!

ಆದರೆ, ಸರ್ವಲೋಕ ಶರಣ್ಯ ಶಂಕರನು ಹಾಗೆ ಪ್ರವೃತ್ತನಾಗಲಾರ. ಆಪದ್ಬಾಂಧವ ಪರಮೇಶ್ವರನು ಅಷ್ಟೊಂದು ನಿರ್ದಯನಾಗಿರಲಾರ; ಆಗಲಾರ. ಅವನ ಪ್ರಕೃತಿಶಕ್ತಿಯೇನೆ ಒಮ್ಮೊಮ್ಮೆ ಸ್ವಲೀಲಾರ್ಥ, ಹಾಗೂ ಹೀಗೂ-ಪ್ರಕಾರಾಂತರವಾಗಿ ಮೋಹಿನಿಯಾಗಿ ಅಶುದ್ಧಮಾಯೆಯಾಗಿ ನಟಿಸುತ್ತಿರಬೇಕೇ ಹೊರತು, ಮೂಲವಸ್ತು ಪರಮಾತ್ಮನು ಗುಣತ್ರಯ ವಿದೂರನು-ನಿರ್ಮಾಯನು. ಅವನು ಯಾವ ಬಗೆಯ ಉಪಾಧಿಯಿಂದಲೂ ಆವೃತನಾಗಿಲ್ಲ.

ಅವಿದ್ಯಾಜಾಲದಿಂದ ಸುತ್ತುವರಿಯಲ್ಪಟ್ಟ ಜೀವನು ಅಂಥ ಮಾಯಾತೀತ ದೇವನನ್ನು ಬಲುಬೇಗ ಗುರುತಿಸಲಾರ. ಕಳೆದುಹೋದ ಜನ್ಮದ ಪುಣ್ಯವಶದಿಂದಲೂ ಸದ್ಗುರುವಿನ ಅನುಗ್ರಹ ಬಲದಿಂದಲೂ ಎಚ್ಚೆತ್ತಾಗ

ಮಾತ್ರ—ಅದು ಸಾಧ್ಯ. ಶುದ್ಧ ಮಾಯಾ ಕಾರ್ಯವನ್ನು ಕಂಡುಹಿಡಿದ ನಂತರವೇ ಮುಂದಿನ ಗೆಲುವು–ಸೋಲಿನ ಪ್ರಶ್ನೆ. ಷಟ್‌ಸ್ಥಲವಿದ್ಯಾಸಂಪನ್ನ ನಾಗಬೇಕು ; ತನ್ನ ಸಮಾಧಾನದ–ಪ್ರೀತಿಯ–ಪೂರ್ಣ ಆಸಕ್ತಿಯ ಕೂಗಿಗೆ ಪ್ರಭುವು ' ಓ ' ಗೊಟ್ಟಾಗ, ತಾನು ಆ ಬಯಲುನಾದದಲ್ಲಿ ಅಡಗಿಹೋಗ ಬೇಕು ; ಋತದ ಸಂಕೇತವಾಗಬೇಕು ; ಎಂಬ ನಿರ್ಣಯ ಎರಡನೆಯ ರೀತಿಯದು. ' ವ್ಯಕ್ತಿ ಮತ್ತು ಆತ್ಮವಿಕಾಸ ' ತತ್ತ್ವವನ್ನು ಅರ್ಥೀಕರಿಸಿದ ಈ ಮಾರ್ಗದಲ್ಲಿ ಪ್ರಬುದ್ಧ ವೀರಶೈವನು ಗಮಿಸುವನು.

ಸಾಧಕನು ಧಾರಣೆಮಾಡಿಕೊಂಡಿರುವ ಮತ್ತು ಪೂಜಿಸುವ ಇಷ್ಟಲಿಂಗ ವಾದರೂ ಹೀಗೆಯೇ ರೂಪಾರೂಪ ಸಂಯೋಗ ಚೈತನ್ಯವು ; ಜೀವ–ಪರಮ ಸಂಬಂಧ ಸುಸ್ಥಲ ಸಂಜ್ಞೆಯು, ಸಕಲ ನಿಷ್ಕಲವೂ, ಸರ್ವಸೌಖ್ಯವೂ, ನಿರಂಜನ ಚಿದ್ವಸ್ತುವೂ ಆದ " ಕರದಿಷ್ಟಲಿಂಗವೇ ಶರೀರದ ಪರವಸ್ತುವಾಗಿ ಒಪ್ಪುತ್ತಿದೆ. ಒಳಗೆನ್ನದೆ, ಹೊರಗೆನ್ನದೆ, ಎರಡೆನ್ನದೆ, ಸಾರ್ವತ್ರಿಕವಾಗಿ, ಅಖೀಣ ಕ್ಷಿಕವಾಗಿ (Theoria) ಏಕೈಕ ಪರತಮ ಶಾಂತಿಯ ಅವಸ್ಥೆ ಯಾಗಿ ಸ್ವಯಂ ರತ್ನವಾಗಿ ರಾರಾಜಿಸುತ್ತಿದೆ '' ಆ ಇಷ್ಟಲಿಂಗ.

ಎನ್ನಿಂದ ಅವಿಭಾಜ್ಯವಾದ ವಿಶ್ವಾತ್ಮ ವಿಶ್ವಗುಣಾದರ್ಶ ಸಂಕೇತವೇ ಇಷ್ಟಲಿಂಗ. ನಿರಾಕಾರ ಪರವಸ್ತುವನ್ನು ಅಂತಿಮವಾಗಿ ಗುರುತಿಸುವುದಕ್ಕೆ ಪೂರ್ಣ ಸಹಕಾರಿಯಾಗಿದೆ ಆ ಗೋಲಾಕಾರ ಬ್ರಹ್ಮ.

ಅವಿಭಾಗೇನ ದೃಷ್ಟತ್ವಾತ್ ।

(ಬ್ರ.ಸೂ. ೪-೪-೪)

ಯಾವುದೇ ಮಂತ್ರದ ಸಮನ್ವಯಲಕ್ಷಣ ಗೊತ್ತಿರದಿದ್ದಾಗ, ಅದರಲ್ಲಿ ' ಪದ–ವರ್ಣ ' ವಿಭಾಗ ಕಾಣಿಸಿಕೊಂಬಂತೆ–ಪಾರಮಾರ್ಥಿಕ ಅನುಭಾವದ ಲಕ್ಷಣ ಗೊತ್ತಿರದ ಸಾಧಕ ಜೀವಿಯ ಪೂರ್ವಾವಸ್ಥೆಯಲ್ಲಿ ' ಶಿವಂ-ಜೀವ-ಜಗತ್ ' ಅಥವ ' ಪೂಜ್ಯ-ಪೂಜಕ-ಪೂಜನೀಯ ' ವಸ್ತು ವಿಭಿನ್ನತೆ ಗೋಚರಿಸುತ್ತದೆ. ಅದೇ ಶಕ್ತಿವೈಚಿತ್ರ್ಯ ದ್ವೈತಪರ್ಯಾಯವು. ಪರಾವಸ್ಥೆಯಲ್ಲಿ ಈ ಮೂರರ ಏಕೀಕರಣವಿದ ; ' ಪದ ಮತ್ತು ವರ್ಣ ' ಸಂಯೋಗವೇ ಮಂತ್ರಬ್ರಹ್ಮವಾಗಿ ವ್ಯಕ್ತವಾಗಿದೆ. ಅದೇ ಶಿವಾದ್ವೈತದ ಪರ್ಯಾಯವು. ಅದೇ ಭೇದಾಭೇದ ಪ್ರತೀಕವು. ಸ್ವಸಂವೇದ್ಯಪ್ರಾಚೀನ ಶ್ರದ್ಧಾಬಿಂದುವಿನಲ್ಲಿ

ಅವೆರಡೂ ಅನ್ಯೋನ್ಯ ನಿಕಟಸಂಬಂಧವೇ ಸರಿ. ಚಿಕ್ಕಂದಿನಲ್ಲಿ ಕುಡಿದ ತಾಯ ಎದೆಹಾಲಿನ ಚೈತನ್ಯ, ಸಾವಿನ ತನಕ ಜೀವಿಯ ತನುವಿನಲ್ಲಿ ಲೇಪ ಗೊಂಡಿರುವಂತೆ ಆ ' ಲಿಂಗ-ಲಿಂಗಿ ' ಸಂಬಂಧ

ತನ್ನ ಅಂತರಂಗದ ಚಿದಚಿದ್ವಿಶೇಷತೆಯನ್ನೇ, ಇಲ್ಲವೆ 'ವಿಶ್ವ-ವಿಶ್ವಾತ್ಮ' ಕುಂಡಲಿನಿ ಕೇಂದ್ರವನ್ನೇ ವೀರಶೈವನು ಉಪಾಸನೆ ಮಾಡುತ್ತಾನೆ. ಏಕಾಗ್ರಚಿತ್ತನಾಗಿ–ಏಕಾಂತವಾಸಿಯಾಗಿ, ಏಕೈಕಬ್ರಹ್ಮಾನಂದವನ್ನು ಉಪಾಸನೆ ಮಾಡುತ್ತಾನೆ.

' ಏಕಸ್ತಪಃ ', ತಪಸ್ಸಿಗೆ ಒಬ್ಬನೇ ಇರಬೇಕು—ಎಂಬ ಆರ್ಷೇಯ ನಿಬಂಧನೆಯನ್ನು ಅವನು ಮೀರಲೊಲ್ಲ. ಗಿರಿಗಹ್ವರ್‌ಗಳಲ್ಲಾದರೂ ಸರಿಯೆ, ಪೂಜೆಯ ಮನೆಯಲ್ಲಾದರೂ ಸರಿಯೆ—ಪೂರ್ವ ಅಥವ ಉತ್ತರದಿಕ್ಕಿಗೆ ಮುಖಮಾಡಿ ಪೂಜಿಸುತ್ತಾನೆ. ಯೋಗಶಾಸ್ತ್ರದಲ್ಲಿ ಹೇಳಿದ್ದಪ್ರಕಾರ— ಸಿದ್ಧಾಸನ, ಪದ್ಮಾಸನ, ಸುಖಾಸನ ಇವುಗಳಲ್ಲೊಂದನ್ನು ಹಾಕಿ ಕುಳಿತು ಪೂಜೆ ಮಾಡುತ್ತಾನೆ. ಮನಸ್ಸಿನ ಏಕಾಗ್ರತೆ ಬಲಿಯಲು ಅದರಿಂದ ಹೆಚ್ಚು ಅನುಕೂಲ.

೨) ತಾನು ಮಾನವನಾಗಿ ಹುಟ್ಟಿ ಬಂದುದಕ್ಕೆ ಇದೇ ಕರ್ತವ್ಯವೆಂದು ಅರಿತು, ವೀರಶೈವನು ಪಂಚಮಹಾಯಜ್ಞಗಳನ್ನು ನಡೆಸುತ್ತಾನೆ. ತಪಸ್ಸು, ಕರ್ಮ, ಜಪ, ಧ್ಯಾನ, ಜ್ಞಾನ—ಇವೈದೂ ಆ ಯಜ್ಞವಿಭಾಗಗಳು.

ಶಿವಧರ್ಮಸಮುದ್ಧರಣಾರ್ಥ ದೇಹಸಂಶೋಷಣ, ಶಿವಪೂಜಾನಿಷ್ಠೆ, ಶಿವಪಂಚಾಕ್ಷರಾಭ್ಯಾಸ ಅಥವ ಪ್ರಣವಾಭ್ಯಾಸ, ಶಿವಸ್ವರೂಪಚಿಂತನ, ಶಿವಾಗಮಾರ್ಥವಿಜ್ಞಾನ—ಹೀಗೆ ಆಚರಣಾಕ್ರಮ. ಮನಸ್ಸು ಹಿಗ್ಗಿ— ಸಹಸ್ರ ಕುಂಭಾಭಿಷೇಕ, ಕೋಟಿ ಕೋಟಿಪಂಚಾಕ್ಷರೀ ಮಹಾಯಜ್ಞ, ನವಜೀವನದ ಆಕಾಂಕ್ಷೆಯಿಂದ ದೀರ್ಘೋಪವಾಸ-ಇವೆಲ್ಲವೂ ಅವನಿಗೆ ಮೆಚ್ಚಿಗೆಯಾದರೆ ಪ್ರಪಂಚಕ್ಕೆ ಇನ್ನೂ ಒಳ್ಳೆಯ ಲಾಭವೇ ಆಯಿತು !

' ಲಿಂಗಿಧರ್ಮದ ಹೆಗ್ಗುರುತು ಲಿಂಗಧಾರಣ ' ಎಂದಬಳಿಕ, ಲಿಂಗ ಪೂಜಾ ಕರ್ಮವನ್ನೇ ಆದಿಯನ್ನಾಗಿ ಇಟ್ಟುಕೊಂಡು ಇನ್ನಿತರ ಷೋಡಶ

ಸಂಸ್ಕಾರಗಳನ್ನೂ ಉತ್ತರಕ್ರಿಯೆಗಳನ್ನೂ ಆಚರಿಸುವುದು ಆಗಮೋಕ್ತ ನಿಬಂಧನೆ.

ಗುರುವೇ ನನ್ನ ಶರೀರ, ಲಿಂಗವೇ ನನ್ನ ಮನಸ್ಸು, ಜಂಗಮನೇ ನನ್ನ ಐಶ್ವರ್ಯ, ಆಚಾರವೇ ನನ್ನ ಪ್ರಾಣ—ಎಂದು ಮನಸ್ಸಿನಲ್ಲಿ ಧೃಢ ಪಡಿಸಿಕೊಂಡು, ಯಾವಾಗಲೂ ಅದೇ ರೀತಿಯಲ್ಲಿ ವರ್ತಿಸುತ್ತಾ—ನಿಷಿದ್ಧ ವಾದ ಆಚಾರಗಳನ್ನು ದೂರಮಾಡಿ, ಗುಡಿ ಗುಂಡಾರಗಳಿಗೆ ಅಲೆಯದೆ ಇಷ್ಟಲಿಂಗಾರ್ಚನಾ ಪ್ರೇಮಿಯಾಗಿ ಇರುವವನೇ ವೀರಶೈವನು.

ಲಿಂಗಂ ಶೈವಮಿದಂ ಸಾಕ್ಷಾಚ್ಛಿವಶಕ್ತ್ಯುಭಯಾತ್ಮಕಂ ।
ಧ್ಯಾತವ್ಯ ಮರ್ಚನೀಯಂ ಚ ಭುಕ್ತಿಮುಕ್ತಿ ಫಲೇಚ್ಛುನಾ ।೭॥

ಅತೋ ಯಜ್ಞೋತ್ಸದಾ ಲಿಂಗಂ ಸರ್ವಕಾರಣ ಕಾರಣಂ ।
ನಿರಾಮಯಂ ನಿರಾಕಾರಂ ನಿರ್ಗುಣಂ ನಿರ್ಮಲಂ ಶಿವಂ ॥
ಜ್ಯೋತಿರ್ಮಯಂ ನಿರಾಲಂಬಂ ಸರ್ವಾಧಾರ ಮನೂಪಮಂ ।೮॥
(ಸೂ. ಆ. ಪಟಲ ೬.)

ಸ್ವೇಷ್ಟಲಿಂಗೇ ಮಹಾದೇವಂ ಪೂಜಯೇತ್ಪೂಜಕೋತ್ತಮಃ ।೯॥
ಶಿವಸ್ಯ ಸರ್ವಗತ್ವೇಽಪಿ ಸರ್ವತ್ರ ರತಿವರ್ಜಯೇತ್ ।
ಸ್ವೇಷ್ಟಲಿಂಗೇ ಯಜನ್ ದೇವಂ ಸರ್ವಗತ್ವ ನಿರಾಸಕಃ ।೬೦॥
(ಸಿ. ಶಿ. ಪರಿ—೧೦)

ಗುರುರೇವ ಶರೀರಂ ಮೇ ಲಿಂಗಂ ಮೇ ಮನ ಏವ ಚ ।
ಧನಂ ಮೇ ಜಂಗಮಾ ಏವ ಪ್ರಾಣಸ್ತ್ವಾಚಾರ ಏವ ಸಃ ॥೬೧॥

ಏವಂ ಮನಸಿ ನಿಶ್ಚಿತ್ಯ ವರ್ತಮಾನಶ್ಚ ನಿತ್ಯಶಃ ।
ನಿಷಿದ್ಧಾರ್ಥಾನ್ ಪರಿತ್ಯಾಗೀ ಅನ್ಯದೇವಾಲಯಾನಿ ಚ ॥೬೨॥
(ವೀ.ಸ. ಪ್ರಕರಣ ೮.)

೩) ಆದಿಯಲ್ಲಿ ಗುರುದೇವನು ಅನುಗ್ರಹಿಸಿದ ಇಷ್ಟಲಿಂಗವನ್ನು ವೀರ ಶೈವನು ತನ್ನ ಜೀವಮಾನದ ಪೂರಾ ದೇಹದ ಮೇಲೆ ಧರಿಸಿಕೊಂಡಿರ ಬೇಕೆಂಬ ನಿಬಂಧನೆ ಹೇಗೆ ಉಂಟೋ—ಹಾಗೆಯೇ, ಇಡೀ ಜೀವಿತದ ಅವಧಿ ಯಲ್ಲಿ ಆ ಲಿಂಗವನ್ನು ಪೂಜಿಸುತ್ತಲೂ ಇರಬೇಕೆಂಬುದು ನಿಯಮ.

ಪತ್ರ, ಪುಷ್ಪ, ಫಲ, ಜಲ ಸಮರ್ಪಣಾದಿ ಬಾಹ್ಯಕ್ರಿಯೆಗಳಿಂದಲೂ ; ಕ್ಷಮಾ, ವಿವೇಕ, ಸತ್ಯ, ವೈರಾಗ್ಯ, ಅಹಿಂಸಾ ಮೊದಲಾಗಿ ಅಂತರಂಗದ ಔಪಚಾರಿಕ ಕ್ರಿಯೆಗಳಿಂದಲೂ ; ಲಿಂಗಾಂಗ ಜ್ಯೋತಿರ್ವಿವೇಕ ಸನ್ನಿವಿಷ್ಟ ಭಾವಾರಾಧನೆಯಿಂದಲೂ—ಪರಿಶಿವನನ್ನು ತನ್ನತ್ತ ತಿರುಗಿಸಿಕೊಳ್ಳಬೇಕು. ಅವನ ಮಮತೆಯ ಬೆಳಕಿನಲ್ಲಿ ತಾನು ಲೀನನಾಗಿಬಿಡಬೇಕು.

"ಹರ ತನ್ನ ತರಿವಂತೆ ಮಾಡಲಿ ; ಸುವರ್ಣ ಶಲಕದಂತೆ ಒರೆದೊರೆದು ನೋಡಲಿ ; ಚಂದನದ ಕೊರಡಿನಂತೆ ಅರೆದರೆದು ನೋಡಲಿ ; ಕಬ್ಬಿನ ಕೋಲಿನಂತೆ ಇರಿದಿರಿದು ನೋಡಲಿ—ಬೆಚ್ಚದೆ ಬೆದರದೆ ಲಿಂಗಪೂಜೆ ಮಾಡಬೇಕು." ಅದಕ್ಕಾಗಿ ಕಾಯಾರ್ಪಣ-ಕರಣಾರ್ಪಣ-ಭಾವಾರ್ಪಣ ವಿಹಿತ—ಲಿಂಗಪೂಜೆಯಲ್ಲಿದ್ದಂತೆ—ಲಿಂಗವನಿತ್ತ ಗುರು, ನಿಜಲಿಂಗಧರ್ಮಿ ಜಂಗಮ—ಇವರ ಪಾದಪೂಜೆಯಲ್ಲೂ ಆಸಕ್ತಿ ಇರಬೇಕು.

ಶಿವಲಿಂಗ ಮೋಹಿ, ಶಿವಲಿಂಗ ಭಕ್ತ, ಶಿವಲಿಂಗ ಪೂಜಕ, ಶಿವಲಿಂಗ ವೀರ, ಶಿವಲಿಂಗ ಪ್ರಸಾದಿ, ಶಿವಲಿಂಗ ಪ್ರಾಣಿ—ಈ ಪ್ರಕಾರವೆ, ಗುರು—ಜಂಗಮರಲ್ಲೂ ಷಡ್ವಿಧ ಭಕ್ತರ ಭೇದವನ್ನು ಸೂಕ್ಷ್ಮಾಗಮವು ಒಪ್ಪುತ್ತಿದೆ. ಅದೆಲ್ಲವೂ ಷಟ್‌ಸ್ಥಲದ ಆಚರಣೆಗೆ ಅನುಸಾರವಾದ ಮಾತು.

ವರ ಪ್ರಾಣಂ ಪರಿತ್ಯಾಗ ಚ್ಛೇದನಂ ಶಿರಸೋಽಪಿ ವಾ ।
ನ ತ್ವ ನಭ್ಯರ್ಚ ಭುಂಜೀಯಾದ್ವೀರಶೈವ ಸ್ತ್ರಿಲೋಚನಮ್ ॥
(ಶಿವಾಗಮ ಸಂಹಿತೆ.)

ಶಿವಲಿಂಗೇ ಶಿವಾಚಾರ್ಯೇ ಶಿವಯೋಗಿನಿ ಭಕ್ತಿಮಾನ್
ದಾನಂ ಕುರ್ಯಾದ್ಯಥಾಶಕ್ತಿ ತತ್ಪ್ರಸಾದಯುತಃ ಸದಾ ।೭೭॥
(ಸಿ.ಶಿ. ಪರಿ—೯

ಗುರುಭಕ್ತೋ ಲಿಂಗಭಕ್ತಶ್ಚರ ಭಕ್ತಸ್ತಥೈವ ಚ ।
ಏವಂ ಭೇದ ಸಮಾಯುಕ್ತೋ ಭಕ್ತಸ್ತು ತ್ರಿವಿಧೋ ಭವೇತ್ ।೩೬॥
ಮೋಹೀ ಭಕ್ತಃ ಪೂಜಕಶ್ಚ ತಥಾ ವೀರಃ ಪ್ರಸಾದವಾನ್ ।
ಪ್ರಾಣೇಚಾಚಾರ ಲಿಂಗಾದಿಃ ಸ ವೈ ಭಕ್ತೋಽಪಿ ಷಡ್ವಿಧಃ ೩೭।
(ಸೂ.ಆ. ಪಟಲ ೮.)

೪) ಗುರು ಜಂಗಮರೂ ಶಿವಲಿಂಗಾರ್ಚನಾ ಪ್ರೇಮಿಗಳಾಗಿಯೇ ಇರಬೇಕು. ಶಿವಜ್ಞಾನ ಸಂಪನ್ನರು, ಶಿವಯೋಗ ಸಿದ್ಧರು ಕೂಡ ಶಿವಧರ್ಮ ವನ್ನು ಉಲ್ಲಂಘಿಸಬಾರದು. ಏಕೆಂದರೆ ಅವರನ್ನು ನೋಡಿ ಲೌಕಿಕರು ಹೆಜ್ಜೆಯಿಡುತ್ತಾರೆ. ದೊಡ್ಡವರ ಮಾರ್ಗವನ್ನು ಅನುಸರಿಸುವುದು ಚಿಕ್ಕವರ ಹುಟ್ಟುಗುಣ.

ಶಿವಲಿಂಗೋಪಾಸನಾ ಬಲದಿಂದ ಚಿದಾಕಾರ ಜ್ಯೋತಿರ್ಲಿಂಗದಲ್ಲಿ ಬೆರೆದುಹೋದವರೆಲ್ಲರೂ ಸರ್ವೋಪಾಧಿ ವಿಮುಕ್ತರೇ ಸರಿ. ಅವರು ಸಂಪಾದಿಸುವುದು—ನಶ್ವರವಲ್ಲದ ನಿರ್ದಿಷ್ಟ ಐಶ್ವರ್ಯ.

ಗುರೋಶ್ಚ ಜಂಗಮಶ್ಚೈವ ಶಿವಲಿಂಗಸ್ಯ ಪೂಜನಂ ||

(ವೀರಾಗಮ–

ಜ್ಞಾನಾಮೃತೇನ ತೃಪ್ತೋಽಪಿ ಯೋಗೀ ಧರ್ಮಂ ನ ಸಂತ್ಯಜೇತ್ |
ಆಚಾರಂ ಮಹತಾಂ ದೃಷ್ಟ್ವಾ ಪ್ರವರ್ತಂತೇ ಹಿ ಲೌಕಿಕಾಃ ||೬೫||

(ಸಿ.ಶಿ. ಪರಿ–೧೬.)

ಜ್ಯೋತಿರ್ಲಿಂಗೇ ಚಿದಾಕಾರೇ ನಿಮಗ್ನೇನ ಮಹಾತ್ಮನಾ |
ಭುಜ್ಯಮಾನಾ ಯಥಾಯೋಗಂ ನಶ್ಯಂತಿ ವಿಷಯಾಃ ಸ್ವತಃ ||೧೬||
ಅನಶ್ವರಮನಿರ್ದೇಶ್ಯಂ ಯಥಾ ವ್ಯೋಮ ಪ್ರಕಾಶತೇ |
ತಥಾ ಬ್ರಹ್ಮಾಪಿ ಚೈತನ್ಯಮತ್ರ ವೈಶೇಷಿಕೀ ಕಲಾ ||೪೧||

(ಸಿ.ಶಿ. ಪರಿ–೨೦.)

೫) ಸಾಮಾನ್ಯ ವೀರಶೈವ ಮೊದಲಾಗಿ ಯಾವುದೇ ವರ್ಗದವರಿರಲಿ, ಆ ಎಲ್ಲ ಸ್ತ್ರೀ ಪುರುಷರಿಗೂ ಲಿಂಗಪೂಜೆಯಲ್ಲಿ ಸ್ವಾತಂತ್ರ್ಯವಿದೆ. ರಜಸ್ವಲೆಯಾಗಿದ್ದರೂ, ಪ್ರಸೂತೆಯಾಗಿದ್ದರೂ ಸ್ತ್ರೀಯರು ಲಿಂಗಪೂಜೆಯನ್ನು ಬಿಡಬಾರದು. ದೇಹದಿಂದ ಲಿಂಗವನ್ನು ಅಗಲಲೂಬಾರದು.

ಲಿಂಗಾರ್ಚನರತಾಯಾಶ್ಚ ಋತೌ ನಾರ್ಯಾ ನ ಸೂತಕಂ |
ತಥಾ ಪ್ರಸೂತಿಕಾಯಾಶ್ಚ ಸೂತಕಂ ನೈವ ವಿದ್ಯತೇ ||೪೪||

(ಸಿ.ಶಿ. ಪರಿ–೯.)

೬) .... .... .... ಏತತ್ಸೋಮಸ್ಯ ಸೂರ್ಯಸ್ಯ
ಸರ್ವಲಿಂಗಗ್‌ಂ ಪಾಣಿಮಂತ್ರಂ ಪವಿತ್ರಮ್ ॥

(ತೈ.ಉ. ೪/೧೬/೩೪.

ಈ ಮಂತ್ರದ 'ಪಾಣಿಮಂತ್ರಂ ಪವಿತ್ರಂ' ಎಂಬ ಪದಕ್ಕೆ 'ಪಾಣೌ ಮಂತ್ರಂ ಪಾಣಿಮಂತ್ರಂ' ಎಂದು ವ್ಯುತ್ಪತ್ತಿ ಇರೋಣದರಿಂದ—ಶಿವಲಿಂಗ ವನ್ನು ಎಡಗೈಯಲ್ಲಿ ವಾಮಗೋಮುಖವಾಗಿ (ಎಡಗಡೆಗೆ ಜಲಹರಿ ಇರುವಂತೆ) ಇರಿಸಿಕೊಂಡೇ ಪೂಜಿಸಬೇಕೆಂದು ತಾತ್ಪರ್ಯವು. ಇದರಲ್ಲಿ ಅಭೇದ ದರ್ಶನ ಜ್ಞಾನವಿದೆ.

೭) ದಾನ ಪೂಜಾದಿ ಕಾರ್ಯಾಣಿ ಗುರುಸೇವಾ ತಥೈವ ಹಿ।
ಸ್ವಾಮಿಭಕ್ತಿಂ ಚ ಸರ್ವತ್ರ ಸ್ವಯಮೇವ ಸಮಾಚರೇತ್ ॥೫೨॥

(ಶ್ರೀ ಕೆ. ಭುಜಬಲಶಾಸ್ತ್ರಿ–ನೀತಿಶತಕ.)

"ದಾನ, ಪೂಜೆ, ಗುರುಸೇವೆ ಮತ್ತು ಸ್ವಾಮಿಭಕ್ತಿ ಇವುಗಳನ್ನು ವಿವೇಕಿಯು ಇತರರಿಂದ ಮಾಡಿಸದೆ, ಸದಾ ತಾನೇ ಮಾಡಬೇಕು." ಇದು ನೀತಿವಂತರ ಹೇಳಿಕೆ. ಇಂತಹ ಕರ್ತವ್ಯ ನಿರ್ವಹಣೆಗೆ ವೀರಶೈವರು ಕೂಡ ಪುರೋಹಿತರ ದಾರಿ ಕಾಯುವುದಿಲ್ಲ. ಏಕೆಂದರೆ—ತಾನುಂಬ ಊಟ, ತಾನು ಪಡೆವ ರತಿಸುಖ, ತಾನು ಗಳಿಸಿದ ದ್ರವ್ಯ—ಈ ಎಲ್ಲದರಲ್ಲಿ ಸ್ವಾವ-ಲಂಬನವಿರುವಂತೆ, ಶಿವಪೂಜಾ ಕರ್ಮದಲ್ಲಿಯೂ ತನಗೆ ಸಂಪೂರ್ಣ ಅಧಿಕಾರವಿದೆ. ಮನವೊಲಿದು ತಾನೇ ತಾನಾಗಿ ಮಾಡುವ ಪೂಜೆ ಮಹಾ ದೇವನಿಗೆ ನೇರವಾಗಿ ಮುಟ್ಟುತ್ತದೆ. ಹಾಗೆಯೇ ಆಗಬೇಕು. ತನ್ನ ಹೃದಯದ ಸಂತಾಪವನ್ನು ತನ್ನ ಅಶ್ರುಜಲವು ಹೇಗೆ ವ್ಯಕ್ತಪಡಿಸುತ್ತದೆಯೊ ಅದೇ ಪ್ರಕಾರ, ತನ್ನ ಮನಸ್ಸಿನ ಆಹ್ಲಾದ-ಅನುರಕ್ತಿಗಳನ್ನು ಹೊರ-ಹೊಮ್ಮಿಸುವುದಕ್ಕೂ ತನ್ನ ಕಂಬನಿಯುಂಟು. ತನು-ಮನ-ಭಾವ ವಿಕಾಸ ಲಿಡಿದು ಕ್ರಿಯೆಯನ್ನು ನಡೆಸುವ ಕಾಲಕ್ಕೆ ಹಾಗೆ ಕಡೆಗೋಡಿ ಹರಿಯು ತ್ತದೆ. ಅದು ಆನಂದಭಾಷ್ಪ. ಶಿವನು ಭಕ್ತನ ಮಾತಿಗೆ 'ಓ' ಗೊಡ-ಬೇಕೆಂದಿದ್ದರೆ, ಭಕ್ತ ಶಿವನ ಸೇವೆಗಾಗಿ ಕಾತರಿಸಬೇಕು ; ಜೀವನ್ಮುಕ್ತಿಗಾಗಿ ಸದಾ ಹಲುಬುತ್ತಿರಬೇಕು, ಕಣ್ಣೀರು ಸುರಿಸಬೇಕು.

ವೇಷ—ಭಾಷೆಯೊಂದಾಗಿ, ಅಂತರಂಗ—ಬಹಿರಂಗ ಸಾಕ್ಷಿಯಾಗಿ ಆಗುವ ಉಪಾಸನೆಗೆ ಸಕಲ ಸಿದ್ಧಿಗಳೇ ಪ್ರಯೋಜನವಲ್ಲ. ಜನವಶ್ಯ, ರಾಜವಶ್ಯ, ಲೋಕವಶ್ಯಾದಿಗಳೇ ಪ್ರಯೋಜನವಲ್ಲ; ಆನೆ-ಕುದುರೆ-ಕಿರೀಟ-ಪಲ್ಲಕ್ಕಿ-ಅರಮನೆಯ ಮರ್ಯಾದೆಯೇ ಬಹುಮಾನ ವಿಶೇಷವಲ್ಲ. ಇವೆಲ್ಲಕ್ಕೂ ಮೀರಿದ ಬುದ್ಧಿಯ ಎಚ್ಚರಿಕೆಯೇ ಎಚ್ಚರಿಕೆ. ಜಡಜೀವಿಗೆ ಪ್ರಶಾಂತ ಶಿವತ್ವ ದೊರಕೊಂಬುದೇ ಬಹುಮುಖ ಫಲ; ತನ್ನ ತಾನರಿವುದೇ ಸತ್ಫಲ!

'ಸದಸತ್' ಅಭ್ಯಾಸದ ನಿಜಾಂಶವನ್ನು ಕಾಣಬೇಕೆಂದಾಗಲೂ, 'ಲಿಂಗ-ಅಂಗ' ಯೋಗಿಕ ಶೀರ್ಷಿಕೆಯ ವಾಸ್ತವಿಕತೆಯನ್ನು ಸ್ವತಃ ಪರೀಕ್ಷಿಸಿ ನೋಡಬೇಕೆಂದಾಗಲೂ, ದೈವಿಕ ವಿಚಾರ ಕ್ರಾಂತಿರತಿಯ ಗುಟ್ಟನ್ನು ತಿಳಿಯಬೇಕೆಂದಾಗಲೂ ಸಾಧಕನು ಸ್ವತಂತ್ರನಾಗಿಯೇ ಶಿವಪೂಜೆ ಮಾಡಬೇಕು. ಇದು ಶಿವಾಗಮ ವಾಣಿ.

೮) ಹಾಲುಗಲ್ಲದ ಕೂಸಿಗೆ ಚೆನ್ನಾಗಿ ತಿಳುವಳಿಕೆ ಬರುವವರಿವಿಗೂ ಅದರ ಲಿಂಗವನ್ನು ತಾಯಿ ಪೂಜಿಸುತ್ತಿರಬೇಕೆಂಬುದು ಶಾಸ್ತ್ರಸಮ್ಮತಿ. ಏಕೆಂದರೆ—ಇನ್ನೂ ಕುಂದಣಗಟ್ಟದಿರುವ ತೆಂಗಿನ ಸಸಿ, ತನ್ನ ಬೆಳವಣಿಗೆಗೆ ಬೇಕಾಗುವಷ್ಟು ನೀರನ್ನು ತಾನೇ ಭೂಮಿಯಿಂದ ಪಡೆದುಕೊಳ್ಳಲಾರದು. ಅಂಥ ಅವಸರದಲ್ಲಿ—ತೋಟಗಾರನ ಕೈಯ್ಯ ಹೊಯ್ನೀರಿನ ಆಸರೆ ಅಗತ್ಯವಷ್ಟೆ?

ಹೀಗೆಯೇ ಒಬ್ಬ ವ್ಯಕ್ತಿ ಮುಪ್ಪಾಗಿ, ಎಡರಡಸಿ, ಕಾಯಿಲೆಬಿದ್ದು ಬಲಹೀನನಾದಾಗಲೂ ಸ್ಮೃತಿ ತಪ್ಪಿದಾಗಲೂ ಅವನ ಸೇವೆ ಹಾಗೂ ಕ್ರಿಯಾವಸರದ ಹೊಣೆ—ಅವನ ಸಂಬಂಧಿಗರಿಗೆ ಅಥವಾ ಸಮಾಜಕ್ಕೆ ಸೇರಿದುದು. ಆಪದ್ಧರ್ಮಪ್ರಕರಣದ ಮೇರೆಗೆ ಆಗ—ಪೂಜಾ ವಿಷಯಕ್ಕೆ ಪ್ರಾಯಶ್ಚಿತ್ತ ಬೇಕಾದ್ದಿಲ್ಲ. ಮಂಕುಕವಿದವರೂ ದುರ್ಮಾರ್ಗಿಗಳೂ ಶಿವ ಪೂಜೆಯನ್ನು ತಿರಸ್ಕರಿಸಿದರೆ ಅದರಿಂದ ಸಮಾಜಕ್ಕೆ ಯಾವಬಗೆಯ ಅಪವಾದವೂ ಇಲ್ಲ.

೯) ಬುದ್ಧಿಜೀವಿಯು ಶಿವನ ಉಪಾಸನೆಯನ್ನು ಮೂರುರೀತಿಯಲ್ಲಿ ಮಾಡುತ್ತಾನೆ—ದೇಹಮುಖದಿಂದ, ವಾಙ್ಮುಖದಿಂದ ಮತ್ತು ಭಾವಮುಖದಿಂದ. ಇವುಗಳಿಗೆ ಕಾಯಕಕ್ರಿಯೆ, ವಾಚಿಕಕ್ರಿಯೆ, ಮಾನಸಕ್ರಿಯೆ ಎಂದು

ಹೆಸರಿಡಬಹುದು, ಶಾರೀರಕ ತಪಸ್ಸು, ವಾಙ್ಮಯ ತಪಸ್ಸು, ಮಾನಸಿಕ ತಪಸ್ಸು ಎಂದರೂ ಆಯಿತು.

ಸ್ಕಾಂದೇ :

ಮಾನಸೋಪಾಸನಂ ಕುರ್ಯಾದ್ಧೃದಯೇ ದಹರೇಪಿ ವಾ ।
ಪಂಚಾಕ್ಷರ್ಯಾ ಚ ಗಾಯತ್ರ್ಯಾ ರುದ್ರಸೂಕ್ತಾದಿಭಿಸ್ಸದಾ ॥
ವಾಚಕೋಪಾಸನಂ ಪ್ರೋಕ್ತಂ ಧೃತಲಿಂಗೇ ಶಿವಾತ್ಮಕೇ ।
ಪಾಣಿಪೀಠೇ ತಥಾ ವಹ್ನೌ ಸ್ತಂಡಿಲೇ ವಾ ವಿಧಾನತಃ ॥
ಕಾಯಿಕೋಪಾಸನಂ ಕಾರ್ಯಂ ಶ್ರದ್ಧಾಭಕ್ತಿ ಸಮನ್ವಿತಃ ।
ಏವಂ ತ್ರಿಕರಣೈರ್ನಿತ್ಯಮೀಶ್ವರೋಪಾಸನಂ ದ್ವಿಜಃ ॥
ಕುರ್ವನ್ ಮುಕ್ತಿಮವಾಪ್ನೋತಿ ವೈದಿಕೋನಾನ್ಯ ಹೇತುನೇ !

(ಇತಿ, ಶ್ರೀಪತಿಪಂಡಿತೋದಾಹೃತ ಉಪಬೃಂಹಣವಾಕ್ಯ.)

(ಶ್ರೀ. ಭಾ. ಭಾಗ II P. 13)

ಸಾಂಗಾನಂಗಾ ಚ ಯಾ ಸೇವಾ ಸಾ ಭಕ್ತಿರಿತಿ ಕಥ್ಯತೇ ।
ಸಾ ಪುನರ್ಭಿದ್ಯತೇ ತ್ರೇಧಾ ಮನೋವಾಕ್ಕಾಯ ಸಾಧನೈಃ ॥೩೪॥
ಶಿವರೂಪಾದಿ ಚಿಂತಾ ಯಾ ಸಾ ಸೇವಾ ಮಾನಸೀ ಸ್ಮೃತಾ ।
ಜಪಾದಿರ್ವಾಚಿಕೀ ಸೇವಾ ಕರ್ಮ ಪುಜಾದಿ ಕಾಯಿಕೀ ॥೩೫॥
ಸೇಯಂ ತ್ರಿ ಸಾಧನಾ ಸೇವಾ ಶಿವಧರ್ಮಶ್ಚ ಕಥ್ಯತೇ ॥

(ವಾ. ಸಂ. ಉತ್ತರಭಾಗ, ಅಧ್ಯಾಯ ೭.)

ಮನೋವಾಕ್ಕಾಯ ಭೇದೈಶ್ಚ ತ್ರಿಧಾ ತದ್ಭಜನಂ ವಿದುಃ ॥೧೭॥
ಮನೋ ಮಹೇಶಧ್ಯಾನಾಢ್ಯಂ ನಾನ್ಯಧ್ಯಾನರತಂ ಮತಃ ।
ಶಿವನಾಮರತಾ ವಾಣೀ ವಾಙ್ಮತಾ ಚೈವ ನೇತರಾ ॥೧೯॥
ಲಿಂಗೈಃ ಶಿವಸ್ಯ ಚೋದ್ದಿಷ್ಟೈಸ್ತ್ರಿಪುಂಡ್ರಾದಿಭಿರಂಕಿತಃ ।
ಶಿವೋಪಚಾರನಿರತಃ ಕಾಯಃ ಕಾಯೋ ನ ಚೇತರಃ ॥೨೦॥

(ಸಿ. ಶಿ. ಪರಿ–೯.)

ದೇವ ದ್ವಿಜ ಗುರು ಪ್ರಾಜ್ಞ ಪೂಜನಂ ಶೌಚಮಾರ್ಜವಮ್ ।
ಬ್ರಹ್ಮಚರ್ಯಮಹಿಂಸಾ ಚ ಶರೀರಂ ತಪ ಉಚ್ಯತೇ ॥೧೪॥

ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥೧೫॥

ಮನಃಪ್ರಸಾದ ಸ್ಸೌಮ್ಯತ್ವಂ ಮೌನಮಾತ್ಮ ವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥೧೬॥

ಶ್ರದ್ಧಯಾ ಪರಯಾ ತಪ್ತಂ ತಪಸ್ತ ತ್ರಿವಿಧಂ ನರೈಃ ।
ಅಫಲಾ ಕಾಂಕ್ಷಿಭಿರ್ಯುಕ್ತೈ ಸ್ಸಾತ್ತ್ವಿಕಂ ಪರಿಚಕ್ಷತೇ ॥೧೭॥

(ಗೀ. ಅ-೧೭.

ಇದರ ವಿವರಣೆ :

(ಅ) ವಿಶ್ವಚೇತನ ಚಿತ್ಕಲೆಯು ಪರಮತತ್ತ್ವದ ವಾಸ್ತವತೇಜವೆಂಬುದು ಅನುಭವ ಸಿದ್ಧ. ವಿಶ್ವವು ಅಪೂರ್ಣತೆಯಿಂದ ಪೂರ್ಣತೆಯೆಡೆಗೆ ಒಂದು ಕ್ರಮವನ್ನು ಅನುಸರಿಸಿ ಮುಂದುವರಿಯುತ್ತಿರುವುದೆಂಬುದನ್ನು ಪ್ರಕಟೀಕರಿಸಲೋಸುಗ ಅದು ಇಷ್ಟಲಿಂಗರೂಪದಿಂದ ಪ್ರಸನ್ನವಾಗಿದೆ. ಇಂಥ ಮೂಲಭೂತ ಚಿದಚಿದ್ವಿಭೂತಿಯ ಉಪಾಸನೆಯಲ್ಲಿ ಆಸಕ್ತಿವಹಿಸಿದ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಸಂಕಲ್ಪಸಿದ್ಧಿಗಾಗಿ—ಗುರುದೇವತಾ ಭಕ್ತಿ, ವಿದ್ವಜ್ಜನ ಸೇವಾನುರಕ್ತಿ, ಬ್ರಹ್ಮಚರ್ಯ-ಅಹಿಂಸಾ ವ್ರತನಿಷ್ಠಾ ಸಂಪತ್ತಿ ಇವುಗಳನ್ನು ತಳೆದಿರಲೇಬೇಕು. ಶಿವಲಿಂಗ ಪೂಜೆಗಾಗಿ ಸ್ಥೂಲಶರೀರವನ್ನು ಸವೆಸಲೇಬೇಕು. ಇಂಥ ನಿಯಮವನ್ನು ಕಾಯಕ ಕ್ರಿಯೆ (Cult of Worship) ಎಂದು ಶಾಸ್ತ್ರಕಾರರು ಕರೆಯುವರು.

ಹೊತ್ತಾರೆ ಎದ್ದು, ಶುಚಿಯಾಗಿ—ಅಗ್ಗವಣಿ ಪತ್ರೆಯತಂದು, ಅಥವ ಪರಿಚಾರಕರು ಒದಗಿಸಿದ ಶಾಸ್ತ್ರವಿಹಿತ ತ್ರಿಪುಂಡ್ರ ರುದ್ರಾಕ್ಷ ಮೊದಲಾದ ಪೂಜಾದ್ರವ್ಯಗಳನ್ನು-ಸಲಕರಣೆಗಳನ್ನು ಉಪಯೋಗಿಸಿಕೊಂಡು, ಅಭಿಷೇಕ ಮೊದಲಾದ ೮ ವಿಧ ಉಪಚಾರಗಳಿಂದ—೧೬ ವಿಧ ಉಪಚಾರಗಳಿಂದ—೩೬ ವಿಧ ಉಪಚಾರಗಳಿಂದ, ಅಥವ ೬೪ ಬಗೆಯ ಉಪಚಾರಗಳಿಂದ—ರಾಜೋಪಚಾರ, ಮಹೋಪಚಾರಗಳಿಂದ ಇಷ್ಟಲಿಂಗಪೂಜಾ ತತ್ಪರನಾಗುವುದು ಕಾಯಕ ಕ್ರಿಯಾಮಾರ್ಗವೆನಿಸುವುದು.

ತನ್ನನ್ನು ಮತ್ತು ಸಮಾಜವನ್ನು ಹೊಂದಿದ್ದ ಅಪಾರ ಅಶಾಂತಿ ಅಸುಖಗಳು ಶಾಂತಿಯುತ ಮತ್ತು ಘಟನಾತ್ಮಕ ಪೂಜಾಸಾಮರ್ಥ್ಯದಿಂದ ಜಾರಿಹೋಗಿ, ವಿಶ್ವ ಸಮನ್ವಯ ನೆಮ್ಮದಿ ಎಲ್ಲೆಲ್ಲೂ ರಾರಾಜಿಸಬಲ್ಲು ದೆಂಬುದು ನಿಜ. ಅನುಭವ ಪ್ರಸಿದ್ಧ.

ಆ) ಸಾಧಕನು ತನ್ನ ದೇಹವನ್ನು ಪವಿತ್ರಗೊಳಿಸಿಕೊಳ್ಳುವುದಕ್ಕಾಗಿ ಕಾಯಿಕೋಪಾಸನೆಗೆ ಹೇಗೆ ಪ್ರಯತ್ನಿಸಿದನೋ ಹಾಗೆಯೇ, ತನ್ನ ಮನಸ್ಸಿನ ನೈರ್ಮಲ್ಯಕ್ಕಾಗಿ ಮಂತ್ರಯೋಗಿಯೂ—ಧ್ಯಾನಯೋಗಿಯೂ ಆಗ ಬೇಕೆಂಬುದು ಧರ್ಮಜ್ಞರ ಇನ್ನೊಂದು ನಿರ್ಣಯ. ಇಂಥ ಕರ್ತವ್ಯವು ಧಾರ್ಮಿಕ ಭಾಷೆಯಲ್ಲಿ ವಾಚಕ ಕ್ರಿಯೆ (Code of Conduct) ಎಂದೆನಿಸುವುದು.

“ಯಾವನು ತನ್ನ ನಾಲಗೆಯ ಪರಿಶುದ್ಧತೆಯನ್ನು ಕಾಪಾಡಿಕೊಳ್ಳ ಬೇಕೆಂದು ಇಚ್ಛಿಸುವನೋ ಅವನು ಲೋಕವನ್ನು ನಿಂದಿಸಬಾರದು; ಅನೃತ ವಾದಿಯಾಗಬಾರದು; ಪರಾನ್ನಕ್ಕೆಳಸಬಾರದು; ಇತರರಿಗೆ ಪ್ರಿಯವಾಗು ವಂತೆ ಮಾತಾಡಬೇಕು; ತನ್ನ ಮನೆತನದ ಧರ್ಮತತ್ತ್ವವನ್ನು ಬೋಧಿಸುವ ಆಗಮಗಳನ್ನೇ ಅನವರತ ಅಭ್ಯಾಸ ಮಾಡಬೇಕು; ಮಾಡಿಸಬೇಕು”— ಇದು ಆ ನಿರ್ಣಯದ ಸಾರ.

ಶಿವ ಪಂಚಾಕ್ಷರೀ ಮಹಾಮಂತ್ರ ಜಪ, ಶ್ರೀ ರುದ್ರಾಧ್ಯಯನ, ನಿರುಪಾಧಿಕ ಪರತತ್ತ್ವಧ್ಯಾನ—ಇವೇ ಮೊದಲಾದ ವಾಚಿಕಕ್ರಿಯೆಗಳ ಪ್ರಭಾವವು ವೀರಶೈವ ಧರ್ಮ ಸಾಹಿತ್ಯದಲ್ಲಿ ಮೂರ್ತಿವತ್ತಾಗಿ ನಿಂತಿದೆ. ಬಹುಮಟ್ಟಿಗೆ ಸಾಧಕನ ವಚಶ್ಶಕ್ತಿಯ ಮತ್ತು ಸ್ಮೃತಿಶಕ್ತಿಯ ಆಧಾರ ವನ್ನೇ ಅವಧರಿಸಿ ಈ ಕ್ರಿಯೆಯನ್ನು ಸಾಗಿಸಹೇಳಿದೆ.

ಯಾವ ವಾಣಿಯು ಎಡೆಬಿಡದೆ ಶಿವನಾಮವನ್ನು ಉಚ್ಚರಿಸುವುದರಲ್ಲಿ ಆಸಕ್ತವಿರುವದೋ ಅದುವೇ ವಾಗ್ರೂಪ ಭಜನೆಯು, ಅದು ತನ್ನ ಪ್ರಾಣದ ನೆಲೆ ಕಲೆಗಳನ್ನೂ—ಇಷ್ಟಲಿಂಗದ ಸೂಕ್ಷ್ಮಸ್ವರೂಪ ವಿಶೇಷವನ್ನೂ ಒಗ್ಗೂಡಿಸಿ ನೋಡಲು ತಕ್ಕ ಸಾಧನ. ಪರಬ್ರಹ್ಮದ ದಿವ್ಯಸ್ವರೂಪಾದಿ ಗಳನ್ನು ಮನಸ್ಸಿನಲ್ಲಿ ಧ್ಯಾನಿಸಿ—ಅನುಸಂಧಾನ ಮಾಡುತ್ತಾ ಮುನ್ನಡೆ

ದಂತೆಲ್ಲಾ, ಜಗದ ಉಗವಾದಿ ಸಾಂಪ್ರತ ಪರಿಶೀಲನಾ ಜ್ಞಾನವೂ ಅತಿ ಸರಳವಾಗಿ ಆಗಿಬಿಡುತ್ತದೆ—ಬರಬರುತ್ತಾ.

ಮಾತಿನ ಮೇಲೆ ಹಿಡಿತ, 'ಪ್ರಮಾಣ–ಪ್ರಮೇಯ–ಪ್ರಮಾ ಮೇರೆಯನ್ನು ದಾಟದಿರುವುದು, ಶಿವಸಿದ್ಧಾಂತದ ಸಕ್ರಮ ಅಧ್ಯಯನ—ಅಧ್ಯಾಪನ, ಸಹಜಾಚರಣೆ—ಸಂಬಂಧಾಚರಣೆ,—ಇವೆಲ್ಲಾ ವಾಚಿಕ ಕ್ರಿಯೆಯ ಬಾಹ್ಯದ ರೂಪರೇಖೆಗಳನ್ನು ಅರಿಯಲು ಅನುಕೂಲಮಾಡಿ ಕೊಡುವುವು. ಇನ್ನು, 'ಮಂತ್ರವಿದ್ಯೆಯು ಪರಬ್ರಹ್ಮದೊಡನೆ ಆತ್ಮನನ್ನು ಎರಕಗೊಳಿಸುವ ಪರಮಸಾಧನವಾಗಿದೆ'—

ಪ್ರಣವೋ ಧನುಃ ಶರೋಽಹ್ಯಾತ್ಮಾ
ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ
ಶರವತ್ತನ್ಮಯೋ ಭವೇತ್ ॥

(ಮುಂ.ಉ. ೨-೨-೪.

ಎಂಬುದರ ಒಳಗುಟ್ಟನ್ನು ಕಣ್ಣಾರ ಕಾಣಬೇಕೆಂದಿದ್ದರೆ ಸದ್ಗುರುವಿನ ಕೃಪೆಯೇ ಬೇಕು. 'ಕಾಣುತಿದೆ ಪರಬಿಂದು ಶಾಂಭವಿಯ ಕೋಣೆಯೊಳು' ಎಂದು, ಆ ಕಡೆಗೆ ಬೆರಳು ತೋರಿಸಿ-ಮುಟ್ಟಿ ತೋರಿಸಿ, ಶಿಷ್ಯನ ದಿಗ್ವಿಜಯ ವನ್ನು ಅವನು ನಿರೀಕ್ಷಿಸುತ್ತಾನೆ. 'ಸೋಽಹಂ ಹಂಸಃ' ಎಂಬ ಹಂಸಮಂತ್ರ ಗಳ ವ್ಯಂಜನಗಳನ್ನು ಲೋಪಗೊಳಿಸುವುದರಿಂದ ಉಂಟಾಗುವ 'ಓಂ' ಎಂಬ ಪ್ರಣವದ ಧ್ವನಿಯು ದೇಹ, ಇಂದ್ರಿಯ, ಮನಸ್ಸು-ಇಲ್ಲೆಲ್ಲಾ ಸುಮಧುರವಾಗಿ ಕೇಳಿಬರುತ್ತಿರಲು–ತಾನು ಆ ನಾದಲಿಂಗಾನುಭವದಲ್ಲಿ ನಿರತನಾಗಿಬಿಡುತ್ತಾನೆ, ಸಾಧಕನು. ನಾದ-ಬಿಂದು-ಕಲಾಬ್ರಹ್ಮ ಪರಿಶ್ರಮ ದಿಂದ "ಬ್ರಹ್ಮಾಂಡವು ಪಿಂಡಾಂಡದೊಳಗೆ" ಎಂಬ ತತ್ತ್ವ ದೃಷ್ಟಾಂತಕ್ಕೆ ಬರುತ್ತದೆ; ವ್ಯಕ್ತಿಯ ಮತ್ತು ಜಗತ್ತಿನ ಏಕತೆಯೂ ದೃಷ್ಟಾಂತವಾಗು ತ್ತದೆ.

ಇ) ಶುದ್ಧಾಂತಃಕರಣನಾದಬಳಿಕ, ತನ್ನ ಭಾವದ ಬಂಧುರತೆಗಾಗಿ ಹಾಗೂ ಮಾನವೀಯ ಕುಟುಂಬದ ಭದ್ರತೆಗೋಸ್ಕರ ಮಾನವನು–ಸೌಮ್ಯ ಸ್ವಭಾವ, ಮೌನ, ಆತ್ಮನಿಗ್ರಹ ಇವುಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಡ

ಬೇಕಾಗುತ್ತದೆ; ಆಸೆಯನ್ನು ಮೀರಿದ ಕರ್ಮಕ್ಕೇನೇ ಸ್ಥಾನವೀಯಬೇಕಾಗುತ್ತದೆ. ಸೌರಮಂಡಲದಲ್ಲಿ ಸೂರ್ಯನೊಬ್ಬನೇ ಸ್ವಯಂ ಪ್ರಜ್ವಲಿತನು; ಉಳಿದೆಲ್ಲ ಗ್ರಹರು ಆತನ ಪ್ರಭೆಯಲ್ಲಿ ನಿಮೀಲಿತರು–ಎಂದಹಾಗೆ, ಸತ್ಸಾಧಕನ ಸುವಿಶಾಲ ನಿರ್ಭಾವ ಜಲಧಿಯಲ್ಲಿ–ಅವನ ಮನದ ವಿವಿಧ ದುರ್ಭಾವಲಹರಿ ಮತ್ತು ವ್ಯಕ್ತ ಪ್ರಪಂಚ ಭೋಗದ ಸಾಮಾನ್ಯ ಸ್ಥಿತಿ, ಇಂಥ ಅಶುದ್ಧ ಮಾಯಾ ವರ್ತನೆಯೆಲ್ಲ ಅಡಗಿಹೋಗಿ, ನೀರವನಿಸ್ತರಂಗ ನಿಜದ ಅರಿವೇ ಅರಿವಾಗಿ–ವಿಶ್ವದತುಂಬಾ ಬೆಳಗಹತ್ತುತ್ತದೆ.

ದೃಕ್–ದೃಶ್ಯ ಭೌತಿಕ ಜಗವೆಲ್ಲವೂ ಕ್ಷಣಿಕ ಆಡಂಬರ ಅವಗುಣಗಳಿಂದ ಬೆರೆತ ಮತ್ತು ಪರಪ್ರಕಾಶಿತ ಶಕ್ತಿಮಾತ್ರವೆಂದೂ, ಮುನ್ನ ಶತಕೋಟಿ ರಾಯರಾಳಿದ ಈ ನೆಲ ನಿಜವಾಗಿಯೂ ಪ್ರಳಯದ ಕಸವೇ ಆಗಿರುತ್ತದೆಂದೂ ತಿಳಿದುಕೊಂಡಮೇಲೆ, ಅದರ ಆಶ್ರಯದ ಕೊಂಕು ಡೊಂಕು ಬಾಳ್ವಿಕೆಗೆ ಬಾಯ್‌ನೀರು ಕರೆಯದಲೆ–ದ್ರವ್ಯಲೋಭ, ಸ್ವಾರ್ಥಮನೋಭಾವ, ದುರ್ಬಲರನ್ನು ಅಲಕ್ಷಿಸುವುದು, ಅನ್ಯರ ಅಭ್ಯುದಯಕ್ಕೆ ಕರುಬುವುದು ಮೊದಲಾದ ಮಾನಸಿಕ ಪಾಪಗಳನ್ನು ಆಚರಿಸಲೊಲ್ಲದಲೆ; ಬಹುವಿಧ ದೋಷ ವಿಮೋಚನೆಗಾಗಿ–ಸರಿಯಾದ ಶಿಸ್ತು, ಸಚ್ಚಾರಿತ್ರ್ಯದ ಬೆಳವಣಿಗೆ, ರಾಷ್ಟ್ರದ ಐಕ್ಯತಾ ಪ್ರಜ್ಞೆ, ನಿರಾಶಾಜೀವನ, ನಿಸ್ವಾರ್ಥ ಮನೋಭಾವಾದಿ ಸದ್ವ್ರತಾಚಾರನಿರತನಾಗಿ–ಅತಿ ಮಾನಸರಂಗದ ಸ್ವಯಂಪ್ರಕಾಶದೊಳು ಕ್ರಮೇಣ ಲೀನನಾಗುತ್ತಾ ಹೋಗುತ್ತಾನೆ ತೊಟ್ಟುಮಾಗಿದ ಹಣ್ಣಿನಂತೆ ಆಗುತ್ತದೆ, ಸಾಧಕನ ಉತ್ತರಗತಿ.

ಶುದ್ಧ ಮಾಯಾಸ್ಫೂರ್ತಿ, ಸದ್ರೂಪ, ಅನಾದಿ, ಚಿರಂತನ ಸೃಷ್ಟ್ಯಾದಿ ಅನಂತ ಪರಿಣಾಮ ವಿರಹಿತ ಪರಬ್ರಹ್ಮದ ಸ್ವಯಂ ಸ್ಥಿತಿಯಲ್ಲಿ ತಾನು ಸ್ಥಿರವಾಗಿ ನಿಲ್ಲಬೇಕಾದರೆ–ಶುದ್ಧನಾಗಿಯೇ ನಡೆಯಬೇಕು; ಶುದ್ಧವಾಗಿಯೇ ನುಡಿಯಬೇಕು. ವಿಶ್ವದಲ್ಲಿ ದೃಕ್‌ಪ್ರತ್ಯಕ್ಷವಾದ ಎಲ್ಲ ವಸ್ತುಗಳಲ್ಲೂ ಶಿವಸ್ವರೂಪವನ್ನೇ ಭಾವಿಸಬೇಕು. ಪರಬ್ರಹ್ಮವನ್ನು ತನ್ನ ಪ್ರಾಣದಲ್ಲಿ, ಪ್ರಾಣವನ್ನು ಭಾವದಲ್ಲಿ, ಪ್ರಾಣ-ಭಾವ ಸಮರಸವನ್ನು ಕರಸ್ಥಲದ ಶಿವಲಿಂಗದಲ್ಲಿ, ಆ ಶಿವಲಿಂಗವನ್ನು ಆಧ್ಯಾತ್ಮಿಕ ಪರಿಪೂರ್ಣದಲ್ಲಿ ಕಾಣಬೇಕು. ಆ ಪರಿಪೂರ್ಣವೇ ಚಿದ್ವಸ್ತುವು–ಚಿದ್ವಸ್ತುವೇ ತಾನು,–ಎಂಬ ನಿರ್ಣಯಸಾಧಕನ

ತ್ರಿಕರಣಗಳಲ್ಲಿ ತೋರಿಬಂದು ನಿರ್ಣಯವಾಗಬೇಕು. ಮಾತಿನ ಮಥನದಲ್ಲಲ್ಲ–ಕೃತಿಯಿಂದ.

ಮೂಲ ಪರಶಿವತತ್ತ್ವದ ಕಾರ್ಯಾಕಾರ್ಯ ಸ್ಮರಣ, ಕರ್ತೃ ಪರಮೇಶ್ವರನ ಪ್ರಾಂಜಲತಮ ಕರ್ಮಸೌಭಾಗ್ಯಚಿಂತನ, ಶಿವಾತ್ಮ ವಿಜ್ಞಾನವ್ಯಾಯೋಗ, ಬ್ರಹ್ಮರ್ಧಸ್ವರ್ಗಾಸ್ಪದ 'ಸೇವಾ-ಅರ್ಪಣ-ಆಧಾನ ಕ್ರಿಯಾವಿವೇಚನೆ, ಇವೆಲ್ಲವೂ ಸಾಧಕನ ಮಾನಸಕ್ರಿಯೆಯನ್ನು (Creed of Philosophy) ಅನುಸರಿಸಿಯೇ ನಡೆಯುತ್ತವಾಗಿ; ಅಂಥ ಮಾನಸಕ್ರಿಯೆಯನ್ನು ಉತ್ತಮಗೊಳಿಸಿಕೊಳ್ಳಲು–ಸಾಧಕನು ಶ್ರವಣ, ಮನನಾದಿಪೂರ್ವಪ್ರಯೋಗಗಳನ್ನೇ ಮುಖ್ಯವಾಗಿ ಬಲಪಡಿಸಿಕೊಳ್ಳಬೇಕು. ಅನಂತರಶಿವಾನುಭವ ಸಾಧನೆ ಮತ್ತು ಭಾವೈಕ್ಯ ಪರಿಣಾಮ, ಸತ್ಕ್ರಿಯಾಚರಣೆಯಿಂದ ಪರಿಷ್ಕೃತವಾದ ಮನಸ್ಸಿಗೇನೇ, ಶಿವಾತ್ಮಾನು ಸಂಧಾನ ಜ್ಞಾನವನ್ನು ಹೊಂದಲು ಅಧಿಕಾರವಿದೆ ಎಂಬುದು ಇದರ ತಾತ್ಪರ್ಯ.

ಮನಸ್ಸು ಅನವರತ ಶಿವಧ್ಯಾನದಲ್ಲಿ ಇರುವಿಕೆ, ಶಿವನಿಗಿಂತಲೂ ಅನ್ಯವಾದ ವಸ್ತುವನ್ನು ಧ್ಯಾನಿಸದಲೇ ಇರುವಿಕೆ–ಈ ಬಗೆಯ ಮಾನಸಿಕ ಕಾರ್ಯಶಕ್ತಿಯು ಶಿವಯೋಗಿಯ ಷಟ್‌ಸ್ಥಲ ತಪಸ್ಸಾಮ್ರಾಜ್ಯದ ಭದ್ರತೆಗೆ ಅಗತ್ಯ, ಅದೊಂದೂ ಇಲ್ಲವೆಂದರೆ–ಅಲ್ಲಿ ಮನಶ್ಶಾಂತಿಯಿಲ್ಲ, ಆತ್ಮಸ್ಫೂರ್ತಿಯಿಲ್ಲ, ಇಂದ್ರಿಯಾತೀತ ವಸ್ತುಪ್ರಜ್ಞೆಯ ಉದಯವಿಲ್ಲ, ದುರ್ಗುಣದ–ದುರಭಿಮಾನದ ಅಳಿವು ಮೊದಲೇ ಇಲ್ಲ. ಎಂದಮೇಲೆ–ಬರಿಯ ಬೊಮ್ಮದ ಟೊಳ್ಳುಕೂಗು ಇನ್ನೇಕೆ?

ಮಾನಸಕ್ರಿಯೆಗಳು ಸ್ಪಷ್ಟವಾಗಿ ನಡೆಯುತ್ತಿರಬೇಕಾದರೆ–ಚಿತ್ತೈಕಾಗ್ರತೆ, ಚಿಂತನಾ ಸಾಮರ್ಥ್ಯ–ಈ ಎರಡು ಅಂಗಗಳೂ ಚೆನ್ನಾಗಿರಲೇಬೇಕು. ವಿನಾ ಜೀವನದ ಮಾಯಾರಂಗದ ವಿಷಪ್ರಪಂಚದೊಡನೆ ಹೋರಾಡಿ ಸಾಧಕನು ಗೆಲ್ಲಲಾರ ತನ್ನ ಜೀವಮಾನದ ಆದಿಯಿಂದ ಕೊನೆಯತನಕ ಶಿವಸ್ಥಲದಲ್ಲಿ ನಿಂತು ಷಟ್‌ಸ್ಥಲ ಧರ್ಮವನ್ನು ಆಚರಿಸಲಾರ, ನೆಮ್ಮದಿ ಕಾಣಲಾರ.

ಈ ಹಿಂದೆ ತಿಳಿಸಿದಂತೆ, ೧) ಕಾಯಕಕ್ರಿಯೆ, ೨) ವಾಚಿಕಕ್ರಿಯೆ, ೩) ಮಾನಸಕ್ರಿಯೆ–ಈ ಮೂರರ ಕ್ರಮಬದ್ಧ ಆಚರಣೆಯಿಂದ ಆದ ಅರಿವು;

“ಸಾಕಾರವಿಡಿದೇ ನಿರಾಕಾರದ ಉಪಾಸನೆ ಮಾಡಬೇಕು. ಮೈ-ಮಾತು-ಮನಶುದ್ಧವಾಗಿ ಬಾಳು ಬಾಳಬೇಕು. ಅವರಿವರೆನ್ನದೆ ಮನವ ಕುಲವೆಲ್ಲವೂ ವಿಶ್ವಶಕ್ತಿಯ ಉಪಾಸಕರಾಗಬೇಕು. ಒಂದೇ ಆತ್ಮ-ಒಂದೇ ಮನ-ಒಂದೇ ಭಾವ ಪ್ರಜ್ಞೆಬೆಳೆದು ವಿಶ್ವಶಾಂತಿ ದೊರಕೊಳ್ಳಬೇಕು. ಎನ್ನುವ ಶಿವಶಾಸನವನ್ನು ಅನುಸರಿಸಿದುದು. ಇದೇ ತತ್ತ್ವದ ಮೇಲೆ, ವೀರ ಶೈವರು ಇಷ್ಟಲಿಂಗೋಪಾಸನೆಗೆ ಪ್ರಥಮಸ್ಥಾನ ಕೊಟ್ಟರು.

ವಿಜ್ಞಾನ ಕಲರು, ಪ್ರಳಯ ಕಲರು, ಸಕಲರು—ಎಂಬ ತ್ರಿವಿಧ ಜೀವರುಗಳ ಪ್ರಭುಶಕ್ತಿಯಾದ ಪರಮ ಶಿವಸ್ಥಲದ ಮಹಾನ್ ಲಕ್ಷಣವನ್ನು ಅರಿಯಲು ಇಷ್ಟಲಿಂಗಭಕ್ತಿ (ಶಿವಪೂಜೆ), ಅದರ ರೂಪಾರೂಪ-ಕೃತ್ಯಾಕೃತ್ಯ ಯಥಾರ್ಥವನ್ನು ಕಾಣಲು ಪ್ರಾಣಲಿಂಗದ ಭಕ್ತಿ (ಶಿವಮಂತ್ರಜಪ), ಅದರ ಗರ್ಭದಲ್ಲಿ ಅನನ್ಯವಾಗಿ ಸಾಧಕಜೀವಿ ಸೇರ್ಪಡೆಯಾಗಲು ಭಾವಲಿಂಗದ ಭಕ್ತಿ (ಪರಮಾತ್ಮಾನುಸಂಧಾನ, ಧ್ಯಾನ-ಮೌನ) ಇವು ಬೇಕೇಬೇಕೆಂದು ಶಿವಜ್ಞಾನಿಗಳು ನಿರೂಪಿಸಿದರು. ಎಲ್ಲವೂ ಷಟ್‌ಸ್ಥಲಕ್ಕೆ ಅನುಸಾರವಾಗಿ.

ಅನುಭವ ಪರಿಪೂರ್ಣ ಶಿವಭಕ್ತಿ-ಶಿವಜ್ಞಾನ-ಶಿವಕ್ರಿಯಾ ಸಮುಚ್ಚಯಾರ್ಥವನ್ನು ಅಥವ ತ್ಯಾಗ-ಭೋಗ-ಯೋಗ ಸಮನ್ವಯ ವೈಶಿಷ್ಟ್ಯವನ್ನು ಇಲ್ಲವೆ ಕಾಯಕ-ವಾಚಕ-ಮಾನಸಿಕ ಕ್ರಿಯಾಪದ್ಧತಿಯನ್ನು ಪ್ರಧಾನವಾಗಿ ಗ್ರಹಿಸಿ; ಭಕ್ತಸ್ಥಲವನ್ನು ಮೊದಲುಮಾಡಿಕೊಂಡು ಐಕ್ಯಸ್ಥಲದವರಿವಿಗಿನ ಅಂಗತತ್ತ್ವವನ್ನು ಒಪ್ಪಿ-ಅಪ್ಪಿ, ಶುದ್ಧ ವಿದ್ಯಾ ಪ್ರಮಾತೃರೂಪವನ್ನು ಉಪಾಸನೆ ಮಾಡಬೇಕು. ಅದುವೇ ಕ್ರಮಬದ್ಧ ಶಿವೋಪಾಸನೆ. ಶರಣತತ್ತ್ವವು ಲಿಂಗತತ್ತ್ವಕ್ಕೆ ಅಂಗವಾಗಿಯೂ, ಶರಣನಿಗೆ ಲಿಂಗತತ್ತ್ವ ಪ್ರಾಣವಾಗಿಯೂ ಇರುವುದೆಂಬುದನ್ನು ಕೃತಿಯಿಂದ ತೋರಿಸಿಕೊಡುವುದೇ ಶಿವೋಪಾಸನೆಯ ಸ್ವಯಂಸಿದ್ಧಿಯು. ಸದ್ಗುರುವಿನ ಕಟಾಕ್ಷದಿಂದಾಗಿ ಸಾಧಕನ ಜ್ಞಾನಶಕ್ತಿಯ ಸಂಕೋಚತೆ ಪರಿಹೃತವಾಗಲು, ಆಗಲಂತೂ—

ಅಹಂ ಪರಶಿವ ವಿಮರ್ಶಾಭಿನ್ನೋಽಸ್ಮಿ

ಎಂಬ ಪ್ರತ್ಯಭಿಜ್ಞೆ ಸ್ಥಿರವಾಗಿಯೇ ಆಗುತ್ತದೆ. ಇದು ಸುಪ್ರಸಿದ್ಧ.

ಏವಂ ಚ ಲಿಂಗತತ್ತ್ವಸ್ಯ ಶರಣತ್ತ್ವಮಂಗಂ, ಶರಣಸ್ಯ ಲಿಂಗಂ

ಪ್ರಾಣಃ । ಅನಯೋರ್ಬೀಜ ವೃಕ್ಷನ್ಯಾಯೇನಾನ್ಯೋನ್ಯಸಾಪುರಸ್ಯಮೇವ ॥ ಏವಂ ಶರಣ ಏವ ಲಿಂಗ । ಲಿಂಗಮೇವ ಶರಣ ಇತಿ । ಏವಂವಿಧಶರಣಸ್ಯ ಸ್ವವಿಮರ್ಶ ಗುರುಕಟಾಕ್ಷಸಂಪ್ರಾಪ್ತ ಸ್ವಾತ್ಮಪ್ರತ್ಯಭಿಜ್ಞಾನಶಾಲಿತ್ವಾತ್, ಏತನ್ಮನ ಏವ ಪ್ರಣವರೂಪಮಹಾಲಿಂಗಂ ಬಾಹ್ಯೇಂದ್ರಿಯ ಲಕ್ಷಣಶ್ರೋತ್ರಾದೇಕೈಕೇಂದ್ರಿಯ ವಿಷಯ ಶಬ್ದಾದಿ ಸಕಲ ಪದಾರ್ಥಗ್ರಹಣ ಸಾಧನತ್ವೇನಾಂತರ್ಮುಖತ್ವಾತ್, ..........................................

(ವೀ-ಆ. ವಾದಖಂಡ. ಪ್ರಕರಣ ೨೪.

ಶಿವೋಽಸ್ಮಿ ಸಾಧನಾವಿಷ್ಟಃ ಶಿವೋಽಹಂ ಯಾಜಕೋಽಪ್ಯಹಂ ।
ಶಿವಂ ಯಾಮಿ ಶಿವೋಯಾಮಿ ಶಿವೇನ ಶಿವಸಾಧನಃ ॥೯೮॥
ಭಿನ್ನೋಽಪ್ಯಭಿನ್ನ ಏವಾಸ್ಮಿ ಶಿವ ಇತ್ಥಂ ವಿಚೇಷ್ಟನಮ್ ।
ಶಿವೋ ಭೋಕ್ತಾ ಶಿವೋ ಭೋಜ್ಯಂ ಶಿವೇಷು ಶಿವಸಾಧನಃ ॥
ಶಿವಃ ಕರ್ತಾ ಶಿವಃ ಕರ್ಮ ಶಿವೋಽಸ್ಮಿ ಕರಣಾತ್ಮಕಃ ೯೯।

(ಶಿ.ದೃ. ಆನ್ಹಿಕ .೭

ಬಾಹ್ಯಾಭ್ಯಂತರ ಶುದ್ಧಿದ್ವಾರಾ ಶಿವಧರ್ಮದ ಉದ್ಧಾರ; ವ್ಯಕ್ತಿಯ ಉದ್ಧಾರ, ಲೋಕದ ಉದ್ಧಾರವೂ ಕೂಡಿಯೇ ಆಗುತ್ತದೆಂಬುದು ಇದರಿಂದ ಸ್ಪಷ್ಟವಾದಂತಾಯಿತು. ವ್ಯಕ್ತಿಯ ಜೀವನ ಚಿತ್ರಣ ಹಲವು ದ್ವಂದ್ವಗಳಿಗೆ ಅನುಗತವಾದಾಗ, ಮಾಡಬಾರದುದನ್ನು ಮಾಡಹೊರಟಾಗ, ಅನ್ನಬಾರದುದನ್ನು ಅನ್ನಲು ಹೊರಟಾಗ—ಅಂಥ ಅಕಾರ್ಯದ ದೆಸೆಯಿಂದ ತನ್ನತನದ ಕೇಡು, ಸಮಾಜದ ಕೇಡು, ವಿಶ್ವಶಾಂತಿ ಭಂಗ, ಸರ್ವಾನರ್ಥ ಕಟ್ಟಿಟ್ಟದ್ದು. ಇನ್ನು ಪರಿಭವಭಯವೆಂಬುದು ಮೂಢಜೀವನಿಗೆ ತಪ್ಪಿದ್ದೇ ಅಲ್ಲ.

ಧರ್ಮದ ದುರ್ಲಕ್ಷದಿಂದ ಹಾಗೂ ನೈತಿಕ-ಆಧ್ಯಾತ್ಮಿಕ ವಿಚಾರ ಶೂನ್ಯತೆಯಿಂದ—ರಾಷ್ಟ್ರಘಾತಕ, ಸಮಾಜಘಾತಕ ರೂಢಿಗಳ ಬೆಳವಣಿಗೆ ಯಾಗುವುದೇ ಹೊರತು—ಎಲ್ಲೆಲ್ಲೂ ಪ್ರಶಾಂತ ಪ್ರಗತಿಯಿಲ್ಲ; ಸತ್ಪರಿಣಾಮವಿಲ್ಲ. ಪರಧರ್ಮದ ಅಸಹಿಷ್ಣುತೆ—ಪಂಥ ಪಂಥಗಳ ವೈಷಮ್ಯದ ಉಲ್ಬಣಸ್ಥಿತಿಯಿಂದಲೂ ಹೀಗೆಯೇ ಲೋಕಕಂಟಕ ಆಂದೋಳನ; ವ್ಯಕ್ತಿ ವ್ಯಕ್ತಿಗಳ, ಗುಂಪು ಗುಂಪುಗಳ ರಾಷ್ಟ್ರ ರಾಷ್ಟ್ರಗಳ ದಮನ ತಪ್ಪಿದ್ದಲ್ಲ. ಎಲ್ಲೆಲ್ಲೂ ಹಾಹಾಕಾರ ಅಶಾಂತಿ!

೧೦) ವೀರಶೈವರ ಅತಿವರ್ಣಾಶ್ರಮ ಪದ್ಧತಿಯ ಪ್ರಕಾರ ಪತಿಧರ್ಮಾಚರಣೆಯ ಅನಂತರವೇ ಬ್ರಹ್ಮಮೀಮಾಂಸೆಗೆ ಆರಂಭವಾಗುತ್ತದೆ. ಅಲ್ಲಿ ಇಷ್ಟಲಿಂಗಾರ್ಚನೆಯೇ ಪತಿಧರ್ಮವು. ಸ್ವಸ್ವರೂಪದ ಅರಿವೇ ಬ್ರಹ್ಮ ಮೀಮಾಂಸೆಯು.

ಉಪಾಸಕ ಸ್ವಭಾವ ಯಾವ ಮಟ್ಟದಲ್ಲಿರುತ್ತದೆಯೋ ಅದಕ್ಕನುಸರಿಸಿ ವಿಶ್ವಚೈತನ್ಯ ಪ್ರಕ್ರಿಯೆಯ ಪ್ರಸನ್ನತೆ ಆಗುತ್ತದೆ. ಎಂದರೆ—ಮೂಲತಃ ಗೋಲಾಕಾರವೇ ಆಗಿರುವ ಪರಬ್ರಹ್ಮವು ಸ್ವಭಾವತಃ ತನ್ನ ಇಚ್ಛಾ-ಜ್ಞಾನ-ಕ್ರಿಯಾಶಕ್ತಿಯ ಉತ್ಕ್ರಾಂತಿಗನುಗುಣವಾಗಿ ಚರಾಚರ ಪಕೃತಿ ರೂಪದಿಂದ ತೋರ್ಪಡಿಗೆ ಬರುತ್ತದೆ. ಆಗ, ಕೆಲವೊಂದು ನಿರ್ದಿಷ್ಟ ಅಂತಸ್ತುಗಳಿಗೆ ತಕ್ಕಂತೆಯೇ ಅದರ ಅಭಿವೃದ್ಧಿ ಮೊದಲಾಗಿ ವಿವಿಧ ಕಾರ್ಯಕಲಾಪ. ವಿಶ್ವದ ನಾನಾವರ್ಗದ ಜೀವಿಗಳ ಮೂಲಕವೇ ಅದರ ಪ್ರಕ್ರಿಯೆ. ಧ್ವನಿಕ್ರಿಯೆ, ರೇಡಿಯೋ ತರಂಗ, ಬೆಳಕಿನ ತರಂಗ ಇವುಗಳ ವ್ಯಾಪ್ಯ ವ್ಯಾಪಕ ವರ್ತನೆಯಿದ್ದಂತೆ.

ಇಂಥ ಶಿವಧರ್ಮ ಮೀಮಾಂಸೆ :— ಸ್ಥೂಲ ಶರೀರದಿಂದ ಇಷ್ಟ ಲಿಂಗಾರ್ಚನೆ, ಸೂಕ್ಷ್ಮ ಶರೀರದಿಂದ ಪ್ರಾಣ ಲಿಂಗಾರ್ಚನೆ, ಸ್ಥೂಲ-ಸೂಕ್ಷ್ಮ ಶರೀರದ್ವಯ ಕಾರಣತ್ವೇನ ಕಾರಣ ಶರೀರದಿಂದ ಭಾವಲಿಂಗ ಪೂಜೆ ಆಗಬೇಕೆಂಬ ನಿರ್ಣಯದಲ್ಲಿ ಹುದುಗಿದೆ. ಕ್ರಮವರಿತು ಲಿಂಗ ಪೂಜೆ ಮಾಡುವುದರಿಂದ ವಿಶ್ವಚೈತನ್ಯದ ನಾನಾ ಬಗೆಯ ಅರಿವು ಅನುಭವಕ್ಕೆ ಬರುತ್ತದೆ. ಅಲ್ಲೆಲ್ಲಾ ಸಾಧಕ ಜೀವಿಯ ಮತ್ತು ವಿಶ್ವದ ಏಕ-ಮುಖ ಜೀವನದ ಹಾಗೂ ಏಕ ರೂಪ ಜೀವನೋನ್ನತಿಯ ಆಕಾಂಕ್ಷೆಯೇ ಗರಿಗಟ್ಟಿ ನಿಂತಿದ್ದು,—ಕತ್ತಲಲ್ಲಿ ಬಹುದೂರದಿಂದ ನಡೆದು ಬಂದ ಜೀವನಿಗೆ ಇದೀಗ ಆ ಆಕಾಂಕ್ಷಾ ಸಿದ್ಧಿಯ ಮೂಲಕವೆ ಬೆಳಕು ಕಾಣ ಬರುತ್ತದೆ. ಆಶಾದೀಪ ಉರಿಯುತ್ತಾ ಉರಿಯುತ್ತಾ ಶಿವದ ಸಂಪೂರ್ಣ ಅನುಭವವೇ ದೃಷ್ಟಾಂತಕ್ಕೆ ಬರುತ್ತದೆ; ದಕ್ಕ ಬೇಕಾಗಿದ್ದ ಸಂತೃಪ್ತಿ ದಕ್ಕುತ್ತದೆ. ಗುರು ಶಿಷ್ಯರ ಅನ್ಯೋನ್ಯ ಅನುಭವ ಜನ್ಯವಾದ ಅದುವೇ ಶಿವಾನುಭವವು.

ಸಾಧಕ ಚಿತ್ತ ಪರಿಪಾಕಾನುಗುಣ್ಯವಾಗಿ ಆರು ರೀತಿಯ ಲಿಂಗಗಳ ಆರಾಧನ–ಅನು ಸಂಧಾನ ಕ್ರಮಗಳನ್ನೂ, ನವಲಿಂಗ ಸ್ಥಿತಿ-ಗತಿಗಳನ್ನೂ

ಸಾಂಪ್ರದಾಯಿಕ ಗುರುವು ವಿಮರ್ಶೆ ಮಾಡುತ್ತಾನೆ. ಹೃತ್ ಕೇಂದ್ರದ್ವ ಮನಸ್ಸಂಪುಟದ ಮತ್ತು ಜೀವ ಪರಿಘದ ಉದಾಹರಣೆ ಕೊಟ್ಟು-ವಿಶ್ವಾತೀತ ಪರ ಭುವನದ ಪರಿಚಯ ಮಾಡಿಸುತ್ತಾನೆ. ಇಡೀ ಬ್ರಹ್ಮಾಂಡವು ಕಣ್ಣ ಕಪ್ಪಿನಲ್ಲಿ ಸುಪ್ತವಾಗಿರುವ ಅಂಶವನ್ನು ವಿಶದೀಕರಿಸುತ್ತಾನೆ. ಸ್ವಮುಕವನ್ನು-ಸ್ವಧರ್ಮವನ್ನು ಪ್ರತ್ಯಕ್ಷಾದಿ ಪ್ರಮಾಣ ಪೂರ್ವಕ ಸಿದ್ಧಾಂತ ಮಾಡುತ್ತಾನೆ. ಅದಕ್ಕೆಲ್ಲಾ ಅವನ ಸದ್ವರ್ತನೆಯೇ ಪ್ರಬಲವಾದ ಸಾಕ್ಷಿಯು.

ಜೀವ ಮುಖ್ಯ ಪ್ರಾಣ ಲಿಂಗಾನ್ನೇತಿ ಚೆನ್ನೋಪಾಸಾ
ತ್ರೈ ವಿದ್ಯಾದಾಶ್ರಿತತ್ವಾದಿಹ ತದ್ಯೋಗಾತ್ ।

(ಬ.ಸೂ. ೧/೧/೩೧)

ಮಾಯಾ ವಿಕಲ್ಪಜಂ ವಿಶ್ವಂ ಹೇಯಂ ಸಂಚಿಂತ್ಯ ನಿತ್ಯಶಃ ।
ಚಿದಾನಂದ ಮಯೇ ಲಿಂಗೇ ವಿಲೀನಃ ಪ್ರಾಣ ಲಿಂಗವಾನ್ ॥೧೧॥
ಸ ತ್ವಾತ್ರ ಪ್ರಾಣಮಯಿಾ ಶಕ್ತಿಃ ಸದ್ರೂಪಂ ಪ್ರಾಣಲಿಂಗಕಂ ।
ತತ್ಸಾಮರಸ್ಯ ವಿಜ್ಞಾನಾತ್ ಪ್ರಾಣ ಲಿಂಗೀತಿ ಕಥ್ಯತೇ ।೧೨

(ಸಿ.ಶಿ. ಪರಿ ೧೨.)

ಇವೆಲ್ಲವೂ ಶಿವಧರ್ಮ ಸೂಕ್ಷ್ಮವನ್ನು ತೋರಿಸುತ್ತಿರುವ ಸೂತ್ರಗಳು. ಮೂಲ ಬ್ರಹ್ಮದ ಮೂರ್ತ-ಅಮೂರ್ತ-ಮೂರ್ತಾಮೂರ್ತ ತ್ರಿವಿಧತ್ವವನ್ನು ಅಥವ 'ಇಷ್ಟ-ಪ್ರಾಣ-ಭಾವ' ಲಿಂಗ ಸಂಜ್ಞಾ ವಿಶೇಷವನ್ನು ಈ ವಾಕ್ಯಗಳು ಸ್ಫುಟಗೊಳಿಸುತ್ತಿವೆ.

'ಕೋऽಹಂ-ಸೋऽಹಂ' ಭ್ರಮಾತೀತ ಶಿವಾತ್ಮ ವಿದ್ಯಾವಂತನಾಗುವ ಆಲೋಚನೆ ನಿನಗಿರುತ್ತಿದ್ದರೆ-ಶಿವಲಿಂಗ ಸ್ವರೂಪವನ್ನು ಕುರಿತು ವಿಚಾರ ಮಾಡು. ಅದರಿಂದ ನಿನ್ನ ಮನದ ಸಂದೇಹ ನಿವಾರಣೆಯಾಗುವುದು. ವಿಶ್ವದ ಪೌರರಲ್ಲಿ ಗಣ್ಯನಾಗಿ ಇರಬೇಕೆಂಬ ಇರಾದೆ ನಿನಗಿರುತ್ತಿದ್ದರೆ-ಅನಾದಿ ಶಿವ ಸತ್ತ್ವವನ್ನು 'ಸತ್ ಧ್ಯೇಯ ಹಸ್ತ' ದಿಂದ ಮನದಣಿಯೆ ಪೂಜಿಸಿ-ಪೂಜ್ಯನಾಗು. ವಿಶ್ವದ ಭೌತಿಕ ವಸ್ತುಗಳನ್ನೆಲ್ಲಾ ಸರಿಯಾಗಿ ಉಪಯೋಗ ಮಾಡಿಕೊಂಡು ಸುಖಿಸ ಬೇಕೆಂದಿರುವೆಯಾದರೆ-ಲೌಕಿಕ ಸಮಗ್ರ ಪ್ರಗತಿಗೆ ಕುಂದಕ ತರುವ ವಾತಾವರಣಕ್ಕೆ ಮಣಿಯಬೇಡ. ಅದು

ರಂತೆಯೇ, ನೀನು ಸಚ್ಚಿದಾನಂದಮಯ ಈಶ್ವರ ಸಂಬಂಧದ ನಿಷ್ಪ್ರಪಂಚ ಸೌಖ್ಯವನ್ನು ಉಪಯೋಗಮಾಡಿಕೊಂಡು ಗೌರವಿತನಾಗುವುದನ್ನು ಮರೆಯಬೇಡ.

ಜಾಣನಾದ ಸಂಗೀತಗಾರನು ತನ್ನ ಎರಡೂ ಹಸ್ತಗಳ ತಾಡನ ಕರ್ತವ್ಯದಿಂದ ಏಕತಾಳ, ಝುಂಪತಾಳ, ಆದಿತಾಳ ಹೀಗೆ–ಗೀತಾವಾದ್ಯ ಕ್ರಿಯಾಕಾಲವನ್ನು ನಿರ್ಧರಿಸಿ ಸುಖಿಸುತ್ತಿರುವಂತೆ—ನೀನಾದರೂ ಬಾಹ್ಯ ದೃಷ್ಟಿಯನ್ನು ಒಳಮುಖಮಾಡಿ ಜೀವ ಶಿವರ ಯೋಗಾಯೋಗ ರಹಸ್ಯವನ್ನು ಚಿಂತಿಸುವುದು ಮತ್ತು ಅಂತಃಶಕ್ತಿಯನ್ನು ಹೊರಗಣ ಪ್ರಪಂಚದ ವ್ಯವಸ್ಥಿತ ಸಹಬಾಳ್ವಿಗಾಗಿ—ಯುಗ ಯುಗಾಂತರದಿಂದ ಹರಿದುಬಂದ ಶಿವಧರ್ಮದ ಪುನರ್ಜಾಗರಣ ಹಾಗೂ ಸಾಂಸ್ಕೃತಿಕ ನವಚೇತನದ ಸಲುವಾಗಿ ಉಪಯೋಗಿಸುವುದು—ಹೀಗೆ ಉಭಯ ಕರ್ತವ್ಯಕ್ಕೆ ಮೀಸಲು ಮಾಡಿ, ನಿನ್ನ ಜಾಗೃತಕಾಲದ ಪ್ರಯೋಜನವನ್ನು ನಿರ್ಧರಿಸಿಕೊ; ಸಫಲಜೀವಿಯಾಗು.

ಎಲ್ಲ ಸಂದರ್ಭಗಳಲ್ಲೂ ನಾನು ಮಾಡಿದ್ದೇ ಮಾಟ, ಹಾಡಿದ್ದೇ ಹಾಡು, ಹೂಡಿದ್ದೇ ಹೂಟ, ಹೋದದ್ದೇ ದಾರಿ—ಎಂಬ ಭಾವೋದ್ವೇಗವನ್ನು ಬೆಳೆಯಗೊಡಬೇಡ. ಹಾಗೆ ಮಾಡುವಿಯಾದರೆ, ಆದರಿಂದ ಅನೇಕ ಬಾರಿ ಅನ್ಯರ ಮನಸ್ಸು ಉದ್ವೇಗಗೊಂಡು ಲೌಕಿಕ ಮತಭೇದ ಮತ್ತು ಗುಂಪುಗಾರಿಕೆಗೆ ಕಾರಣವಾದೀತು. ಬಾಳುವ ಜೀವಿಯ ಬಾಳಿನ ಗುರಿ ಯಾವಾಗಲೂ ಎಚ್ಚರಿಕೆಯಿಂದ ಕೂಡಿದ್ದಾಗಿರಬೇಕು—ಹೀಗೆ ಧರ್ಮಾಚಾರ್ಯರು ಕೊಡುವ ಮುನ್‌ಸೂಚನೆಯಲ್ಲಿ ಅಧರ್ಮದ ವಿರುದ್ಧ ಹೋರಾಡಲು, ತನ್ನನ್ನು ತಾನು ಸುಧಾರಿಸಿಕೊಂಡು—ಸೈದ್ಧಾಂತಿಕ ಷಟ್‌ಸ್ಥಲ ಬ್ರಹ್ಮಯೋಗದಲ್ಲಿ ಸುಸ್ಥಿರ ಸಮಾಧಿಯನ್ನು ಪಡೆಯಲೂ ಪ್ರೇರಣೆಯಿದೆ. ನೀರು ನೀರು ಬೆರೆತಂತೆ—ಬೆಂಕಿ ಬೆಂಕಿಯ ಸೇರಿಕೆಯಂತೆ ಸ್ವಧರ್ಮದಲ್ಲಿ ಒಂದಾಗುವುದೇ ಬಾಳಿನ ಹೆಗ್ಗುರಿಯಾಗಿರಲಿ—ಎಂಬ ಸಂದೇಶವಿದೆ. ಉಪಯೋಗ ಮತ್ತು ಫಲಾನುಭವ ಸಾಧಕನ ಪಾಲಿಗೆ ಸೇರಿದುದು.

ಉದ್ಗೀತ ಮೇತತ್ಪರಮಂ ತು ಬ್ರಹ್ಮ
ತಸ್ಮಿಂಸ್ತ್ರಯಂ ಸುಪ್ರತಿಷ್ಠಾಕ್ಷರಂ ಚ ।

ಅತ್ರಾಂತರಂ ಬ್ರಹ್ಮವಿದೋ ವಿದಿತ್ವಾ
ಲೀನಾ ಬ್ರಹ್ಮಣಿ ತತ್ಪರಾ ಯೋನಿಮುಕ್ತಾಃ ॥೭॥

(ಶ್ವೇತ—ಅಧ್ಯಾಯ ೧.)

ಜಲೇ ಜಲಮಿವನ್ಯಸ್ತಂ ವಹ್ನೌ ವಹ್ನಿರಿವಾರ್ಪಿತಃ ।
ಪರಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ॥೬೧॥

(ಸಿ.ಶಿ. ಪರಿ–೨೦.)

ಜೀವಲಿಂಗವೆ ಅಂಗೈಯ ಇಷ್ಟಲಿಂಗದಲ್ಲಿ ಹಾಗೂ ವಿಶುದ್ಧ ಭಾವಲಿಂಗದಲ್ಲಿ ಸಮರಸ ಪಡೆಯಿತೆಂದರೆ, ಅರ್ಥಾತ್—ಲಿಂಗತ್ರಯ ಅಭೇದ ದೃಷ್ಟಾಂತವಾಯಿತ್ತೆಂದರೆ—'ಜೀವಾತ್ಮ–ಪರಮಾತ್ಮ' ಭೇದ ಭ್ರಮೆ ಹಿಂಗಿದ ಶಿವಾದ್ವೈತ ಪ್ರಜ್ಞೆಯ ಆ ನಿಲುವೇ ಜೀವಗತಿಯ ಅಂತಿಮಸ್ಥಿತಿಯೆಂದು ಮೇಲಿನ ವಚನಗಳು ಸಾರುತ್ತಿವೆ. ಅನುಭವದಲ್ಲೂ ಹಾಗೆಯೇ ಇದೆ. ಸಾಧಕ ಹೃದಯದ ಪರಿವರ್ತನೆಯಿಂದ ಇಂಥ ಅದ್ಭುತ ಪವಾಡ ಆಗಬೇಕು. ಲೌಕಿಕ ಸರ್ವೋನ್ನತಿ ದೆಸೆಯಲ್ಲಿ ತಾನಿರಬೇಕಾಗಿದ್ದರೂ, ಸರ್ವಶಕ್ತ ಪರಮಶಿವನ ಉಪಾಶ್ರಯವನ್ನು ಗಳಿಸಿ, ಬಲಿತು ಸ್ವಯಂ ವಿರಾಜಿಸಬೇಕೆಂದಿದ್ದರೂ ಶಿವಪೂಜಾ ಅನುಷ್ಠಾನದ ಬಲವೇ ಬೇಕು. ಎಂತಲೇ ಶಿವಾಗಮಗಳಲ್ಲಿ ಶಿವಲಿಂಗೋಪಾಸನೆಗೆ ಹೆಚ್ಚಿನ ಮಹತ್ವ ನೀಡಲಾಗಿದೆ.

೧೧) ಏನಿದ್ದರೂ ಶೈವಸಂಸ್ಕೃತಿ, ಶೈವದರ್ಶನ ಮತ್ತು ಶೈವಧರ್ಮ—ಇಲ್ಲೆಲ್ಲಾ ಸಾತ್ವಿಕ ಗುಣದ ಅಭಿವರ್ಧನೆಗೆ ಅಗ್ರತಾಂಬೂಲವಿದೆ. ಎಲ್ಲದಕ್ಕಿಂತ ಹೆಚ್ಚಾಗಿ ವೀರಶೈವರ ಗಮನ ಪ್ರಾಮಾಣಿಕ ಪ್ರವೃತ್ತಿಗೆ—ಅಹಿಂಸಾ ಸಾಧನೆಯ ಕಡೆಗೆ ಚೆನ್ನಾಗಿ ಹರಿದಿದೆ.

ಸತ್‌ಸಾಧಕನು ಮೇಧಾವಿಯಾಗಿರಲಿ, ಅಥವ ಶ್ರೀಸಾಮಾನ್ಯನೇ ಇರಲಿ,—ಅವನು ಇಂದ್ರಿಯ ಸಂಯಮ, ದೇಹದ ಸದುಪಯೋಗ ಮತ್ತು ಹೃದಯ ಪರಿಶುದ್ಧಿ—ಈ ಮೂರರ ಮೂಲಕ ಆತ್ಮಕಲ್ಯಾಣ ಬಯಸಬೇಕು. ಯಾವಾಗಲೂ ಮಧುರವಾಗಿ ಮಾತಾಡಬೇಕು. ಸತ್ಕಾರ್ಯಪರನಾಗಬೇಕು. ಕಾರ್ಯಶಃ ಸ್ವಾಭಿಮಾನ ವ್ಯಕ್ತಿಯೂ ಆಗಿರಬೇಕು. ಹೀಗಿದ್ದರೆ, ಅಲ್ಲಿ,

ಪರಧರ್ಮ ಟೀಕೆ, ಜಾತಿ-ಗೀತಿ ವೈರದ ಪ್ರಶ್ನೆಗಳೇ ತಲೆಯೆತ್ತುವುದಿಲ್ಲ; ಬೆಳಕು ಇದ್ದೆಡೆಗೆ ಕತ್ತಲೆ ಇಣುಕಿ ನೋಡುವುದುಂಟೆ?

೧೨) 'ಮಾಡಿಕಲಿ—ನೋಡಿ ತಿಳಿ' ಎಂಬ ಸೂತ್ರದ ಮೇಲೆ ಏರ್ಪಟ್ಟ ಈ ಶಿವೋಪಾಸನಾವಿವೇಕ. ಅರ್ಥಾತ್ ಶಿವಪೂಜೆಯ ಅಭ್ಯಾಸಯೋಗದಲ್ಲಿ—ಹಠಯೋಗ, ರಾಜಯೋಗ, ಲಯಯೋಗ, ಮಂತ್ರ ಯೋಗ, ದೃಷ್ಟಿಯೋಗ, ಧ್ಯಾನಯೋಗ—ಇವೆಲ್ಲ ಸಮರಸವಾಗಿ ನಿಂತಿವೆ. ಕಪಿಲ, ಕಣಾದ, ಗೌತಮ, ಪತಂಜಲಿ, ವ್ಯಾಸ, ಜೈಮಿನಿ—ಇವರ ಸಮ್ಯಕ್ ದರ್ಶನ ಜ್ಞಾನವಿದೆ; ಕ್ರಿಯೆಯೂ ಇದೆ. ಅನುಭವಿಯ ದಿವ್ಯ ಜೀವನ ಹಾಗೂ ದಾಸ್ಯಜೀವನದ ಸಂಪೂರ್ಣ ಸ್ವರೂಪವನ್ನು ಇಲ್ಲಿ ಕಾಣಬಹುದು. ಆತ್ಮವಂಚಕನಲ್ಲದ ಶಿವಧರ್ಮಿಯು ತನ್ನ ವ್ಯಾವಹಾರಿಕ ಜೀವನದಲ್ಲಿ-ಸ್ವದೇಶಿಭಾವನೆಯ ಬಗ್ಗೆ ಸ್ಪಷ್ಟ ಕಲ್ಪನೆಯಿಂದ ಕೂಡಿಯೇ ಇರುವನು. ಆದರೂ ವಿಶ್ವದ ಪೂರ್ಣ ನೆಮ್ಮದಿಯನ್ನು ಕುರಿತು ಅವನ ಪ್ರೇಮ ಅಗಾಧ-ಮತ್ತು ಅಸೀಮಿತ. ಮಾನವೀಯತೆಯನ್ನು ಆವರಿಸುವ ಅಜ್ಞಾನ, ಅಕ್ರಮ ಮನೋಭಾವ, ಅನ್ಯಾಯದ ನಡೆ-ನುಡಿ ಇಂಥ ದುಷ್ಟಶಕ್ತಿಗಳನ್ನು ತೊಡೆದು ಹಾಕಲು ಮತ್ತು ಪಪ್ರಥಮವಾಗಿ ತನ್ನಲ್ಲೇ ಇರತಕ್ಕ ದೋಷ-ದೌರ್ಬಲ್ಯಗಳ ಬಲುಹನ್ನು ಮುರಿಯಲು ಅವನ ಸರ್ವಸಾಹಸವಿದೆ. ಪರಮಾತ್ಮನು ಸರ್ವಾಂತ ರ್ಯಾಮಿ, ಸರ್ವಶಕ್ತ, ಸರ್ವಕರ್ತ—ಇಂಥ ಅರಿವು ಜನತೆಯನ್ನು—ಲೋಕ ವನ್ನು ಆನಂದದಲ್ಲಿರಿಸುವುದು. ನಿರಪೇಕ್ಷ ಶಿವಪೂಜಾ ವ್ಯವಸ್ಥೆಯು ಇಂತಹ ಶುದ್ಧ ಮನೋಭಾವವನ್ನು ಬೆಳೆಸಬಲ್ಲುದು, ನಿಜವಾಗಿ.

ವೃಷ್ಟಿತ್ರಯವೆನಿಸಿದ ಮೈ-ಮನ-ಮಾತು, ಪರಶಿವನ ಪೂಜೆಗೆ ದಿವ್ಯ ಸಾಧನವಾಗಿ ಒಪ್ಪುತ್ತಿದ್ದರೆ ತೀರಿತು. ಅದುವೇ ಅಂತರಂಗದ ಶಿವಾನುಭವ ವಾಗಿ (ಪರಮಾರ್ಥ ಚಿಂತನಾ), ಮತ್ತು ಬಹಿರಂಗದ ಶಿವಪೂಜಾವಿಧಾನ ವಾಗಿ ರೂಪುಗೊಂಡು ಬಿಡುತ್ತದೆ. ಈ ನಿರ್ಧರದಲ್ಲಿ 'ಜ್ಞಾನ-ಕ್ರಿಯಾ-ಭಕ್ತಿ' ಇವುಗಳು ಸುಂದರತಮ ಮಿಲನವನ್ನು ಕಾಣಬಹುದು.

'ಲಿಂಗದೊಡನೆ ಸಾಯುವುದು, ಲಿಂಗದೊಡನೆ ಬದುಕು ವುದು,' ಅರ್ಥಾತ್ ಲಿಂಗದ ಸಂಕೋಚ-ಲಿಂಗದ ವಿಕಾಸ-ಈ ದ್ವಂದ್ವದ ಫಲ ಶ್ರುತಿಯೇ ಶಿವಧರ್ಮದ ಮುಖ್ಯ ಲಕ್ಷಣವು. ತ್ರಿವಿಧ ಲಿಂಗೋಪಾ

ಸನೆಯ ಆಂತರಂಗಿಕ ಸದಿಚ್ಛೆ ಈ ನಿರ್ಣಯವನ್ನು ಸ್ಪಷ್ಟೀಕರಿಸುತ್ತದೆ; ಬ್ರಹ್ಮಾಂಡವೆಲ್ಲವೂ ಪಿಂಡಾಂಡವನ್ನು ಸೇರಿ ಅರಳುವಿಕೆ ಮತ್ತು ಪಿಂಡಾಂಡವೆಲ್ಲವೂ ಬ್ರಹ್ಮಾಂಡದಲ್ಲಿ ತಿರೋಧಾನ (ಪರ್ಯವಸಾನ) ಹೊಂದುವಿಕೆ ಈ ಎರಡರ ಹಿಡಿತದಲ್ಲಿ ಜಗದ 'ಆಗು-ಹೋಗು' (ಅಸ್ತಿ-ನಾಸ್ತಿ) ಕುಲಧರ್ಮ ಸಿಕ್ಕಿಹೋಗಿದೆ ಎಂಬಂಶವನ್ನು ಅದು ಹೊರಚೆಲ್ಲುತ್ತದೆ. ವಿಶ್ವದ ಪ್ರತಿಯೊಬ್ಬ ಪ್ರಜೆಯೂ ಪರಮಾತ್ಮನನ್ನು ತನ್ನ ಮನದ ಅಧಿನಾಯಕನನ್ನಾಗಿ ವರಿಸಿದಾಗ, ಆ ಬಗೆಯ ಪರಮ ನೈತಿಕ ಧರ್ಮಾನುಸರಣೆಯಲ್ಲಿ-ಈ ಶಿವಾನುಭವದ ವಿಶಿಷ್ಟ ಅಭಿಪ್ರಾಯವೂ ಕರತಲಾಮಲಕದಂತೆ ಸ್ಪಷ್ಟವಾಗುತ್ತದೆ. ಶಿವಧರ್ಮವನ್ನು ನಂಬಿದವರಿಗೆ ಐಹಿಕ-ಪಾರಮಾರ್ಥಿಕ ಉಭಯ ದೃಷ್ಟಿ ಒಂದಾಗುತ್ತದೆ. ಇನ್ನು ಅವರ ಉತ್ಥಾನದ ದೃಷ್ಟಿಯಲ್ಲಿ ಯಾವ ನಿರಾಸೆಗೂ ಕಾರಣವಿಲ್ಲ.

೧) ಲಿಂಗೇನ ಸಹ ಪಂಚತ್ವಂ ಲಿಂಗೇನ ಸಹ ಜೀವಿತಂ ||

(ಸ್ಕಾಂ. ಕೇ. ಅಧ್ಯಾಯ ೭.)

೨) ಲಿಂಗದಲಿ ಮನವಾಗಿ, ಲಿಂಗದಲಿ ನೆನಹಾಗಿ-
ಲಿಂಗದಲಿ ನೋಟ-ನುಡಿ ಕೂಟವಾದವನು
ಲಿಂಗವೇ ಅಕ್ಕು ಸರ್ವಜ್ಞ ||

೩) ಲಿಂಗದೊಳಿರ್ದು ಲಿಂಗಮನೆ ತಾಳ್ದು ನಿರಂತರ ಲಿಂಗಪೂಜೆಯಂ |
ಲಿಂಗದಿನೊಲ್ದು ವಿಸ್ತರಿಸಿ ಲಿಂಗಕ್ಕೆ ಅಂಗಮನರ್ಪಿಸುತ್ತ ಮಾ ||
ಲಿಂಗಪದಾರ್ಥಮಂ ಸವಿದು ಲಿಂಗಸುಖಾಸ್ಪದನಾಗಿ ರಾಜಿಪಂ |
ಲಿಂಗ ನಿಜೈಕ್ಯನಯ್ಯ ಪರಮ ಪ್ರಭುವೇ ಮಹದೈಪುರೀಶ್ವರಾ ||

೧೩) ದೈವಿಕ ಕ್ರಿಯಾರಹಸ್ಯವು ಶಿವಪೂಜಾಕ್ರಿಯೆಯಿಂದ ಹೇಗೆ ಗೊತ್ತಾಗುವುದು? ಇದಕ್ಕೆ ಬದಲು ಇನ್ನಾವುದಾದರೂ ಸುಲಭ ಸಾಧನ ಇಲ್ಲವೊ? ಎಂದು ಪ್ರಶ್ನಿಸುವಲ್ಲಿ; ಸಮಾಧಾನ ಹೀಗೆ:

ಒಂದು ದೊಡ್ಡ ಪಟ್ಟಣವನ್ನು ಹತ್ತಾರು ದಿಕ್ಕುಗಳಿಂದ ಪ್ರವೇಶಿಸಲು ಅನುಕೂಲವಾಗುವಂತೆ ರೈಲುರಸ್ತೆ, ಗಾಡಿರಸ್ತೆ, ಕಾಲು ಹಾದಿ-ಈ ಪ್ರಕಾರ ಮಾರ್ಗಗಳನ್ನು ಹಾಕಿಕೊಂಡಿರುವಂತೆ; ಮತ್ತು ಮಾನವ ಪೀಳಿಗೆ ಒಳ್ಳೊಳ್ಳೆಯ ಮಾತು-ಕತೆ ಕಲಿತು, ಅಂದಚಂದದ ಸಾಹಿತ್ಯ-ಧರ್ಮಶಾಸ್ತ್ರ—

ವಿವಿಧ ಶಾಸ್ತ್ರಗ್ರಂಥಗಳನ್ನು ರಚಿಸಿಕೊಂಡು ನಾಗರಿಕರಾಗಿ ಬಾಳಲೆಂದು ಆಶಿಸಿ-ಪೂರ್ವಿಕರು ನೂರಾರು ಬಗೆಯ ಭಾಷೆಗಳನ್ನು ವ್ಯವಸ್ಥೆ ಮಾಡಿ ಕೊಂಡಿರುವಂತೆ-ಜೀವ ಬ್ರಹ್ಮರ ತಾದಾತ್ಮ್ಯ ಪರಿಚಯಕ್ಕೂ ಕೆಲವೊಂದು ನಿರ್ದಿಷ್ಟ ವಿಧಾನಗಳನ್ನು, ಕೆಲವೊಂದು ಸಾಂಪ್ರದಾಯಿಕ ಮತಗಳನ್ನೂ ವ್ಯವಸ್ಥೆಗೊಳಿಸಿಕೊಂಡಿದ್ದರೆ ಅದೊಂದನ್ನೂ ಬುದ್ಧಿಜೀವಿಯು ವಿರೋಧಿಸ ಬಾರದು. ಅವರವರಿಗೆ ಪರಿಚಯವಿದ್ದ ದಾರಿಯಲ್ಲಿ, ಅವರವರಿಗೆ ಅನು ಕೂಲವಿದ್ದಮಟ್ಟಿಗೆ ನಡೆಯುವದೇನೂ ಅನುಚಿತವಲ್ಲ.

ಭಾರತೀಯರಲ್ಲಿ ಪ್ರಸಿದ್ಧವಾದ ವೀರಶೈವ ಮತದ ಸಮಸ್ಯೆಯಾದರೂ ಬರೀ ವೈಯಕ್ತಿಕ ಸಮಸ್ಯೆಯಲ್ಲ (No personal approch). ವೈಯಕ್ತಿಕ ಉನ್ನತಿಯನ್ನು ಅಧಿಕರಿಸಿದ-ಸಾಮಾಜಿಕ ಹಾಗೂ ವಿಶ್ವದ ಐಕ್ಯತೆಯ ಸಮಸ್ಯೆ ಅದರದಾಗಿದೆ. ದೇಹ-ಮನ-ಭಾವ ಪ್ರಗತಿಪರ ಲಕ್ಷ್ಯದ (Progressive look) ಪರಿಣಾಮದಿಂದ-ವ್ಯಕ್ತಿಶಕ್ತಿಯು ದೈವೀಶಕ್ತಿ ಯಾಗಿ ಪರಿಣಾಮಗೊಳ್ಳುತ್ತದೆಂಬುದು ಅವರ ಇತ್ಯರ್ಥ.

ದೇಶ-ಕಾಲ-ಸನ್ನಿವೇಶಕ್ಕೆ ಒಪ್ಪುವಂತೆ, ಜನ-ತಮ್ಮ ತಮ್ಮ ಗೌರವ ವನ್ನು ಕಾಪಾಡಿಕೊಳ್ಳಲಿ-ಆತ್ಮೋನ್ನತಿಯನ್ನು ಕಂಡುಕೊಳಲಿ ; ವರ್ಣಾ ಶ್ರಮ ವ್ಯವಸ್ಥೆಗೆ ಮರ್ಯಾದೆಕೊಟ್ಟು-ಇನ್ನಿತರ ಪ್ರಸಿದ್ಧ ಮತಸಿದ್ಧಾಂತ ಗಳನ್ನು ಅಭ್ಯಸಿಸಿ ಬುದ್ಧಿವಂತರಾಗಲಿ ; ಬಾಯಲ್ಲಿ ವೇದಾಂತ-ನಡೆಯಲ್ಲಿ ಚಾರ್ವಾಕವೃತ್ತಿ ಎಲ್ಲಿಲೂ ಇಲ್ಲದಂತಾಗಲಿ ; ದೇವರು ಕೇವಲ ಶಬ್ದರೂಪಿ ಯಾಗಿ (ಪುಸ್ತಕ ವಿದ್ಯೆ ಮುಂತಾಗಿ) ಇದ್ದುಬಿಡದೆ-ಸಾಧಕ ಜೀವನದ ನೈಜ ಕಾರ್ಯಶಕ್ತಿಯೂ ಆಗಿ ಉಳಿದಿರಲಿ ; ಎನ್ನುವ ಸದ್ಭಾವನೆ ವೀರಶೈವರಿಗಿದೆ. ಏನೋ-ಹೇಗೋ ಮುಂದುವರಿದ ಮಂದಿ, 'ಸರ್ವಂ ಭಕ್ಷಯಾಮಿ' ಶಪಥ ಪ್ರಿಯರಾಗದೆ, 'ಸರ್ವಂ ರಕ್ಷಯಾಮಿ' ಎಂದು ಪ್ರತಿಜ್ಞೆಯಾಮಿ' ಎಂದು ಪ್ರತಿಜ್ಞೆಯನ್ನು ಮಾಡಿ ಹಿಂದುಳಿದವರನ್ನು ಉದ್ಧರಿಸಲಿ. ಕೊನೆಯದಾಗಿ ಅನ್ಯರ ಅಭ್ಯುಯವನ್ನು ಹಾರೈಸುವ ಇಚ್ಛೆ ಇಲ್ಲದಿದ್ದರೂ ಹೋಗಲಿ ; ಅನ್ಯರ ಅವನತಿಯನ್ನು ಹಾರೈಸುವ ಕುದಿಯಿಲ್ಲದಿದ್ದರೆ ಸಾಕು,-ಎನ್ನುವ ಪ್ರಾರ್ಥನೆಯನ್ನು ಶಿವಜ್ಞಾನಿಗಳು ಅನುಗಾಲವೂ ಮಾಡುತ್ತಲೇ ಇರುವರು.

ಸಕ್ರಮ ಪೂಜಾನಿಷ್ಠರು ಯಾರೇ ಇರಲಿ. ಅವರು ಅತೀಂದ್ರಿಯ ಸಿದ್ಧಿಯನ್ನು ಸರಾಗವಾಗಿ ಪಡೆಯುವುದು ಮಾತ್ರವಲ್ಲದೆ–ಐಹಿಕ ಆಮುಷ್ಮಿಕ ಫಲವಂತರಾಗಿ ಯಶಃಕಾಯರಾಗಿ ಇರಬಲ್ಲರು. ಸರಲಕ್ಕೆ ಸರಲ-ಸೊಬಗಿಗೆ ಸೊಬಗು ಆಗಿರುವ, ವೇದಾಗಮ ಅನುಭವ ಸೈದ್ಧಾಂತಿಕ ತತ್ತ್ವಗರ್ಭ ವೀರಶೈವರ ಆಚಾರ–ವಿಚಾರ ಗಮನವು ಉಪಾಸಕನೊಬ್ಬನ ಯೋಗಕ್ಷೇಮ ಚಿಂತನೆಯ ಕಡೆಗಷ್ಟೇ ಇರದು. ಕರುಣೆಯ ಬೆನ್ನಬಿದ್ದ ಶರಣರು-ಭಕ್ತರು ಸಮಾಜದ ದೇವರಿಗೆ ತಮ್ಮ ಸರ್ವಸ್ವವನ್ನೂ ಸಮರ್ಪಿಸಿ, ತತ್ಪ್ರಸಾದ ಸೇವನಾ ಶೀಲರಾಗಿ ಇರುತ್ತಾ—ಸ್ವರಾಷ್ಟ್ರ ಪ್ರೇಮವನ್ನು ಸ್ವಧರ್ಮ ಪ್ರೇಮವನ್ನು ತೋರಿಸಿದ ಉದಾಹರಣೆ ಅಪಾರ,

ವೀರಶೈವರ ಪೂಜಾನಿಷ್ಠೆ ಎಂದರೆ—ಪ್ರತಿಯೊಬ್ಬ ವ್ಯಕ್ತಿಯೂ ದಿನವಿಡೀ ಮಹಾಭಿಷೇಕ, ಲಕ್ಷನಾಮ ಪಾರಾಯಣ, ಇನ್ನೂರ ಹದಿನಾರು ಸಕೀಲುಗಳ ಲೆಕ್ಕಹಾಕುತ್ತಾ-ಅದೆಷ್ಟೆಷ್ಟೋ ಜಪಮಾಡುತ್ತಾ–ಅಂಥ–ಇಂಥ ಕಟ್ಟುಕಟ್ಟಳೆಗೆ ಒಳಗಾಗಿ ಕುಳಿತುಕೊಂಡಿರುವುದೆಂದಲ್ಲ. ಅದೆಲ್ಲವನ್ನೂ ಮಹಾವ್ರತಿಗಳ ಪಾಲಿಗೆ ಬಿಟ್ಟುಕೊಟ್ಟು ; ಸಾಮಾನ್ಯರು ತಮಗೆ ನಿಲುಕು ವಷ್ಟುಮಟ್ಟಿಗೆ, ಪ್ರತಿದಿನ ಕಡೆಯಪಕ್ಷ ಎರಡುವೇಳೆ (ಬೆಳಿಗ್ಗೆ ಮತ್ತು ರಾತ್ರಿ ಹೊತ್ತು) ಸಂಕ್ಷಿಪ್ತ ಶಿವಪೂಜೆ, ಧ್ಯಾನ, ಶಿವಮಂತ್ರ ಜಪ, ಸ್ವಧರ್ಮ ಚಿಂತನ, ಅನವರತ ಚಾರಿತ್ರ್ಯಶುದ್ಧಿ (ಶುಭಗುಣಾನುವರ್ತನೆ) ಇಷ್ಟರಲ್ಲಿ ಮಮತೆ ಯಿಂದಿದ್ದರೂ ಸಾಕು. ಅಂಥ ಕರ್ತವ್ಯ ನಿಷ್ಠೆಯು ಅವರನ್ನು ಭೂರುದ್ರ ರನ್ನಾಗಿ ಬೆಳೆಸುತ್ತದೆ; ವಿಶ್ವಾಭಿರಾಮತ್ವವನ್ನೂ ದೊರಕಿಸಿಕೊಡುತ್ತದೆ. ಶ್ರಮಕ್ಕೆ ತಕ್ಕ ಫಲವಿದ್ದೇಇದೆ.

ಕ್ರಮಬದ್ಧ ಶಿವಸಿದ್ಧಾಂತಾಭ್ಯಾಸ, ಉಕ್ತ ಶಿವಧರ್ಮಾಚರಣೆ—ಅಷ್ಟಾವರಣ ನಿಷ್ಠೆ, ಪಂಚಾಚಾರ ವಿಚಾರ ಚತುರತೆ, ಷಟ್‌ಸ್ಥಲ ತತ್ತ್ವ ವಿವೇಕ–ಇಂಥದರ ಪರಿಪಾಠವಿದ್ದ ಜೀವನಿಗೆ–ಪರಶಿವತ್ವ ಪರಿಜ್ಞಾನವೇನೂ ಹೊಸದಲ್ಲ; ಕಠಿಣ ಆಲೋಚನೆಯೂ ಆಗಿಲ್ಲ.

೧) ಪ್ರಥಮೇಽಶ್ರವಣಾದಿತಿ ಚೆನ್ನ ತಾ ಏವ ಹ್ಯುಪ ಪತ್ತೇಃ ॥

(ಬ್ರ. ಸೂ. ೩/೧/೫)

೨) ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ
ನಿಧಿಧ್ಯಾಸಿತವ್ಯಃ ||

(ಬೃ. ಉ. ೨/೪/೫.)

೩) ಕರ್ಮಣಾ ಶುದ್ಧ ಚಿತ್ತಸ್ಯ ಸಂಶ್ರುತೇ ದೋಷನಾಶನಂ |
ಪುನರ್ವಿರಕ್ತಿಸ್ಸಂಸಾರಾ ನ್ಮೋಕ್ಷೇಚ್ಛಾ ಜಾಯತೇ ತಥಾ ||೮೮||
ತಸ್ಮಾತ್ಕರ್ಮ ಪ್ರನಾಡ್ಯೈವ ಜ್ಞಾನಶೇಷಂ ನ ಚಾನ್ಯಥಾ |
ಅತ ಏವೋಕ್ತಮಾರ್ಗೇಣ ತಯೋಸ್ಸಮು ಸಮುಚ್ಚಯಃ ||೮೯||
ವೇದಾನಶೇಷಾ ನವಧಾರ್ಯ ಮರ್ತ್ಯೋ
ಮದುಕ್ತ ವೇದಾಂತ ವಿಚಾರಮಾರ್ಗಮ್ ||
ಉಪೈತಿ ಪುಣ್ಯೇನ ಚ ಶಂಭು ಭಕ್ತ್ಯಾ
ಶಿವಪ್ರಸಾದೇನ ನ ಚೇತರೇಣ ||೯೦||

(ಸೂ. ಸಂ. ಯಜ್ಞವೈಭವಖಂಡ ಅಧ್ಯಾಯ ೩೯.)

ಆತ್ಮದರ್ಶನದ ಉದ್ದಿಶ್ಯದಿಂದಲೇ ಇಷ್ಟಧರ್ಮ ಶ್ರವಣ—ಮನನ—ನಿಧಿಧ್ಯಾಸನ—ವಾಚಿಕ—ಮಾನಸಿಕ—ಕ್ರಿಯಾ ಯಜ್ಞಾಚರಣೆಯೂ ಕರ್ತವ್ಯವಷ್ಟೆ. ಹೀಗೆ ಸ್ವಕರ್ತವ್ಯ ವಿಚಾರಶೀಲನು, ಲೌಕಿಕವಾಗಿಯೂ ತನ್ನ ಯೋಗ್ಯತೆಗೆ ಅನುಸಾರವಾಗಿ ಔದ್ಯೋಗಿಕ ಪ್ರಗತಿವಂತನಾಗುವನು. ಜೀವನಾವಶ್ಯಕ ಸಮಸ್ತ ವಸ್ತುಗಳನ್ನೂ, ಅದಿಲ್ಲದಿದ್ದರೆ—ತನ್ನ ಮತ್ತು ತನ್ನ ಕುಟುಂಬದವರ ಹೊಟ್ಟೆಗೆ ತಕ್ಕಷ್ಟು ಆಹಾರ, ಮೈಅಲಂಕಾರಕ್ಕೆ ಬೇಕಾಗುವಷ್ಟು ಬಟ್ಟೆ, ವಾಸಕ್ಕೆ ಮನೆ, ಶಾಲೆಯ ಅಭ್ಯಾಸ—ಮುಂತಾದ ಪ್ರಾಥಮಿಕ ಸ್ವರೂಪದ ಆವಶ್ಯಕತೆಗಳನ್ನಾದರೂ ಸಂಗ್ರಹಿಸಿಕೊಂಡು, ಶ್ರಮ ಗೌರವ ಸಂಪನ್ನರಾಗಿ ಜೀವನ ನಡೆಸಬಲ್ಲನು. ಅಂಥ ಸದ್ಧರ್ಮಜೀವನ ಎಂದೆಂದಿಗೂ ಅಭಿಮಾನಾಸ್ಪದ, ನಿಯಮಬದ್ಧ. ಅದರಲ್ಲಿ ನಡೆದು ಶುದ್ಧನಾದವನೇ ಸಮಾಜದ ಮಹಾಪುರುಷ !

ಚಿನ್ಮಯೇ ಶಂಕರೇ ಲಿಂಗೇ ಸ್ಥಿರಂ ಯೇಷಾಂ ಮನಃ ಸದಾ |
ವಿಮುಕ್ತೇತರ ಸರ್ವಾರ್ಥಂ ತೇ ಶಿವಾನಾತ್ರ ಸಂಶಯಃ ||೩||

ಲಿಂಗೇ ಯಸ್ಯ ಮನೋಲೀನಂ ಲಿಂಗಸ್ತುತಿ ಪರಾ ಚ ವಾಕ್ ।
ಲಿಂಗಾರ್ಚನ ಪರೌ ಹಸ್ತೌ ಸ ರುದ್ರೋ ನಾತ್ರ ಸಂಶಯಃ ॥೨೭॥
ಲಿಂಗ ನಿಷ್ಠಾಪರಂ ಶಾಂತಂ ಭೂತಿ ರುದ್ರಾಕ್ಷ ಸಂಯುತಂ ।
ಪ್ರಶಂಸಂತಿ ಸದಾಕಾಲಂ ಬ್ರಹ್ಮಾದ್ಯಾ ದೇವತಾ ಮುದಾ ॥೨೮॥

(ಸಿ. ಶಿ. ಪರಿ–೧೦)

೧೪) "ನೂರು ವರ್ಷಗಳು ತುಂಬುವವರೆವಿಗೂ ಜೀವಿಸಿರಬೇಕು. ಇಡೀ ಜೀವಾವಧಿ ಶಿವಧರ್ಮಾವಲಂಬಿಯಾಗಿ—ಶಿವಾರ್ಚನಾ ಶೀಲನಾಗಿ ಬದುಕಬೇಕು. ಸೌಖ್ಯೋನ್ನತಿಯ ಯಾವ ಕರ್ಮಗಳೂ ತನಗೆ ಬಂಧನ ವಾಗಬಾರದು" ಎಂಬ ಘನತರ ಆಸೆಯಿಂದಿರ್ದ ಜೀವನನ್ನೂ; "ತಾನು ತನಗಾಗಿ, ತನ್ನವರಿಗಾಗಿ, ಸರ್ವರಿಗಾಗಿ ಸರ್ವದಾ ಸತ್ಕರ್ಮ ನಿರತನಾಗಿ ಶಿವಪ್ರಸಾದ ಕಾಮಿಯಾಗಿ ಇದ್ದಿರಬೇಕು" ಎಂದು ನಿರಂತರ ಹಂಬಲಿಸಬಲ್ಲ ಶಿವಭಕ್ತನನ್ನೂ ತದ್ವ್ಯತಿರಿಕ್ತ ಯಾವ ಬಗೆಯ ಪಾಪಬುದ್ಧಿಯೂ ಸೋಂಕು ವುದಿಲ್ಲ. ಅವನ ಪ್ರತಿಕ್ಷಣದಿಂದ ಪ್ರತಿಯೊಂದು ಕರ್ತವ್ಯವೂ ಪರಮಶಿವನ ಆರಾಧನೆಯೇ ಆಗಿದೆ.

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇ ಚ್ಛತಗ್ಂ ಸಮಾಃ। ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮಲಿಪ್ಯತೇ ನರಾಃ ॥

(ಈ. ಉ. ಮಂತ್ರ ೨.)

ವೀರಶೈವರು ಯಜ್ಞಪ್ರಿಯರು. ಅವರ ಅಂಗೈಯ್ಯ ಲಿಂಗವೇ ರುದ್ರಾಗ್ನಿ; ಹಾಲು ಮೊಸರು ತುಪ್ಪ ಇವೆಲ್ಲವೂ ಹವಿಸ್ಸು. ಎಲ್ಲದಕ್ಕಿಂತ ಪ್ರಾಮುಖ್ಯವಾಗಿ ಶಿವನಿಗೆ ಪ್ರೇಮವಾದುದು ಅಭಿಷೇಕ.

ಅಭಿಷೇಕ ಪ್ರಿಯಃ ಶಿವಃ ॥ಇತಿ॥

೧೫) 'ಮಂತ್ರಾಧೀನಂತು ದೈವತಾ' ಈ ವಾಕ್ಯದ ಅರ್ಥವೇನು? ಇಲ್ಲಿ ಸೂಚಿತವಾದ ಎರಡು ಪದಗಳು—ಒಂದು 'ಮಂತ್ರ', ಇನ್ನೊಂದು 'ದೈವತಾ', ವಿಧಿಯರಿತು ಮಾಡುವ ಪೂಜೆಯು ವಿಶ್ವಪ್ರಕೃತಿಗೂ ವಿಶ್ವೇಶ್ವರನಿಗೂ ಇರುವ ಅನ್ಯೋನ್ಯ ಸಂಬಂಧವನ್ನು ಸೂಚಿಸುತ್ತದೆ—ಎಂಬ ಭಾವ ಇಲ್ಲಿ ಹೊರಹೊಮ್ಮಿದೆ. ಮನಸ್ಸಿಗೆ ಅಧೀನವಾಗಿ ದೇಹವು ಇರುವಂತೆ

-ಮಂತ್ರಕ್ಕೆ ಅಧೀನವಾಗಿ ದೇವರು ಇದ್ದಾನೆ–ಎಂದರೂ ಆಯಿತು. ದೇವರ ಸರ್ವಸಾಮರ್ಥ್ಯವನ್ನೂ ಸೂಚಿಸುವ ವಸ್ತುವೇ ಮಂತ್ರವು. ಸೂಜ್ಯ–ಸೂಚಕ (ಪೂಜೆ-ಮಂತ್ರ) ಉಭಯಸಾಕ್ಷಿಯಾಗಿ ಪೂಜಕನಿದ್ದಾನೆ. ಪೂಜಾ ಕಾಲದಲ್ಲಿ ಅವನು ಉಚ್ಚರಿಸುವ ಮಂತ್ರವು ಪೂಜ್ಯವಸ್ತುವಿನ ಮಹತ್ವ ವನ್ನು ಪ್ರಕಟಿಸುತ್ತದೆ. ಮಂತ್ರದ ಅಭಿಪ್ರಾಯವನ್ನು ಅರಿಯದ, ಮಂತ್ರ ಜ್ಞಾನವಿಲ್ಲದ, ಮಂತ್ರವನ್ನು ಉಚ್ಚರಿಸದಲೆ ಮಾಡುವ ಪೂಜೆ, ತಾಳ-ಮೇಳ ವಿಲ್ಲದ ಭಾಗವತರ ಆಟದಂತೆ ನೀರಸ–ನಿಷ್ಪ್ರಯೋಜನ.

ಶಿವಪೂಜಾಕ್ರಿಯೆ ಜನರಂಜನೆಯ ಸಲುವಾಗಿ ಹೂಡುವ ಕಾರ್ಯವಲ್ಲ. ಆ ಕಾಲಕ್ಕೆ ಕ್ರಮವಾಗಿ ಉಪಯೋಗಿಸಲ್ಪಡುವ ಮಂತ್ರಗಳು ಮನಸ್ಸನ್ನು ಶುದ್ಧಿಗೊಳಿಸಿ, ಪೂಜಕನನ್ನು ಪೂಜಾಕಾರ್ಯದಲ್ಲಿ ತನ್ಮಯಗೊಳಿಸುತ್ತವೆ. ಅವನ ಹೃದಯದಲ್ಲಿ ಭಗವಾನ್ ಪರಬ್ರಹ್ಮತತ್ತ್ವವನ್ನು ಸ್ಪಷ್ಟವಾಗಿ ಮೂರ್ತ ಗೊಳಿಸುವ ಸಾಮರ್ಥ್ಯಮಂತ್ರಕ್ಕೆ ಸ್ವಭಾವ ಸಿದ್ಧವಾದುದು. ಈ ಸಂಗತಿ ಯನ್ನು ಕುರಿತು ಯಥೋಚಿತ ವಿವರಣೆ ಈ ಮೊದಲೇ ನಾಲ್ಕನೆಯ ಪ್ರಕರಣದಲ್ಲಿ ಉಲ್ಲೇಖಿಸಲ್ಪಟ್ಟದೆ. ಮನಸ್ಸಿನ ಪರಿಷ್ಕಾರದ ದೃಷ್ಟಿಯನ್ನು ಕುರಿತು ಅಲ್ಲಿ ಅದೆಷ್ಟು ಹೇಳಿದೆಯೋ ಅಷ್ಟನ್ನೇ ಮನನ ಮಾಡಿಕೊಂಡರೆ ಸಾಕು ; ಮಂತ್ರದ ಮಹತ್ವ ಸ್ಪಷ್ಟವಾಗುವುದು.

ಕ್ರಿಯಾಶುದ್ಧ ಷಟ್‌ಸ್ಥಲಾಚರಣೆಯ ಪ್ರಪತ್ತಿಮಾರ್ಗವನ್ನು ಅನುಸರಿ ಸಿದ ಪೂಜಕನಾದರೂ ಸದಾಕಾಲದಲ್ಲಿ ಮಂತ್ರಾರ್ಥದ ಅನುಸಂಧಾನಿ ಯಾಗಿಯೇ ಇರುತ್ತಾನೆ. ಮುಕ್ತಿದೆಸೆಯಲ್ಲಿ ಶಿವಜೀವರ ಅನನ್ಯತೆಯನ್ನೇ ಕಾಣುವವನಾಗಿರುತ್ತಾನೆ. ಅವನಿಗೆ ಜನನ–ಮರಣ ಭೀತಿಯಿಲ್ಲ. ಅವನ ಕುಲವು ಪವಿತ್ರವಾದುದು—ಪರಿಶುದ್ಧವಾದುದು.

ಪ್ರಸನ್ನಾನಾಂ ಮಹಾದೇವಂ ಪರಿಪಕ್ವಾಂತರಾತ್ಮನಾಂ ।
ಜನ್ಮೈವ ಜನ್ಮ ನಾನ್ಯೇಷಾಂ ವೃಥಾ ಜನನ ಸಂಗಿನಾಂ ॥೬೨॥
ತತ್ಕುಲಂ ಹಿ ಸದಾಶುದ್ಧಂ ಸಫಲಂ ತಸ್ಯ ಜೀವಿತಂ ।
ಯಸ್ಯ ಚಿತ್ತಂ ಶಿವೇ ಸಾಕ್ಷಾದ್ವಿಲೀನಮಬಹಿರ್ಮುಖಂ ॥೬೪॥

(ಸಿ.ಶಿ. ಪರಿ–೧೧)

೧೬) ವ್ಯಾಪಾರ, ವ್ಯವಸಾಯ, ರಾಜಕೀಯ, ಕೈಗಾರಿಕೆ ಮೊದಲಾದ ಔದ್ಯೋಗಿಕ ದಾಂಧಲೆಗೆ ವಶನಾದ ಗೃಹಸ್ಥ ಧರ್ಮಿಯು, ವಿದ್ಯಾರ್ಥಿ–ವಿದ್ಯಾರ್ಥಿನಿಯರು, ಮುಪ್ಪು ರೋಗಗಳಿಂದ ಬಳಲುವವರು, ಅಶಕ್ತರು–ಶಿವಪೂಜೆಯಲ್ಲಿ ಯಾವ ಬಗೆಯ ಆಡಂಬರವನ್ನೂ ತೋರಿಸಿಕೊಳ್ಳಲು ಇಚ್ಛಿಸಬಾರದು.

ಶುದ್ಧೋದಕಾಭಿಷೇಕ, ಭಸ್ಮ, ಪತ್ರ, ಪುಷ್ಪ, ಸಮರ್ಪಣ–ಇವಿಷ್ಟು ಕೂಡಿದ ಸಾಮಾನ್ಯ ಪೂಜೆಯೇ ಕೊನೆಯಪಕ್ಷ ಸಾಕು. ಯಾವುದೇ ವೇದಾಗಮ ಮಂತ್ರಗಳನ್ನು ಅವರು ಕಲಿಯದೆ ಹೋದರೂ ಚಿಂತೆಯಿಲ್ಲ. ಶಿವಪಂಚಾಕ್ಷರೀ ಮಂತ್ರದಿಂದ ಪತ್ರಪುಷ್ಪಾದಿಗಳನ್ನು ಸಮರ್ಪಿಸಿ, ಪೂಜೆ, ತೀರಿಸಲೂ ಬಂದೀತು. ಅದಕ್ಕೂ ಪರಮಾತ್ಮನು ಒಲಿಯುವನು. ಪೂಜೆಯಲ್ಲಿ ಔಪಾಸಕ ಹೃದಯ ಕಮಲ ಅರಳಬೇಕು. ಅಂದರೆ ಅಲ್ಲಿ ಕಾಪಟ್ಯವಿಲ್ಲದಿರಬೇಕು.

ಕುಶಲ ಕರ್ಮನಿರತರು, ಕವಿಜನರು, ಆತ್ಮಾನುಸಂಧಾನಿಗಳು, ಸಂತರು—ಅನುದಿನ, ಅನವರತ ಮಾಡುವ ಅರ್ಚನೆ–ಅರ್ಪಣ ಎಷ್ಟೇ ಸರಳವಾಗಿದ್ದರೂ ತಪ್ಪಲ್ಲ. ಶ್ರೀ ಶಂಕರಾಚಾರ್ಯರು ಅದರಂತೆ:— 'ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ' ನಾನಾವಾವ ಕರ್ಮವ ಗೈಯ್ಯುತ್ತಿರಲಿ ಅದರ ಫಲ ನಿನಗೆ ಸೇರತಕ್ಕದು—ಓ, ಪರಮೇಶ್ವರ! ಎಂಬ ಸದ್ಭಾವ ಅವರ ಮನದಲ್ಲಿ ನೆಲೆಯಾಗಿರುತ್ತದಾಗಿ; ಅವರ ಚಿತ್ತದಲ್ಲಿ ಅಶ್ರದ್ಧೆ ಹುದುಗದಿಹುದಾಗಿ. ಒಳಗೂ–ಹೊರಗೂ ಅಶಿವದ ಬೇರು ಸತ್ತು, ಶಿವದ ಚಿಗುರು ಮಿಡಿಯಲು, ಇನ್ನು ಬಯಸಿದ ಬಯಕೆ–ನಿಜಮುಕ್ತಿಸುಖ ದೊರೆಯುವದೇನೂ ತಪ್ಪಿದ್ದಲ್ಲ.

ಇಷ್ಟಲಿಂಗಕ್ಕೆ ಸಮರ್ಪಿಸಿದ ಆಹಾರ ಪಾನೀಯಾದಿ ದ್ರವ್ಯಗಳನ್ನಷ್ಟೇ ಸ್ವೀಕರಿಸಬೇಕು. ಹಾಗೆ ಮಾಡುವುದರಿಂದ ಬ್ರಹ್ಮಭಾವ ಸ್ಥಿರವಾಗುತ್ತದೆ. ಕಾಣಬೇಕಾದುದನ್ನು ಕಂಡು, ನೋಡಬೇಕಾದುದನ್ನು ನೋಡಿ, ಅನುಭವಿಸಬೇಕಾದುದನ್ನು ಅನುಭವಿಸಿ-ಶಿವಾನುಗ್ರಹವನ್ನು ಪಡೆಯಲು ಅವಕಾಶ ದೊರಕುತ್ತದೆ.

ಮುಖ್ಯವಾಗಿ ಉಪಾಸಕನಿಗೆ ಶಿವತತ್ತ್ವಜ್ಞಾನ ಸ್ಥಿರತೆಯೂ,

ಕೈಕೊಂಡ ಒಳ್ಳೊಳ್ಳೆಯ ನಿಯಮಗಳನ್ನು ಬಿಡದಲೆ ನಡೆಸಿಕೊಂಡು ಹೋಗುವ ವ್ರತನಿಷ್ಠೆಯೂ ಇದ್ದೇಇರಬೇಕು. ಇದೊಂದೂ ಇಲ್ಲದೆ, ಸುಮ್ಮ ಸುಮ್ಮನೆ ಜೀವನ್ಮುಕ್ತಿಯ ಮಾತನ್ನಾಡಿದರೆ ಬರುವ ಲಾಭವೇನು? 'ಸದ್ಯೋನ್ಮುಕ್ತಿ-ಸದ್ಯೋನ್ಮುಕ್ತಿ' ಎಂದು ಬಾಯಲ್ಲಿ ಅಂದುಕೊಂಡರೆ ಅದೊಂದು ಬಗೆಯ ಚಪಲವೇ ಸರಿ. ಮಾಡುವ ಸೇವೆ-ಪೂಜೆ ಅಂತಃಸಾಕ್ಷಿಯಾಗಿ ಆಗಬೇಕು.

ಈ ಯಾವತ್ತೂ ಮಾತನ್ನು ದೃಢಪಡಿಸುವ ಶಾಸ್ತ್ರೋಕ್ತಿಃ—

೧) ಭುಂಜೀತ ರುದ್ರಭುಕ್ತಾನ್ನಂ ರುದ್ರ ಪೀತಂ ಜಲಂ ಪಿಬೇತ್ ।
ರುದ್ರಾಘ್ರಾತಂ ಸದಾ ಜಿಘ್ರೇದಿತಿ ಜಾಬಾಲಕೀ ಶ್ರುತಿಃ ॥೨೦॥
ಅರ್ಚಯಿತ್ವಾ ನಿಜೇ ಲಿಂಗಂ ಪತ್ರಂ ಪುಷ್ಪಂ ಫಲಂ ಜಲಂ ।
ಅನ್ನಾದ್ಯಂ ಸರ್ವಭೋಜ್ಯಂ ಚ ಸ್ವೀಕುರ್ಯಾದ್ಭಕ್ತಿಮಾನ್ನರಃ ॥೨೧॥
(ಸಿ.ಶಿ. ಪರಿ—೭.)

೨) ಪತ್ರಂ ಪುಷ್ಪಂ ಫಲಂ ತೋಯಂ ಯಚ್ಛಿವಾಯ ನಿವೇದಿತಮ್ ।
ತತ್ತತ್ಸ್ವೀಕಾರ ಯೋಗೇನ ಸರ್ವಪಾಪಕ್ಷಯೋ ಭವೇತ್ ॥೧೭॥
(ಸಿ.ಶಿ. ಪರಿ—೧೦.)

೩) ಅನೇನ ಮೂಲಮಂತ್ರೇಣ ಶಿವಲಿಂಗಂ ಪ್ರಪೂಜಯೇತ್ ।
ನಿತ್ಯಂ ನಿಯಮಸಂಪನ್ನಃ ಪ್ರಯತಾತ್ಮಾ ಶಿವಾತ್ಮಕಃ ॥೩೪॥
ಭಕ್ತ್ಯಾ ಪಂಚಾಕ್ಷರೇಣೈವ ಯಃ ಶಿವಂ ಸಕೃದರ್ಚಯೇತ್ ।
ಸೋಽಪಿ ಗಚ್ಛೇಚ್ಛಿವಸ್ಥಾನಂ ಮಂತ್ರಸ್ಯಾಸ್ಯೈವ ಗೌರವಾತ್ ॥೩೫॥
ಪಂಚಾಕ್ಷರೀಂ ಸಮುಚ್ಚಾರ್ಯ ಪುಷ್ಪಂ ಲಿಂಗೇ ವಿನಿಕ್ಷಿಪೇತ್ ।
ಯಸ್ತಸ್ಯವಾಜಪೇಯಾನಾಂ ಸಹಸ್ರಫಲಮಿಷ್ಯತೇ ॥೪೨॥
(ಸಿ.ಶಿ. ಪರಿ—೮.)

೪) ಪಂಚಾಕ್ಷರೇಣ ಮಂತ್ರೇಣ ಪತ್ರಂ ಪುಷ್ಪಮಥಾಪಿ ವಾ ।
ಯಃ ಪ್ರಯಚ್ಛತಿ ಶರ್ವಾಯ ತದನಂತ ಫಲಂ ಸಕೃತ್ ॥
(ಸೌರಪುರಾಣ.)

೫) ಕಿಂ ದುರ್ಲಭಂ ಶಿವಭಕ್ತಸ್ಯ ಲೋಕೇ
ಅತ್ಯಲ್ಪಮಪಿ ನೈವೇದ್ಯಂ ಫಲಂ ವಾ ಜಲಮೇವ ವಾ |
ತದೇವ ಪ್ರಾಶಯಿತ್ವಾಥ ಬ್ರಹ್ಮಭೂಯಾಯ ಕಲ್ಪತೇ ||
(ಸಿದ್ಧಾಂತ ಶಿಖೋಪನಿಷತ್.)

೬) ಏವಂ ಕೃತ್ವಾ ಚಿರಾದೇವ ಜ್ಞಾನಂ ಪಾಶುಪತಂ ಶುಭಂ ||೫೫||
ಲಭತೇ ತತ್ಪ್ರತಿಷ್ಠಾಂ ಚ ವೃತ್ತಂ ಚಾನುತ್ತಮಂ ತಥಾ |
ಯೋಗಂ ಚ ಪರಮಂ ಲಬ್ಧ್ವಾ ಮುಚ್ಯತೇ ನಾತ್ರ ಸಂಶಯಃ ||೫೬||
(ವಾ. ಸಂ. ಪೂರ್ವಭಾಗ. ಅಧ್ಯಾಯ ೩೨.)

## ೧೭) ಸ್ನಾನಾದಿ ಪೂರ್ವಕ್ರಿಯೆಯ ಆವಶ್ಯಕತೆ—

ಕುಟಿಲ ಜಲದಲಿ ಮೈ ತೊಳೆಯುವುದಲ್ಲ. ವೀರಶೈವನು ಅಂತರಂಗ ಶುದ್ಧನಾಗಿ ಇದ್ದಂತೆಯೇ—ಸ್ಥೂಲಶರೀರದ ನಿರ್ಮಲೀಕರಣ ದೃಷ್ಟಿಯಿಂದಲೂ ಸ್ನಾನಮಾಡಿ, ಶುಚಿಯಾದ ವಸ್ತ್ರವನ್ನು ಧರಿಸಿಕೊಂಡನಂತರ—ಪೂಜಾಗೃಹವನ್ನು ಪ್ರವೇಶಿಸಿ, ಉಚಿತ ಪೀಠದಲ್ಲಿದ್ದು ಶಿವಪೂಜೆ ಮಾಡಬೇಕು. ಶಿವಪೂಜಾ ಕ್ರಮದಲ್ಲಿ ಯಮ ನಿಯಮಾದಿ ಅಷ್ಟಾಂಗಯೋಗ ಸಂಬಂಧವಿದೆ; ಮನಸ್ಸನ್ನು ಸ್ಥಿಮಿತಕ್ಕೆ ತಂದುಕೊಳ್ಳುವ ಯೋಗ್ಯ ಅವಕಾಶವಿದೆ—ಇತ್ಯಾದಿ ಹಲವು ಸಂಗತಿಗಳನ್ನು ಶಿವಾಗಮಗಳ ಚರ್ಯಪಾದದಲ್ಲಿ ವಿಸ್ತಾರವಾಗಿ ಹೇಳಲಾಗಿದೆ.

* * * *

ಉಕ್ತ ನಿಯಮಗಳನ್ನು ಅನುಸರಿಸುವ ಮತ್ತು ಅನುಚಿಂತಿಸುವ ಪದ್ಧತಿಯಲ್ಲಿ—ಒಂದೊಂದು ದೇಶದಲ್ಲಿ, ಒಂದೊಂದು ಬುಡಕಟ್ಟಿನಲ್ಲಿ ಬೇರೆ ಬಗೆ, ಕ್ರಮ—ತಾರತಮ್ಯ ಇರುವುದನ್ನು ಕಾಣಬಹುದು. ಹಲಕೆಲವು ಪ್ರಸಂಗಗಳಲ್ಲಿ ಮಂತ್ರಪ್ರಯೋಗ ಭೇದ, ತಂತ್ರಪ್ರಯೋಗ ಭೇದ, ಅಭಿಪ್ರಾಯ ಭೇದ, ಪರ್ಯಾಯ ಭೇದ ತೋರಿಬಂದು—ಅದಾವುದು ಕ್ರಮ? ಅದಾವುದು ಅಕ್ರಮ? ಸ್ಪಷ್ಟೀಕರಿಸುವುದೇ ಕಠಿಣವಾಗುತ್ತದೆ. ಇಂಥ ಆಚಾರ ಭೇದವೇ ಮುಖ್ಯ ಕಾರಣವಾಗಿ—ವೀರಶೈವ ಧರ್ಮ ಛಿದ್ರ ಛಿದ್ರ

ವಾಗಿದೆ. ಮುಂದೆ ಇದರ ಭವಿತವ್ಯವೇನು? ಎಂದು ಲೆಕ್ಕಹಾಕಬೇಕಾದ ಪ್ರಮೇಯವೂ ಇಲ್ಲವೆಂದಲ್ಲ!

ಸಾವಿರಾರು ಶಾಸ್ತ್ರವಚನಗಳಿಂದ ಉತ್ತರಿಸಲಾಗದ ಅಂತಹ ಪ್ರಶ್ನೆಗಳನ್ನು ಹಾಗೂ ಅತ್ಯಂತ ಗಡುಚಾದ ಶಂಕೆಯನ್ನು ಕೂಡ-ಅನುಭಾವಿ ಧರ್ಮ ಗುರುಪೀಠವು ಸುಲಭವಾಗಿ ಬಿಡಿಸಿ, ಶಿಷ್ಯನ ಮನಸ್ಸಿಗೆ ನೆಮ್ಮದಿ ದೊರಕಿಸಬಲ್ಲುದು. ಯಾರ ಯಾರ ಮತಭೇದ-ಆಚಾರ ಭೇದ ಹೇಗೇ ಇರಲಿ. ರಾಷ್ಟ್ರ ಒಂದು-ಜಗತ್ ಒಂದು. ಪರಸ್ಪರ ಸ್ನೇಹ ಸೌಹಾರ್ದಭರಿತ ಆತ್ಮಾವಲಂಬನ ಇದ್ದಿದ್ದರೆ ಮಾತ್ರ, ಆಗ ವಿಶ್ವದ ನೆಮ್ಮದಿಗೆ ಭಂಗವಿಲ್ಲ. ಸ್ವಯಂ ಸ್ವಾತಂತ್ರ್ಯ ರಕ್ಷಣೆಗಿಂತಲೂ ವಿಶ್ವಸಮುದಾಯ, ಮತ ಧರ್ಮ ಸಾಂಸ್ಥಿಕ ದೃಷ್ಟಿಕೋಣ ಮಾನವನ ಮನದ ದೌರ್ಬಲ್ಯವನ್ನು ಸಂಪೂರ್ಣವಾಗಿ ನಿವಾರಿಸಿ, ಅಲ್ಲಿ ಸರ್ವಸಮತೆಯ ಬೀಜವನ್ನು ನೆಟ್ಟು ಬೆಳೆಸಬಲ್ಲುದು; ಸಮಸ್ತ ದುಃಖಗಳಿಂದ ಜೀವಕೋಟಿಯನ್ನು ಪಾರುಗೊಳಿಸಬಲ್ಲುದು.

"ದ್ಯುಲೋಕವು ಶಾಂತಿದಾಯಕವಾಗಲಿ. ಅಂತರಿಕ್ಷವು ಶಾಂತಿದಾಯಕವಾಗಲಿ. ಭೂಲೋಕವು ಶಾಂತಿದಾಯಕವಾಗಲಿ. ಜಲರಾಶಿಗಳು ಶಾಂತಿದಾಯಕವಾಗಲಿ. ಓಷಧಿ ಲತೆಗಳು ಶಾಂತಿದಾಯಕವಾಗಲಿ. ಮರಗಿಡಗಳು ಶಾಂತಿದಾಯಕವಾಗಲಿ. ಸಮಸ್ತ ಜಡ ದಿವ್ಯ ಶಕ್ತಿಗಳೂ, ವಿದ್ವಜ್ಜನ-ದಾನ ಶೀಲ ಮಹಾನುಭಾವರೂ ಶಾಂತಿದಾಯಕರಾಗಲಿ. ಸರ್ವಶ್ರೇಷ್ಠ-ಸರ್ವ ಜ್ಯೇಷ್ಠ ಪ್ರಭು ಪರಮೇಶ್ವರನು ಮತ್ತು ಶಿವಜ್ಞಾನವು ಶಾಂತಿದಾಯಕರಾಗಲಿ. ಎಲ್ಲವೂ ಶಾಂತಿದಾಯಕವಾಗಲಿ. ಶಾಂತಿಯೇ ಶಾಂತಿಯಾಗಿ ಮೆರೆಯುತ್ತಿರಲಿ. ಆ ಸರ್ವತ್ರ ವಿರಾಜಿಸುವ ಶಾಂತಿಯು ನನಗೆ ಲಭ್ಯವಾಗಲಿ."

ಓಂ ದ್ಯೌಃ ಶಾಂತಿರಂತರಿಕ್ಷಗ್ಂ ಶಾಂತಿಃ
ಪೃಥಿವೀ ಶಾಂತಿ ರಾಪಃ ಶಾಂತಿರೋಷಧಯಃ ಶಾಂತಿಃ।
ವನಸ್ಪತಯಃ ಶಾಂತಿರ್ವಿಶ್ವೇ ದೇವಾಃ ಶಾಂತಿ ರ್ಬ್ರಹ್ಮ ಶಾಂತಿ
ಸರ್ವಗ್ಂ ಶಾಂತಿಃ ಶಾಂತಿರೇವ ಶಾಂತಿಃ ಸಾ ಮಾ ಶಾಂತಿರೇಧಿ॥

(ಯಜು-೩೬/೧೭.)

ಈ ಪರಿಯ ಕೂಗು ಕೂಗುತ್ತಾ, ಮುಂದೆ ಮುಂದೆ ಗಮಿಸಲು-ಆಗ ಹಿಂದಿನ ಹೆಜ್ಜೆ ಮಾಯವಾಗುತ್ತದೆ. ಆದಿಯಲ್ಲಿ ಕೆಲವು ಸಮಯ ಶುಭಾ ಶುಭ ದ್ವಂದ್ವ (ಹೋರಾಟ) ನಡೆದು, ಬಳಿಕ ಅಂಥ ಸಂಘಾತದಿಂದ (Crystalisation) ಜಾರಿಕೊಂಡ ಚೈತನ್ಯವೇ (Spirit) -' ತಾನು ಯಾರು ? ' ಎಂಬ ಅರಿವಿನ ಮೂಲಕ ಜಗತ್ತಿನ ನಿಜ ಸ್ಥಿತಿಯನ್ನು ತಿಳಿದು ಕೊಂಡು ಪರಿಪೂರ್ಣತೆ ಹೊಂದಿ ನಲಿಯಹತ್ತುತ್ತದೆ. ಉಪಾಧಿಗತ ಬ್ರಹ್ಮದ ನಾನಾ ರೂಪಗಳೂ ಮಾಯವಾಗಿ ಹೋಗಿ, ಅಲ್ಲಿ ಪರಾಕಾಶಮಯ ಪರಬ್ರಹ್ಮತ್ವ ಗೋಚರಿಸುತ್ತದೆ. ಆದರೊಳಗೆ ಏಕೀ ಭಾವ ಪಡೆದ ಶಿವ ಯೋಗಿಗೆ—ಬಾಹ್ಯ ಜಗತ್ತಿನ ಜಡ ಭಾವದ ಸೋಂಕು ಇನ್ನೆಲ್ಲಿದೆ ? ಎನ್ನು ತ್ತಾರೆ—ಶ್ರೀ ಜಗದ್ಗುರು ರೇಣುಕ ಭಗವತ್ಪಾದರು.

ಘಟಾದಿಷು ಪೃಥಗ್ಭೂತಂ ಯಥಾಽಽಕಾಶಂ ನ ಭಿದ್ಯತೇ ।<br>
ತಥೋಪಾಧಿಗತಂ ಬ್ರಹ್ಮ ನಾನಾರೂಪಂ ಭಿದ್ಯತೇ ॥೪೨॥

ದಿಕ್ಕಾಲಾದ್ಯನವಚ್ಛಿನ್ನ ತೇಜೋರೂಪ ಸಮಾಶ್ರಯಾತ್ ।<br>
ಸ್ವಪರ ಜ್ಞಾನವಿರಹಾತ್ ಸ್ವಪರಾಜ್ಞ ಸ್ಥಲಂ ವಿದುಃ ॥೪೩॥

...........................................................................

ನೋತ್ಕೃಷ್ಟತ್ವಂ ನ ಹೀನತ್ವಂ ನೋ ಪರಿಷ್ಟಾನ್ನ ಚಾ ಪೃಥಃ ।<br>
ನ ಪಶ್ಚಾನ್ನೈವ ಪುರತೋ ನ ಬಾಹ್ಯಂ ಚ ನ ಚಾಂತರಂ ॥೪೭॥

...........................................................................

ಏಕೀಭಾವ ಮುಪೇತಾನಂ ಯೋಗಿನಾಂ ಪರಮಾತ್ಮನಾಂ ।<br>
ಪರಾಪರ ಪರಿಜ್ಞಾನ ಪರಿಹಾಸ ಕಥಾ ಕುತಃ ॥೪೯॥

(ಸಿ.ಶಿ. ಪರಿ—೨೦.)

ಶುದ್ಧ ಧ್ಯೇಯಾತ್ಮಕವಲ್ಲದ ಪೂಜಾ-ಧ್ಯಾನಾದಿ ವ್ಯವಹಾರದಿಂದಲೂ ಮಾನವ ಜೀವನದ ಯಾವದೇ ಹಿರಿಮೆ-ಗರಿಮೆ ರೂಪ ರೇಷೆ ಸ್ಪಷ್ಟವಾಗಿ ಗೋಚರವಾಗುವುದಿಲ್ಲ. ಅಲ್ಲಿ ಶಿವತ್ವವೂ ಇರುವುದಿಲ್ಲ. ಅ ಶಿವದೊಳಗೆ ಬೆರೆಯುತ್ತಾ ಹೋದಂತೆಲ್ಲ ಚೇತನ ಜೀವನು ಹೆಚ್ಚು ಹೆಚ್ಚು ಜಡವಾಗು ತ್ತಲೇ ಹೋಗುತ್ತಾನೆ. ಅಂಥವನಿಗೆ ಇನ್ನೆಲ್ಲಿಯ ಉತ್ತಮ ಶಾಂತಿ-ಸಮಾ

ಥಾನ. ಅವನನ್ನು ಹೊಂದಿದ ಸಮಾಜಕ್ಕಾದರೂ ಇನ್ನೆಲ್ಲಿಯ ಪ್ರಗತಿ-ಸುಸಂಘಟನೆ. ಹೀಗಾಗಿ ಜಗತ್ತಿಗೆ ಜಗತ್ತೇ ಕಣ್ಣೀರುಗರೆಯ ಬೇಕಾಗಿ ಬಂದಾಗ, ರಕ್ಷಕರು ಯಾರು? ಪ್ರತಿ ಕ್ರಿಯೆಯ ಭಾರವನ್ನು ಹೊತ್ತ ಧರ್ಮ ದೇವತೆಯೇ ಆಗ ಅವತರಿಸಬೇಕು; ಆಶ್ರಿತರಿಗೆ ಅಭಯವೀಯಬೇಕು. ಭಯಾತ್ಮಕ ಪ್ರೇರಣೆಯ ಬೆಡಗನ್ನು ಹೊಡೆದಟ್ಟಿ, ಅಮೃತ ಜಗತ್ತನ್ನು ಬೆಳಸಿ ಸಂತೋಷಗೊಳ್ಳಬೇಕು. ಸ್ವಾತ್ಮ ಭೋಗ್ಯತ್ವ ಶಿವ ಸಿದ್ಧಾಂತವನ್ನು ಸಂಸ್ಥಾಪಿಸಿ ವಿಶ್ವ ಹಿತವನ್ನು ಕಾಯ್ದು ಕೊಳ್ಳಬೇಕು, ಅಲ್ಲವೇ ?

ಸುಬದ್ಧ ಧರ್ಮ ಜ್ಞಾನ-ಧರ್ಮಾಚರಣೆಗಳಿಲ್ಲದೆ ಹೋದರೆ ಮಾನವೀಯತೆ ಪರಿ ಪೂರ್ಣವಾಗುವುದಿಲ್ಲ. ನೈತಿಕ-ಆಧ್ಯಾತ್ಮಿಕ ಮೌಲ್ಯಗಳು ನಿರ್ಲಕ್ಷಿಸಲ್ಪಡುವವರಿವಿಗೂ ಮಾನವ-ಮಾನವರಲ್ಲಿ ಹೋರಾಟ ತಪ್ಪದ್ದಲ್ಲ; ತೀಟೆ ನಿಂತದ್ದಲ್ಲ. ಸತ್ಯದ ಸತ್ಕೃತ್ ಸಾಕ್ಷಾತ್ಕಾರಕ್ಕೆ ಚೋದನಾ ಕ್ರಿಯೆಗಳೇ ಮೂಲ–ಶಿವನ ಒಲುಮೆಗೆ ಶಿವ ಪೂಜಾ ಕರ್ಮವೇ ಮೂಲ ಎಂದ ಹಾಗೆ. ಈ ಪ್ರಬಂಧದ ಐದನೆಯ ಪ್ರಕರಣದಲ್ಲಿ ಇದೇ ವಿಷಯವನ್ನು ಸಂದರ್ಭಕ್ಕೆ ಅನುಸಾರವಾಗಿ ಚಿತ್ರಿಸಲಾಗಿದೆ. 'ಶಿವಕ್ರಿಯಾಸಂಪತ್ತಿ' ಎಂಬ ಗ್ರಂಥದ ಅಭ್ಯಸನವೂ ಅಂತಹ ಸಂದರ್ಭದಲ್ಲಿ ಸಾಧಕನಿಗೆ ಸಹಕಾರಿ-ಮಾರ್ಗದರ್ಶಕ ಎನ್ನೋಣ.

ಸಂಘಾತ್ಮಕ(ಫೆಡರಲ್–Federal)ರಾಜ್ಯಾಂಗದ ಬದಲಿಗೆ, ಏಕಾತ್ಮ (ಯುನಿಟರಿ–Unitery) ರಾಜ್ಯಾಂಗ ಸ್ವೀಕಾರವೇ ವಿಶ್ವ ಶಾಂತಿಯ ಊರ್ಜಿತ ಸ್ಥಿತಿಗೆ ಸಹಾಯಕವೆಂದು ತಜ್ಞ ರಾಜಕಾರಣಿಯ ಹೇಗೆ ಅಭಿಪ್ರಾಯ ಪಡುವನೋ ಅದೇ ರೀತಿಯಲ್ಲಿ-ಮತ ಮತಾಂತರ ಸಂಧಿ ಸಂಶಿಷ್ಟ ಧರ್ಮ ಪ್ರಚೋದನೆಗಿಂತ, ಶಿವಾತ್ಮ ಚಿತ್ತ (Unitarian) ಪ್ರಾದುರ್ಭಾವ ಕಾರಣವಾದ ಶಿವ ಸಿದ್ಧಾಂತ ಧರ್ಮಸ್ವೀಕಾರವೇ—ಎಚ್ಚೆತ್ತ ಜೀವಿಗೆ 'ಪರಮಾತ್ಮ ಸ್ಥಲ' ಭೋಗವನ್ನು ದೊರಕಿಸಿ ಕೊಟ್ಟು, ಅವನ ಮೂಲಕ ಪ್ರಪಂಚದ ನಾಗರೀಕತೆಯನ್ನೂ ಸುಖೋನ್ನತಿಯನ್ನೂ ಬೆಳೆಸಲು ಬಯಸುತ್ತದೆಂದು ಪ್ರಜ್ಞಾವಂತ ಧರ್ಮಕಾರಣಿಯು ಅಭಿಪ್ರಾಯಪಡುತ್ತಾನೆ.

ಮನುಷ್ಯರೇ ಮೊದಲಾಗಿ ಕ್ರಿಮಿ-ಕೀಟಗಳ ವರೆಗಿನ ಎಂಭತ್ತುನಾಲ್ಕು ಲಕ್ಷ ಜೀವರಾಶಿಗಳ ದೇಹಗಳಲ್ಲಿ ಭಿನ್ನ ಭಿನ್ನವಾಗಿ ಪ್ರತಿಫಲಿಸುತ್ತಿರುವ

ಮಹಾದೇವನ ಯಥಾರ್ಥ ವ್ಯಾಪಕಸತ್ವವನ್ನು ಅರಿದು, ಎಲ್ಲ ಜೀವಿಗಳೊಡನೆ ಒಂದಾಗಿ ಬೆಳಗುವ ಪ್ರತಿಭೆ ಆ ಜಾಗದಲ್ಲಿ ಸಾಧಕನಿಗೆ ಅಖಂಡವಾಗಿ ದೊರಕೊಳ್ಳುತ್ತದೆಂಬ ನಿರ್ಣಯಕ್ಕೆ ಬಂದುದೂ ಆಗಿದೆ. ಸತ್ಯಶುದ್ಧ ಶಿವಧರ್ಮಿಯ ಉತ್ಕಟ ಪ್ರೀತಿ–ತಾನು ಆ ಸಾಮಾಜಿಕ ಸಂಘದಲ್ಲಿ ತತ್ವಶಃ ಒಡಗೂಡಿ ಇದ್ದುಕೊಂಡು, ಅಲ್ಲಿ ಹೇಳಿದಂತೆ ಕ್ರಮವಾಗಿ ನಡೆದು–ಆ ಋತ–ಪರಬ್ರಹ್ಮದ ಶುಭತೇಜವೇ ಆಗಬೇಕೆಂಬುದು, ಇತಿಹಾಸಿಕವಾಗಿ ಹೇಳುವುದಾದರೆ, ಕ್ರಿಸ್ತಪೂರ್ವಕ್ಕೂ ಹಿಂದೆಯೇ–ಅತಿ ಪುರಾತನಕಾಲದಿಂದಲೂ ಭರತಖಂಡದಲ್ಲಿ ಇಂಥ ಧರ್ಮಪ್ರೇಮಿಗಳು ಇದ್ದೇಇದ್ದರು–ಎನ್ನೋಣ.

ಸರ್ವೇಷಾಮಾತ್ಮಭೇದಾನಾ ಮುತ್ಕೃಷ್ಟತ್ವಾತ್ ಸ್ವತೇಜಸಾ ।
ಪರಮಾತ್ಮಾ ಶಿವಃ ಪ್ರೋಕ್ತಃ ಸರ್ವಗೋऽಪಿ ಪ್ರಕಾಶವಾನ್ ॥೨೯॥
ಯಥಾ ವ್ಯಾಪ್ಯ ಜಗತ್ಸರ್ವ ಸ್ವಭಾಸಾ ಭಾತಿ ಭಾಸ್ಕರಃ ।
ತಥಾ ಸ್ವಶಕ್ತಿರ್ವ್ಯಾಪ್ಯ ಪರಮಾತ್ಮಾ ಪ್ರಕಾಶತೇ ॥೨೪॥
ವಿಶ್ವತೋ ಭಾಸಮಾನೋऽಪಿ ವಿಶ್ವಮಾಯಯಾ ವಿಲಕ್ಷಣಃ ।
ಪರಮಾತ್ಮಾ ಸ್ವಯಂಜ್ಯೋತೀ ರೂಪೋ ಜೀವಾತ್ಮನಾಂ ಭವೇತ್ ॥೩೫॥

(ಸಿ.ಶಿ. ಪರಿ–೧೮.)

"ತನ್ನ ಉನ್ನತಿ ವಿಶ್ವದ ಉನ್ನತಿ; ತನ್ನ ವಿನಾಶ ವಿಶ್ವದ ವಿನಾಶ" ಈ ಮಾತನ್ನು 'ಲಿಂಗ' ಶಬ್ದದ ನಿರ್ವಚನದಪ್ರಕಾರ ಬಿಡಿಸಿ ನೋಡುವುದಾದರೆ, "ಯಾವ ಅಂಡಾಂಡ–ಪಿಂಡಾಂಡ–ಬ್ರಹ್ಮಾಂಡ ಜನ್ಮಾದಿ ವ್ಯವಹಾರ ಕಾರಣೀಭೂತ ಪರಬ್ರಹ್ಮವೊಂದುಂಟೋ ಅದರ ಸಂಕುಚಿತ ಭಾವವೇ ಸರ್ವಪ್ರಪಂಚದ ವಿನಾಶವು, ವಿಕಸನ ಭಾವವೇ ಉತ್ಪತ್ತಿಯು. "ಸತ್ಯಂ ಶಿವಂ-ಸುಂದರಂ" ಪ್ರಕೃತಿರಂಜನಾ ಭಾವವೇ ಅದರ ಪ್ರವೃದ್ಧಮಾನ ಅವಸ್ಥೆಯು"—

ಲಿಂಗಲಕ್ಷಣಮುಕ್ತಂ ಶ್ರೀಕಾಲೋತ್ತರಾದಿಷು ।
ಲೀಯತೇ ಯತ್ರ ಭೂತಾನಿ ನಿರ್ಗಚ್ಛಂತಿ ಯತಃ ಪುನಃ ।
ತೇನ ಲಿಂಗಂ ಪರಂ ವ್ಯೋಮ ನಿಷ್ಕಲಃ ಪರಮಃ ಶಿವಃ ॥

(ಸೂ.ಸಂ. ಅಧ್ಯಾಯ ೪. ತಾತ್ಪರ್ಯದೀಪಿಕಾ ವ್ಯಾಖ್ಯಾನ).

ಎಂದು ಸ್ಪಷ್ಟೀಕರಣವಾಗುವುದು, "ಸಕಲ-ನಿಷ್ಕಲ ಸಮಸಮುಚ್ಚಯ ತತ್ತ್ವಾರ್ಥಗರ್ಭವಾದ ಇಂಥ ನಿಜಲಿಂಗಿಧರ್ಮವಾದರೂ ಇವೊತ್ತಿನ ಪವಿತ್ರ ಭಾರತೀಯ ರಾಜ್ಯಸತ್ತಾತ್ಮಕ ವ್ಯವಸ್ಥೆಯನ್ನೇನೂ ಸರ್ವಥಾ ವಿರೋಧಿಸುತ್ತಿಲ್ಲ. ಸರ್ವಧರ್ಮಪ್ರಿಯ ತತ್ತ್ವಸಿದ್ಧಾಂತವನ್ನೇ ಅನುಸರಿಸಿ ಮುನ್ನಡೆಯುತ್ತಿದೆ–ವೀರಶೈವ" ಎಂದು ತಿಳಿಸಹೊರಟುದು ಯಥಾರ್ಥವೇ ಆಗಿದೆ.

ಪರಿಶುದ್ಧ ಮನದಿಂದ ಕ್ರಮಪ್ರಕಾರ ಶಿವಲಿಂಗಾರ್ಚನೆ ಮಾಡುವ ಮಂದಿ, ಮಾನವೀಯತೆಯ ವಿಕಾಸಕ್ಕೆ, ಪ್ರಾಣಿ-ಪ್ರಾಣಿ ಸೌಹಾರ್ದತೆಗೆ ಯಾವಾಗಲೂ ಹಾತೊರೆಯುವವರೇ ಆಗಿರುತ್ತಾರೆಂದು ತಿಳಿಸುವ ಈ ಪ್ರಕರಣವನ್ನು ಇಷ್ಟಕ್ಕೆ ನಿಲ್ಲಿಸೋಣ.

"ಗಿಳಿಯ ಹಂಜರವಿಕ್ಕಿ, ಸೊಡರಿಗೆಣ್ಣೆಯ ನೆರೆದು,
ಬತ್ತಿಯನಿಕ್ಕಿ ಬರವ ಹಾರುತಿದ್ದೆ ನೆಲಗವ್ವಾ,
ತರಗೆಲೆ ಗಿರಿಕೆಂದೊಡೆ ಹೊರಗನಾಲಿಸುವೆ,
ಅಗಲಿದನೆಂದೆನ್ನಮನ ಧಿಗಿಲೆಂದಿತೆಲಗವ್ವಾ
ಕೂಡಲಸಂಗನ ಶರಣರು ಬಂದು-ಬಾಗಿಲಮುಂದೆ ನಿಂದು
'ಶಿವಾ' ಎಂದೊಡೆ ಸಂತೋಷಪಟ್ಟೆ ನೆಲಗವ್ವಾ"

*   *   *   *

## ೮

"ಬಲವಾನಪ್ಯಶಕ್ತೋಽಸೌ ಧನವಾನಪಿ ನಿರ್ಧನಃ ।
ಶ್ರುತವಾನಪಿ ಮೂರ್ಖಶ್ಚ ಯೋ ಧರ್ಮವಿಮುಖೋ ಜನಾಃ ॥"

ಅತಿ ಶಕ್ತಿವಂತನಾಗಿದ್ದರೇನಂತೆ, ಯಾವಾತನು ಧರ್ಮದಿಂದ ದೂರವಾಗಿರುವನೋ ಆ ಮನುಜನು ಅಶಕ್ತನು. ಅಪಾರ ಧನಿಕನು ಆಗಿದ್ದರೆ ತಾನೇ ಏನಂತೆ, ಯಾವಾತನು ಧರ್ಮ ಬಾಹಿರನೋ ಆ ಮನುಜನು ನಿರ್ಧನಿತನು. ಮಿತಿಮೀರಿ ಕಲಿತಿದ್ದರೂ ಆಗುವ ಪ್ರಯೋಜನವೇನು?

ಯಾವಾತನು ಧರ್ಮ ಮಾರ್ಗವನ್ನು ಉಲ್ಲಂಘಿಸುವನೋ ಆ ಮಾನವನು ಮೂರ್ಖನು-ಇದು ನೀತಿವಂತರ ಅಭಿಪ್ರಾಯ; ಇದು ಬಲ್ಲ ವಲಯದ ಮಾತು; ಇದು ವಿಶ್ವೋದ್ಧಾರ ವಾಣಿ. ಈ ನಿರ್ಣಯದ ಮೇಲೆ ಶಿವ ಧರ್ಮದ ಯೋಗ್ಯತೆ, ಅದರ ಪ್ರಚಾರ, ಆತ್ಮ ಶ್ರೇಯದ ಬಗ್ಗೆ ಮತ್ತು ವಿಶ್ವ ಮತದ ಬಗ್ಗೆ ಅದಕ್ಕಿರುವ ಧ್ಯೇಯ-ಧೋರಣೆ, ವಿಶ್ವ ಶಾಂತಿ ಪ್ರಾರ್ಥನೆ-ಇದಿಷ್ಟನ್ನೂ ಈ ಎಂಟನೆಯ ಪ್ರಕರಣದಲ್ಲಿ ಕೊಂಚ ಕೊಂಚ ಹಿಸುಕಿ ನೋಡೋಣ; ಸತ್ಯವನ್ನರಿತು ಸಂತೋಷಿಸೋಣ.

### ಅ) ಪರಿಶುದ್ಧ ಮಾನವೀಯತೆಗಾಗಿ ಏಕಾಗ್ರ ತಪಸ್ಸು.

ಸಾಧಕ ತನ್ನ ಪೂರ್ವಿಕರನ್ನು ಅನುಸರಿಸಿ ಮನೆವಾರ್ತೆಯನ್ನು ಕಲಿತು ಕೊಂಡನು. ದಯಾ, ಧರ್ಮ, ಪರೋಪಕಾರ ಮುಂತಾದ ಸಾಧಾರಣ ಧರ್ಮಗಳನ್ನು ಕುಲ ಪುರೋಹಿತರ ಶಿಕ್ಷಣದಿಂದಲೇ ತಿಳಿದು ಕೊಂಡನು ಇನ್ನು ಮೇಲ್ಮಟ್ಟದ ವಿಶೇಷ ಧರ್ಮ ಪರಿಜ್ಞಾನಿಯಾಗಬೇಕು; ತೀವ್ರತರ ಪ್ರಾಪಂಚಿಕ ದುಃಖದಿಂದ ಬಿಡುಗಡೆ ಹೊಂದಬೇಕು—ಎಂದು ಆಲೋಚಿಸಿ, ಆ ಮಹಾ ಮಾರ್ಗವನ್ನು ತಿಳಿಸಿಕೊಡಲು ಸ್ವಕೀಯ ಆಚಾರ್ಯರನ್ನು ಬೇಡಿಕೊಂಡನು. ಸರ್ವಯಜ್ಞ ಭೋಕ್ತಾರನಾದ ಪರಮೇಶ್ವರನ ಮುಖ ವನ್ನು ತನ್ನತ್ತ ತಿರುಗಿಸಿಕೊಳ್ಳಲು ಆಶಿಸಿ, ಶ್ರೀ ಗುರುವಿನ ಅಜ್ಞೆಯಂತೆ ಶಿವ ವ್ರತಿಯಾದನು, ನಿಷ್ಠೆ ಬಲಿಯಿತು. ಗುರಿ ತಪ್ಪಲಿಲ್ಲ. ಹೊರಗಣ್ಣಿಗೆ ಬೇರೆ ಬೇರೆಯಾಗಿ ಅನೇಕ ಪ್ರಕಾರವಾಗಿ ತೋರಿ ಬರುವ ಅನಂತ ಕೋಟಿ ಜೀವರ ಏಕತ್ವವನ್ನು (Unity in diversity) ಒಳಗಣ್ಣಿನಿಂದ ನೋಡಿದನು. ಅವನ ನೆಚ್ಚಿನ ಶಿವೋಪಾಸನೆ ಅದಕ್ಕೆ ಸಂಪೂರ್ಣವಾಗಿ ನೆರವಾಯಿತು. ವಾಸ್ತವಿಕವಾಗಿ ಪರಮ ಶಿವಕಾರುಣ್ಯವೂ ದೊರಕೊಂಡು ಸಾಧಕನು ಸರ್ವ ಸಂದೇಹ ವಿಮುಕ್ತನಾದನು; ಸರ್ವ ಸಂತಾಪ ವಿದೂರನಾದನು.

'ಏಕೋಽಹಂ ಬಹುಸ್ಯಾಂ ಪ್ರಜಾಯೇಯಂ.'

ಎಂಬ ಶೀರ್ಷಿಗೆ, ತೀವ್ರ ವೈರಾಗ್ಯಶೀಲರಲ್ಲದವರು ಬರುವುದು ಅಪೂರ್ವ!

ತೀವ್ರ ವೈರಾಗ್ಯವೆಂದರೇನು? ಶರೀರಾಭಿಮಾನ ಶೂನ್ಯರಾಗುವುದೇ? ಸುತ್ತಣ ಜಗತ್ತಿನ ಭೋಗ ಜೀವನವನ್ನು ಧಿಕ್ಕರಿಸಿ, ಮತ್ತಾವುದಾದರೂ

ಸ್ವರ್ಗ ಲೋಕದ ಯಾತ್ರೆಯನ್ನು ಕೈಗೊಳ್ಳುವುದೆ? ಹಾಗೆ ಎಣಿಸುವುದು ಸುಲಭದ ಕೆಲಸವೂ ಅಲ್ಲ.

ಸದಾ ಕಾಲದಲ್ಲೂ ಸಚ್ಚಿದಾನಂದ ಪರಮೇಶ್ವರ ತತ್ತ್ವ ನಿರೀಕ್ಷೆ, ಶಿವಜೀವ ಭೇದ–ಪ್ರತಿಭೇದ ತಾತ್ಪರ್ಯ ನಿರ್ಣಯ, ಶುಭ ನಿಸರ್ಗದ ಚಿಂತನ–ಮಂಥನ ವಿವೇಕ, ನಿಯಮಕ್ಕಿಂತ–ಅಗತ್ಯಕ್ಕಿಂತ ಹೆಚ್ಚಾದ ವಸ್ತುಗಳ ಮೇಲೆ ನಿಯಂತ್ರಣ, ವಿವಿಧ ಭೋಗೋಪಭೋಗದ ಮೇಲಿನ ಹತೋಟಿ ಪರವಂಚನೆ ಪರದ್ರೋಹಾದಿ ಭ್ರಷ್ಟಾಚಾರಕ್ಕೆ ಮನ ಎರಗದಿರುವಿಕೆ, ಸ್ವಧರ್ಮಾಭಿಮಾನವನ್ನೂ ಸ್ವರಾಷ್ಟ್ರಾಭಿಮಾನವನ್ನೂ ವೃದ್ಧಿಗೊಳಿಸಿ ಕೊಳ್ಳುವಿಕೆ ಪರಾವಲಂಬಿಯಾಗದೆ–ಸ್ವಯಂ ದುಡಿಮೆಯಿಂದ ಪ್ರಾಮಾಣಿಕತನದಿಂದ ಆರ್ಜಿಸಿದ ವಸ್ತುವಿನಿಂದ ಗುರು-ಲಿಂಗ-ಜಂಗಮ ಸೇವೆ, ಅನಾಥರ ರಕ್ಷಣೆ, ಶಿವದೀಕ್ಷಾ ವಂಶದಿಂದ ದ್ವಿಜತ್ವ ಸಿದ್ಧಿದ್ವಾರಾ ಶಿವತ್ವವನ್ನು ಅಭಿವೃದ್ಧಿ ಪಡಿಸಿಕೊಳ್ಳುವಿಕೆ, ಶಿವಸಿದ್ಧಾಂತಾಧ್ಯಯನ, ಶಿವಲಿಂಗಾರ್ಚನಾದಿ ಸತ್ಯಮಾರ್ಗಾಚರಣೆ, ಕೊನೆಗೂ ಚಿದ ಚಿಲ್ಲಿಂಗದಲ್ಲಿಯೆ ನಿರ್ಯಾಣ ಸಂಕಲ್ಪ, ಸ್ವಯಂಭೂ–ಸ್ವಯಂಜ್ಯೋತಿ ಪರಶಿವಬ್ರಹ್ಮ ಕೃಪಾವಲಂಬನ ಜೀವನ– ಇದೆಲ್ಲವೂ ತೀವ್ರ ವೈರಾಗ್ಯದ ಮೂಲ ಲಕ್ಷಣವು. ಸಾಧಕನು ಹೀಗಿದ್ದುಕೊಂಡರೇನೇ ಅವನಿಗೆ ರುದ್ರತ್ವ ಪ್ರಾಪ್ತಿ. ಸಮಸ್ತ ತೊಡಕುಗಳಿಂದ ವಿರಹಿತವಾದ ನಿತ್ಯ ನಿರ್ಮಲವಾದ ನಿರ್ಭಯಲಿನಲ್ಲಿ ಸೇರಿ ಅವನು ಅಖಂಡ ಆನಂದಗೊಳ್ಳುತ್ತಾನೆ–ಎಂದು ಶಿವಾಗಮಗಳಲ್ಲಿ ಹೇಳಿದೆ.

ಸ್ವಾತ್ಮ ಘಾತಕವಲ್ಲದ, ವಿಶ್ವಘಾತಕವಲ್ಲದ, ಇಂಥ ಉತ್ಕೃಷ್ಟ ಸಾಧನೆಯನ್ನು ಮಾಡಿಯೆ ತಾನು ಪರಿಶುದ್ಧ ಮಾನವನಾಗಬೇಕೆಂದು–ದೇವ ಮಾನವನಾಗಬೇಕೆಂದು–ಶಿವಭಕ್ತನಾಗಬೇಕೆಂದು ಆದಿಯ ಮಾನವ ಇಚ್ಛಿಸಿದನೆಂದು ಭಾವಿಸೋಣ.

ಇದಕ್ಕೆ ಪ್ರಮಾಣ :

ತೇಷಾಮವಶ್ಯ ಕರ್ತವ್ಯಾಯಾಃ ಶಿವದೀಕ್ಷಾಯಾಃ ।

“ರುದ್ರೋ ಭೂತ್ವಾ ಯಜೇದ್ರುದ್ರಂ ನಾ ರುದ್ರೋ ರುದ್ರಮರ್ಚಯೇತ್” ಇತಿ ಶಂಕರ ಸಂಹಿತೋಕ್ತ ಪ್ರಮಾಣ ಪರಿಪ್ರಾಪ್ತ ರುದ್ರಾರಾಧನ ಯೋಗ್ಯತಾ ಶಿವತ್ವ ಪ್ರತಿಷ್ಠಾ ಪನಯನ ಪ್ರಯೋಜಕತ್ವಾತ್ತಾದೃಶ ಶಿವ

ದೀಕ್ಷಾವತಾ ಮುಪನಯನಂ ವಿನಾಪಿ, ತೇಷಾಂ ತದ್ಬಲೇನೈವ ದ್ವಿಜತ್ವ ದ್ವಾರಾ, ರುದ್ರಾಧ್ಯಯನ ರುದ್ರಾರಾಧನಾದಿಷ್ವಧಿಕಾರಿತ್ವ ಸಿದ್ಧೇಶ್ಚ । ಇತಿ ॥

(ವೀ.ಸ. ಪ್ರಕರಣ ೭.)

ತಾನು ಜ್ಞಾನದಿಂದಲೂ ತಪಸ್ಸಿನಿಂದಲೂ ಆರ್ಜಿಸಿದ ಬ್ರಹ್ಮವಿದ್ಯೆಯನ್ನು ಪಾತ್ರವರಿತು ಇತರರಿಗೆ ಉಪದೇಶಿಸಬೇಕು. ತಾನು ಸಿದ್ಧಗೊಳಿಸಿದ ಶುದ್ಧಾನವನ್ನು ಅಗ್ನಿಹೋತ್ರದ ಆಹುತಿಯ ಮೂಲಕ ನೈವೇದ್ಯ ರೂಪದಿಂದ ಇಷ್ಟ ದೇವತೆಗಳಿಗೆ ಅರ್ಪಿಸಬೇಕು. ಆಹಾರ ದಾನ ದೃಷ್ಟಿಯಿಂದ ಮತ್ತು ಪೋಷಕ ದೃಷ್ಟಿಯಿಂದ ಹಸಿದವರಿಗೂ ಪಶುಗಳಿಗೂ ನೀಡಬೇಕು.

ಯಾರಿಗೆ ಜ್ಞಾನ-ತಪಸ್ಸು-ಕರ್ಮ-ಯೋಗಗಳೆಂಬ ಚತುರ್ಯೋಗ ಸಮುಚ್ಚಯದಿಂದ ಬ್ರಹ್ಮ ವಿದ್ಯೆಯನ್ನು ತಿಳಿಸುವುದಕ್ಕೆ ಸಾಧ್ಯವಿಲ್ಲವೋ ಅಂಥ ಮಂದಾಧಿಕಾರಿಗಳಿಗೆ—ಜಗನ್ಮಿಥ್ಯತ್ವವನ್ನು ನಿಮಿತ್ತ ಮಾಡಿಕೊಂಡು, ಅಶುದ್ಧವೂ ಅಸಾರವೂ ಆದ ನದಿಯ ಪ್ರವಾಹವನ್ನು—ಪ್ರದೀಪ ಸಂತಾನದಂತೆ ಇರುವ ಬಾಳೆಯಕಂಬವನ್ನು, ಸಮುದ್ರ ತರಂಗದ ನೊರೆ–ತೆರೆ–ಗುಳ್ಳೆಗಳನ್ನು, ಮರುಭೂಮಿಯ ಬಿಸಿಲ್ಗುದರೆಯನ್ನು, ಕಂಡ ಕನಸನ್ನು ಉದಾಹರಣೆ ಕೊಡುತ್ತಾ–ಅವರ ಮನಸ್ಸಿನಲ್ಲಿ ಲೋಕದ ಬಾಳಿನ ಅಶಾಶ್ವತ ಸ್ಥಿತಿಯನ್ನು ಹುಟ್ಟು ಹಾಕಬೇಕು. ಅತ ಏವ, ಅಂಥ ಲೌಕಿಕರನ್ನು ನಾನಾ ಬಗೆಯ ಸುಲಭೋಪಾಯದ ಮೂಲಕ ಬ್ರಹ್ಮ ಮೀಮಾಂಸೆಗೆ ಪ್ರೇರಿಸಬೇಕು ಎಂದು ಶ್ರುತಿವಾಣಿಯೂ ಇದೆ.

ಯತ್ಸಪ್ತಾನ್ನಾನಿ ಮೇಧಯಾ ತಪಸಾಽಜನಯತ್ ಪಿತೇತಿ ।
ಮೇಧಯಾ ಹಿ ತಪಸಾಽಜನಯತ್ ಪಿತಾ ।........
...................... .. .........................................
ಸ ದೇವಾನಪಿ ಗಚ್ಛತಿ ಸ ಊರ್ಜ ಮುಪ ಜೀವತೀತಿ ಪ್ರಶಗ್ಂಸಾ ॥೨॥

(ಬೃ.ಉ. ೧/೫.)

ಹೇಗೇ ಆದರೂ, 'ದೇವ–ಜೀವ–ಜಗತ್' ಶುಭ ಪ್ರಜ್ಞಾವಂತರಾದ; ಒಳ್ಳೆಯದು-ಕೆಟ್ಟದು, ಪಾಪ-ಪುಣ್ಯ ಮಂಗಳ-ಅಮಂಗಳ ಚಿಕಿತ್ಸಕ ಬುದ್ಧಿಯುಳ್ಳ ಜನರು ಇಂದ್ರ ಪದವಿ, ಚಂದ್ರ ಪದವಿ, ಸಾಮ್ರಾಟ್ ಸ್ಥಾನದ

ಸಂಪಾದನೆಗೋಸುಗ ಬಳಲುವುದಿಲ್ಲ-ಅಳಲುವುದಿಲ್ಲ; ಸ್ವರ್ಗದ ಸ್ವಾರ್ಥಕ್ಕೆ ತೊಳಲುವುದಿಲ್ಲ-ಉಮ್ಮಳಿಸುವುದಿಲ್ಲ. ' ಸರ್ವಂ ಶಿವಮಯಂ ಜಗತ್ ' ಅನುಭೂತಿ ಆರಳಿ ನಿಂತ ಅವರಿಗೆ, ' ಅಲ್ಲಿ-ಇಲ್ಲಿ ' ಎಲ್ಲವೂ ಒಂದೇ. ಒಳ-ಹೊರಗಿನ ಕಲ್ಮಷವನ್ನೆಲ್ಲಾ ತೊಳೆದುಕೊಂಡು ಸ್ವಚ್ಛವಾದ ಮನಸ್ಸು-ಮತ್ತೆ ಆ ಕೊಳೆಯನ್ನು ಅಂಟಿಸಿಕೊಳ್ಳುವುದಕ್ಕೆ ಅರ್ಥಾತ್ ಪ್ರಾಪಂಚಿಕ ಸೌಖ್ಯ, ಭೋಗ ಭಾಗ್ಯ, ದಿವದ ಫಲವನ್ನಾದರೂ ಅನುಭವಿಸುವುದಕ್ಕೆ ಒಪ್ಪುವುದಿಲ್ಲ. ಹೃದಯ ಶಾಶ್ವತ ಶಿವಾನುಗ್ರಹವನ್ನು ಪಡೆದು ಪರಮ ಶಾಂತರಾದವರಿಗೆ ಶಿವಭಕ್ತಿ ಪ್ರೇಮೋನ್ಮಾದದಲ್ಲಿ ಮೈಮರೆತು ಬೆಳ್ಳನೆ ಬೆಳಗುತ್ತಿರುವವರಿಗೆ, ಸಮಸ್ತ ವ್ಯಾಕುಲ ವಿರಹಿತವಾದ ಆ ದಿವ್ಯಾವಸ್ಥಾಲಾಭಕ್ಕಿಂತ ಮಿಗಿಲಲ್ಲದ-ಸಾಮಾನ್ಯ ತರಹೆಯ ಮುಕ್ತಿಯಾದರೂ ಏಕೆ ಬೇಕು? ಎಂತಲೇ, ಶಿವಾರ್ಪಿತವಲ್ಲದ-ಗುರುಲಿಂಗ ಜಂಗಮಕ್ಕೆ ವಶವರ್ತಿಯಾದ ತನು-ಮನ-ಧನ ಭೋಗಕ್ಕೆ ಶಿವಶರಣರು, ಇತಿ ಶ್ರೀ ಸುಪ್ಪಿ ಹೇಳಿದುದು!

> ಸಾಲೋಕ್ಯಂ ತವ ಪೂಜನೇ, ಶಿವ-ಮಹಾದೇವೇತಿ ಸಂಕೀರ್ತನೇ
> ಸಾಮೀಪ್ಯಂ ಶಿವಭಕ್ತಿ ಧುರ್ಯ ಜನತಾ ಸಾಂಗತ್ಯ ಸಂಭಾಷಣೇ ॥
> ಸಾರೂಪ್ಯಂ ಚ ಚರಾಚರಾತ್ಮಕ ತನುಧ್ಯಾನೇ ಭವಾನೀಪತೇ
> ಸಾಯುಜ್ಯಂ ಮಮ ಚಿತ್ರ ಮತ್ರ ಭವತಿ ಸ್ವಾಮಿನ್ ಕೃತಾರ್ಥೋ-
> ಸ್ಮ್ಯಹಮ್ ॥

*   *   *   *

ಭೂಮಿ ಮೊದಲಾಗಿ ಶಿವದವರೆಗೆ ಇರುವ ಮೂವತ್ತಾರು ತತ್ತ್ವಗಳ ಏಕತೆಯ ಅಭಿನ್ನ ಸಂಜ್ಞೆಯಾದ ' ಜೀವ–ದೇವ ' ನಿತ್ಯತ್ವ ನಿರ್ಣಯವು ಸ್ವವ್ಯಾಹತ ದೋಷವನ್ನು ತರಲಾರದು. ಅಲ್ಲದೆ-ಆಧ್ಯಾತ್ಮಿಕದ ದೀರ್ಘ ಪರಿಶ್ರಮ, ಚಿತ್ತೈಕಾಗ್ರತೆ, ಇನ್ನಿತರ ಅಮೂಲ್ಯ ಅನುಭವಗಳಿಂದ ಜನಿಸಿದ ' ಸ್ಥಿತ ಪ್ರಜ್ಞೆ 'ಯು ಔಪಾಧಿಕ ಭ್ರಮೆಯೆಂದಂತೂ ಅನ್ನಿಸಿಕೊಳ್ಳುವುದೇ ಇಲ್ಲ. ಮೊಸರನ್ನು ಹದವರಿತು ಕಡೆದರೆ ಬೆಣ್ಣೆ ಹೊರ ಹೊಮ್ಮುವಂತೆ, ಒಳ್ಳೊಳ್ಳೆಯ ಕ್ರಿಯೆಗಳಿಂದ-ಯೋಗ ಸಾಧನೆಯಿಂದ-ಜ್ಞಾನದಿಂದ ಜಾಗೃತವಾದ ಅಂತರ್ಜ್ಯೋತಿಯು ತನ್ನಲ್ಲಿ ಪ್ರೇಮದಿಂದಿರುವ ಜೀವನನ್ನು ಶಿವತ್ವಕ್ಕೆ ಏರಿಸುವುದೆಂದರೆ-ಅಂಥ ಪರಿಣಾಮದಲ್ಲಿ ಅನಿಶ್ಚಿತತೆ ಏನೇನೂ ಉಳಿದಿ

ರುವುದಿಲ್ಲ. ಪ್ರೇಮಕ್ಕೊಸುಗ ಪ್ರೇಮ. ಪರಶಿವ ಮೂರ್ತಿಯನ್ನು ಉಪಾಸಿಸುವುದರಲ್ಲಿ ಸಾಧಕನು ವ್ಯಕ್ತ ಪಡಿಸಿದ ಅಕುಟಿಲ ಅನುರಾಗಕ್ಕೆ ಆ ಪರಮೇಶ್ವರನು ಒಲಿದು, ತನ್ನ ವಿರಾಟ್ ಸ್ವರೂಪ ದರ್ಶನವನ್ನು ಅವನಿಗೆ ನೀಡಿದನು. ಆಗಬೇಕಾದ್ದು ಆಯಿತು.

ಲೋಕವೆಲ್ಲ ಅರಿದಿರುವಂತೆ-ಅಂತಃ ಪ್ರತಿಭೆ ಪಡೆದ ಕವಿಜನರು, ರಾಗ-ಭಾವ-ತಾಳ ತ್ರಿಪುಟೀ ಮಿಲನದಲ್ಲಿ ಶತ್ತ್ವಶಃ ನಿಷ್ಣರಾದ ಸಂಗೀತಗಾರರು, ಹಸ್ತ ಚಾತುರ್ಯದ ಆಧಾರದಿಂದ ಗೌರವಿತರಾದ ಶಿಲ್ಪಿ-ಚಿತ್ರಗಾರ ಮೊದಲಾದವರು, ಮಹರ್ಷಿ ವೃಂದ-ಸಾಧು-ಸಂತ-ಶಿವಧರ್ಮಿ ಜಗತ್ತೆಲ್ಲವೂ, ವ್ಯಕ್ತ ಜಡ ಪ್ರಕೃತಿಯಲ್ಲಿ ಅವ್ಯಕ್ತ-ಅಜಡ-ಅಮೃತ-ಆನಂದಮಯ ಪರಮೇಶ್ವರನನ್ನು ಬಿಚ್ಚುಗಣ್ಣಿನಿಂದ ಈಕ್ಷಿಸಿದರು ; ಆ ಮಹಾತತ್ತ್ವದೊಳಗಾದರು. ಅವರವರ ವಿಜಯಕ್ಕೆ ಅವರವರ ಉತ್ತಮೋತ್ತಮ ಸಲಕರಣೆಗಳೇ–ಎದೆಯ ಧೈರ್ಯವೇ–ಮುಂಗೈ ಚೂಣಿಯೇ ಮುಖ್ಯ ಕಾರಣ. ಭಕ್ತಿಯ ಶಕ್ತಿ ಅಜೇಯ ಅನುಪಮ. ಅದು ಸಂಚಿತ-ಆಗಾಮಿ-ಪ್ರಾರಬ್ಧ ದೋಷವನ್ನು ಬೆದರಿಸಿ ಓಡಿಸಬಲ್ಲುದು.

ಎಲ್ಲರಂತೆ ವೀರಶೈವನೂ ಶಿವನಲ್ಲಿ ಭಕ್ತಿಯಿಟ್ಟನು. ಶಿವದೀಕ್ಷಾಬದ್ಧನಾದನು. ಹಸ್ತದಲ್ಲಿ ಶಿವಲಿಂಗಧಾರಣೆ, ಹಣೆಯಲ್ಲಿ ಭಸ್ಮಧಾರಣೆ, ಕೊರಳಲ್ಲಿ ರುದ್ರಾಕ್ಷಧಾರಣೆ, ಬಾಯಿಯಲ್ಲಿ ಶಿವಪಂಚಾಕ್ಷರೀ ಪುರಶ್ಚರಣೆ, ಹೃದಯ ಪರಿಶುದ್ಧಿಗಾಗಿ ಶಿವಪ್ರಸಾದ ಸೇವನ, ಕಾಯೇನ ವಾಚಾ ಮನಸಾ ಪರಮೇಶ್ವರನಲ್ಲಿ ಶರಣಾಗತಿ-ಮುಂತಾದ ವಿಶಿಷ್ಟ ಸಾಧನಾ ಶಕ್ತಿಯಿಂದ ಆ ಅನಿರ್ವಚನೀಯ ದೇವದೇವನ ಮುಖವನ್ನು ತನ್ನ ಕಡೆಗೆ ತಿರುಗಿಸಿ ಕೊಂಡನು. ನಿತ್ಯನೈರ್ಮಲ್ಯವಂತನಾಗುವುದರ ದ್ವಾರಾ-ನಿಸರ್ಗದ ನಿತ್ಯ ವಿನೂತನ ಸೊಬಗಿನ ಸಾರವನ್ನು ಉಂಡು ಪುಷ್ಟಿಗೊಂಡನು. ಸಮಾನ ಯುಗಧರ್ಮಕ್ಕೆ ಅನುಸಾರವಾಗಿ ವಿಶ್ವದ ಅಭ್ಯುದಯವನ್ನು ವೀಕ್ಷಿಸಿದನು. ಲೌಕಿಕ-ಪಾರಲೌಕಿಕ ಜೊತೆಯಾದ ಮಧುರ ಜೀವನವನ್ನು ಸಾಗಿಸಿ, ಪುಣ್ಯ ನಿಧಿಯಾದನು.

ಅವನ ನಿರೀಕ್ಷೆಯಂತೆ–ನಿರ್ಗುಣ ಬ್ರಹ್ಮನೇ ಸುಗುಣ ಬ್ರಹ್ಮನು. ಚಿತ್ರವೂ-ತಲೆಯೂ ಇದ್ದಂತೆ, ಬೆಳದಿಂಗಳೂ ತಂಪೂ ಇದ್ದಂತೆ, ಆ ಏಕರಸ-

ಅಂಥ ' ಶಿವ-ಶಕ್ತಿ ' ಏಕರಸ ಫಲ ಶ್ರುತಿಯಲ್ಲಿ ಸಮರಸನಾಗುವುದೇ ಶಿವ ಭಕ್ತಿಯ ಸ್ಪಷ್ಟವಾದ ಕುರುಹು. ಏಕಾಗ್ರ ತಪಸ್ಸು, ಶಿವಾರ್ಚನಾ ಕರ್ಮ, ಶಿವಸ್ವರೂಪ ಧ್ಯಾನ, ಶಿವಾಗಮಾರ್ಥ ಅನು ಚಿಂತನ–ಈ ಪರಿಯ ಮಹಾ ಯಜ್ಞಗಳನ್ನು ಆಚರಿಸುವುದರ ಫಲವಾಗಿ ಮೈ-ಮನ-ಭಾವ ಶುದ್ಧವಾಗುವುದು ; ಅಂತಹ ಸ್ಥಿತಿಯೇ ಸಂಪೂರ್ಣ ಮಾನವೀಯತೆಯು. ಮಹಾದೇವನ ಕೃಪೆ ಮತ್ತು ಮಹಾಗುರುವಿನ ಅನುಗ್ರಹ ಒಂದಾಗಿ, ಅಂಥ ವಿಶ್ವಾಸದ ಪ್ರಭೆಯಲ್ಲಿ ಸಾಧಕನು ಸ್ಥಿರವಾದುದೇ ಸಂಪೂರ್ಣ ಮಾನವೀಯತೆ ಎಂದರೂ ಒಪ್ಪುವುದು. ಶಿವಭಕ್ತನಿರ್ದುದೇ ಕೈಲಾಸ.

ಶಿವೋಪಚಾರ ನಿರತಃ ಕಾಯಃ ಕಾಯೋ ನ ಚೇತರಃ ॥೨೦॥
ಪಂಚಧಾ ಕಥ್ಯತೇ ಸದ್ಭಿಸ್ತದೇವ ಭಜನಂ ಪುನಃ ।
ತಪಃ ಕರ್ಮ ಜಪೋ ಧ್ಯಾನಂ ಜ್ಞಾನಂಚೇತ್ಯನು ಪೂರ್ವಕಂ ॥೨೧॥
ಅನೇನ ಪಂಚಯಜ್ಞೇನ ಯಃ ಪೂಜಯತಿ ಶಂಕರಂ ।
ಭಕ್ತ್ಯಾ ಪರಮಯಾ ಯುಕ್ತಃ ಸ ವೈ ಭಕ್ತ ಇತಿ ಸ್ಮೃತಃ ॥೨೫॥
(ಸಿ.ಶಿ. ಪರಿ–೯)

ಲಿಂಗೇ ಯಸ್ಯ ಮನೋ ಲೀನಂ ಲಿಂಗಸ್ತುತಿ ಪರಾ ಚ ವಾಕ್ ।
ಲಿಂಗಾರ್ಚನ ಪರೌ ಹಸ್ತೌ ಸ ರುದ್ರೋ ನಾತ್ರ ಸಂಶಯಃ ॥೨೭॥
ಲಿಂಗನಿಷ್ಠಾಪರಂ ಶಾಂತಂ ಭೂತಿ ರುದ್ರಾಕ್ಷ ಸಂಯುತಂ ।
ಪ್ರಶಂಸಂತಿ ಸದಾಕಾಲಂ ಬ್ರಹ್ಮಾದ್ಯಾ ದೇವತಾ ಮುದಾ ॥೪೯॥
...........................................................................

ಕೈಲಾಸೇ ಮಂದರೇ ಚೈವ ಹಿಮಾದ್ರೌ ಕನಕಾಚಲೇ ।
ಹೃದಯೇಷು ಚ ಭಕ್ತಾನಾಂ ವಿಶೇಷೇಣ ಶಿವಃ ಸ್ಥಿತಃ ॥೬೮॥
ಸರ್ವಾತ್ಮಾಽಪಿ ಪರಿಚ್ಛಿನ್ನೋ ಯಥಾ ದೇಹೇಷು ವರ್ತತೇ ।
ತಥಾ ಸ್ವಕೀಯಭಕ್ತೇಷು ಶಂಕರೋ ಭಾಸತೇ ಸದಾ ॥೬೮॥
...........................................................................
(ಸಿ.ಶಿ. ಪರಿ–೧೦)

ಯಾರು ಯಾರು, ಯಾವ ಯಾವುದೇ ಮಾರ್ಗವನ್ನು ಹಿಡಿದು ನಡೆಯಲಿ, ಯಾವುದೇ ಬಗೆಯ ಉಪಾಸನಾ ವಿಧಿಯನ್ನೇ ಅನುಮೋದಿಸಿ–

ಆದರಂತೆ ವರ್ತಿಸುತ್ತಿರಲಿ, ಆ ಎಲ್ಲ ಪ್ರಸಂಗದಲ್ಲೂ ' ಪ್ರಪಂಚ ಹಿತ-ತನ್ನ ಹಿತ ' ಪರಸ್ಪರ ಆಶ್ರಯ-ಅನುವರ್ತನೆಯಿಂದ ಕೂಡಿಕೊಂಡಿರಬೇಕು. ಹುಟ್ಟಿನಿಂದ ಸಾಯುವತನಕ ಆತ್ಮಸಂಶೋಧನೆಗೆ-ಜೀವೇಶ್ವರಯೋಗ ಪರಿಜ್ಞಾನಕ್ಕೆ ಅಧಿಕವಾಗಿ ಶ್ರಮಿಸಬೇಕು. ಅಂಗ-ಲಿಂಗ ಸಾಮರಸ್ಯದ ಆ ಸುಸ್ಥಿತಿಯೇ ವಿಶ್ವಮರ್ಯಾದೆಯ ವೈಶಿಷ್ಟ್ಯವು. ಲೋಕದ ಸಹಕಾರ-ಸೌಹಾರ್ದ ಲಕ್ಷಣವೆಲ್ಲ ' ದೇಹ-ದೇಹೀ ' ಸಾಮ್ಯದಂತೆ ಹಾಸುಹೊಕ್ಕಾಗಿ ಇಹುದು-ಎಂಬುದೇ ಶಿವಸಿದ್ಧಾಂತದ ನಿರ್ಣಯ. ಈ ಮೊದಲೇ ಎಂಟನೆಯ ಪ್ರಕರಣದಲ್ಲಿ ಈ ನಿರ್ಣಯವನ್ನು ಕುರಿತು ಸಾಕಷ್ಟು ಹೇಳಿರುವುದರಿಂದ, ಇನ್ನು ಆ ಬಗೆಗೆ ಹೆಚ್ಚು ವಿಸ್ತರಿಸುವುದು ಬೇಡ.

*   *   *   *

ಆತ್ಮ-ಅನಾತ್ಮ, ಶ್ರೇಯಸ್ಸು-ಪ್ರೇಯಸ್ಸು, ಇಂಥ ತಾರ್ಕಿಕ ವಿಮರ್ಶೆಗೆ ವೀರಶೈವನು ಎಳೆತನದಲ್ಲಿ ಕೈಹಾಕಬಾರದು. ಹಾಗೇನಾದರೂ ಅಪ್ಪಿ ತಪ್ಪಿ ಪ್ರಯತ್ನಿಸಿಬಿಟ್ಟರೆ, ಇನ್ನೂ ಹಸುರಾದ ಬಲಿಯದಿರುವ ಮನಸ್ಸಿಗೆ ಗೊಂದಲ ಪೀಕಲಾಟ ತುಂಬಿಕೊಂಡು, ಕಾಮಾಲೆ ರೋಗಿಗೆ ಹಾಲು ಹಳದಿ ಬಣ್ಣವಾಗಿ ಕಾಣುವಂತೆ ಆದೀತು. ಇನ್ನು ಅವನು ಬಾಲ್ಯವಯಸ್ಸಿನಲ್ಲಿ ಬೆಳೆಸಿಕೊಳ್ಳಬೇಕಾದುದು-ತನ್ನ ವಂಶಪಾರಂಪರ್ಯವಾಗಿ ಬಂದ ಗುರು-ಲಿಂಗ-ಜಂಗಮಸೇವಾಸಕ್ತಿಯೊಂದನ್ನೇ; ಹಿರಿಯರಂತೆ ತಾನೂ ಪರಮ ಶಿವಭಕ್ತನಾಗಿ-ಅರಿವು ಆಚಾರವುಳ್ಳವನಾಗಿ ಬಾಳು ಸಾಗಿಸಬೇಕೆಂಬ ಆಸೆಯೊಂದನ್ನೇ.

ಆದಾದರೂ ವ್ಯಕ್ತಿಧರ್ಮಕ್ಕೆ ಅನುಸಾರವಾಗಿಯೇ ಪ್ರಾರಂಭವಾಗಬೇಕು; ಕಾಲದಿಂದ ಕಾಲಕ್ಕೆ ವೃದ್ಧಿಹೊಂದುತ್ತಲೂ ರಾಷ್ಟ್ರೀಯ ಬದಲಾವಣೆಗೆ ಹೊಂದಿಕೊಳ್ಳುತ್ತಲೂ ಹೋಗಬೇಕು. ಇಲ್ಲವಾದರೆ ದೇಶ-ಕಾಲ-ವ್ಯವಹಾರಾದಿಗಳೆಲ್ಲ ವಿರೋಧವಾಗಿ ನಿಂತು, ಭವಿಷ್ಯದ ಸೌಂದರ್ಯವೇ ಕೆಟ್ಟು ಬಿಡಬಹುದು. ವ್ಯಕ್ತಿಧರ್ಮವನ್ನು ರೂಢಿಸಿಕೊಳ್ಳುತ್ತಿದ್ದಂತೆಯೇ ಸಮಾಜಧರ್ಮದ ಕೈಯನ್ನೂ ಹಿಡಿಯಬೇಕು. ವ್ಯಕ್ತಿ ಶಕ್ತಿಗೆ ಸರಿಯಾಗಿ ನಿಲುಕದೆ, ಅಸ್ಪಷ್ಟವಾಗಿ-ಅನಿರ್ದಿಷ್ಟವಾಗಿ ಕಂಡುಬಂದು ಚರ್ಚೆಗೆ ಗುರಿಯಾಗಿದ್ದ ಧರ್ಮತತ್ತ್ವದ ಆಲೋಚನೆಗಳೆಲ್ಲವೂ-ಈಗ ಸಾಮಾಜಿಕ

ಮಟ್ಟಕ್ಕೆ ಏರಿದಾಗ, ಒಂದು ಸುಸ್ಪಷ್ಟ-ವಿನಿರ್ದಿಷ್ಟ ನಿಬಂಧನೆಗೆ ಬಂದು ಮುಟ್ಟಿ, ಮನಸ್ಸಿಗೆ ಚೆನ್ನಾಗಿ ನೆಮ್ಮದಿ ಸಿಕ್ಕಿದಂತಾಗುತ್ತದೆ.

ಗುರು-ಲಿಂಗ-ಜಂಗಮ ಭಕ್ತಿ, ಪೂಜಾ-ಧ್ಯಾನಾದಿ ವ್ಯವಸ್ಥೆಯ 'ತಾಳು-ತಲೆ' ಸಂಬಂಧ ಗೊತ್ತಾಗಬೇಕಾಗಿದ್ದರೆ, ಸಾಮಾಜಿಕ ಪದ್ಧತಿಯ ಶಿವದೀಕ್ಷಾ ಸಂಸ್ಕಾರಿಯಾಗಲೇಬೇಕು. ಶಿವದೀಕ್ಷಾ ಸಂಪನ್ನನು ಪ್ರಸ್ಫುಟ ಚಿತ್ತದಿಂದ ತನ್ನನ್ನು ತಾನು ಚೆನ್ನಾಗಿ ಪರೀಕ್ಷಿಸಹೋಗುವವನು ತನ್ನತನವನ್ನು ಸುಸೂತ್ರವಾಗಿ ವೃದ್ಧಿಪಡಿಸಿಕೊಳ್ಳುತ್ತಾ ಹೋಗುವನು. ಅವನ ದೃಷ್ಟಿಗೆ-ವ್ಯಕ್ತಿಜೀವನ ಮತ್ತು ಸಮಾಜಜೀವನ ಬೇರೆ ಬೇರೆ ಅಲ್ಲ. ಮಹಾನ್ ಗಣಿತಜ್ಞ ಭಾಸ್ಕರಾಚಾರ್ಯನು ತನ್ನ ಸಿದ್ಧಾಂತಶಿರೋಮಣಿ ಗ್ರಂಥದ ಗೋಲಾಧ್ಯಾಯದಲ್ಲಿ ಯಾವ ನಾಲ್ಕು ಮೂಲೆಗಳ ಚಚ್ಚೌಕದ ಪೆಟ್ಟಿಗೆ ಮತ್ತು ಅದರ ಮುಚ್ಚಳಗಳ ಸಾಮ್ಯಭುಜ್ಯವನ್ನು ವರ್ಗಸಮೀಕರಣ (Square equation) ದೃಷ್ಟಿಯಿಂದ ನಿರೀಕ್ಷಿಸಿದನೋ ಆ ಕ್ರಮದಲ್ಲಿ ಇಲ್ಲಿ-ವ್ಯಕ್ತಿತ್ವ ಮತ್ತು ಸಾಮಾಜಿಕ ಧರ್ಮದೀಕ್ಷಾ ವಿವೇಕವನ್ನು ಅಳೆದು ನೋಡಬಹುದು. ವ್ಯಕ್ತಿಗೆ ಜನ್ಮವಿತ್ತ ಮನೆತನದ ಆಚಾರವಿಚಾರಗಳು ಪೆಟ್ಟಿಗೆಯ ಕೆಳಭಾಗವಿದ್ದಂತೆ, ಸಾಮಾಜಿಕ ಪದ್ಧತಿಯ ಶಿವದೀಕ್ಷಾಸಂಸ್ಕಾರವು ಅದರ ಮೇಲುಮುಚ್ಚಳ. ಇಂಥ ಚೌಕಟ್ಟಿನ ಜೀವನ ಸಾಗಿಸಲು, ಅವನು ಬಾಲ್ಯದಿಂದಲೂ ಉಪಯೋಗಿಸಿಕೊಂಡ ಸನ್ಮಾರ್ಗ–ಸತ್ಯಶರಣ ಸಹವಾಸ ತುಂಬ ಸಹಕಾರಿ. ಮುಂದೆಯೂ ರಾಷ್ಟ್ರಧರ್ಮ–ವಿಶ್ವಧರ್ಮದ ಮೆಟ್ಟಲು ಹತ್ತಲೂ ಅವು ಅಗತ್ಯವೇ ಸರಿ.

ಒಟ್ಟಿನಲ್ಲಿ ಶಿವಶಾಸನವು ಸಕಲ ಜೀವಾತ್ಮರ ಊರ್ಧ್ವಗತಿಗೆ ಮಾರ್ಗವನ್ನು ನಿರ್ದೇಶನ ಮಾಡಿದೆ. ಹಾಗೆ ಗೊತ್ತಾದ ಶ್ರೇಷ್ಠರೀತಿಯ ನೀತಿ–ಕ್ರಿಯೆ–ತತ್ತ್ವದ ಹಾದಿಹಿಡಿದು ನಡೆದು, ಸಾಧಕನು ತನ್ನ ಕಲ್ಯಾಣದ ಸ್ಥಿತಿಯನ್ನು ಗಿಟ್ಟಿಸಿಕೊಳ್ಳಬೇಕು. ಯಾವ ಸಂದರ್ಭದಲ್ಲೂ ಅಂಧ ಶ್ರದ್ಧೆಯ ದಾಸನಾಗಬಾರದು. ವಿಚಾರಾತ್ಮಕ ಜ್ಞಾನದಿಂದ, ಕ್ರಿಯಾತ್ಮಕ ಪ್ರಯೋಗ ಬಲದಿಂದ ಅಜ್ಞಾನದೊಡನೆ ಹೋರಾಡಿ, ಬಾಳಿನ ಸುಖ–ದುಃಖ ಸಮನ್ವಯ ಮೂರ್ತಿಯಾಗಿ–ಶುಭಾಶುಭ ಫಲಾನುಭಾವಿಯಾಗಿ, ತೃಪ್ತಿಜೀವಿಯಾಗಿ ಉಳಿಯಬೇಕು.

'ಸರ್ವ ಭಾಷಾ ಸರಸ್ವತೀ' ಎಂದು ನುಡಿದು, ಭಾಷೆ ಭಾಷೆಗಳ ಏಕರಸವ ಬೆಳೆಸಬಲ್ಲನು ಅಂಥವನು. 'ಸ್ವದೇಶಂ ಭುವನತ್ರಯಂ' ಎಂದು ನುಡಿದು, ದೇಶ–ದೇಶಗಳ ಏಕತ್ವವ ಉಳಿಸಬಲ್ಲನು ಅಂಥವನು. ಹೃದಯ ಹೃದಯಗಳ ಏಕೋಭಾವವ ಆಶಿಸಿ, ವಯೋ–ಲಿಂಗಗಳಿಗೆ ಅತೀತವಾದ ವಿಶ್ವ ಸೋದರತ್ವವನ್ನು ಗಳಿಸಿ–ನಲಿಯಬಲ್ಲನು ಆ ಪರಬ್ರಹ್ಮಜ್ಞಾನಿ. ಅವನು ಕಳಕಳಿಯಿಂದ ಸ್ವಾಗತಿಸುವ ವಿದೇಹಸ್ಥಿತಿಯಾದರೂ ಬಯಲಿಗೆ ಬಯಲು–ನಿರ್ಬಯಲು. ಅದನ್ನು ಅಳೆಯಲು ಬಳ್ಳ ಬೇರೆ ಬೇಕೆ?

ಇದು ಪೂರ್ವಿಕರ ಆಚರಣೆ—ಹಲಗೆ ಬಳಪವ ಹಿಡಿದು ಓದು–ಬರೆಹ ಕಲಿಯಲು ಶಾಲೆಗೆ ಹೋದ ಮಗು, ಪ್ರಾರಂಭದಲ್ಲಿ 'ಓಂ ನಮಃ ಶಿವಾಯ–ಸಿದ್ಧಂ ನಮಃ' ಈ ಅಕ್ಷರಗಳನ್ನು ತಿದ್ದಲು ಕಲಿಯುವುದು. ತಿದ್ದಿ ತಿದ್ದಿ, ಆ ಅಕ್ಷರ ಜ್ಞಾನದಿಂದಲೇ ನಿಗಮ–ಆಗಮ–ಇತಿಹಾಸ–ಸಕಲ ಶಾಸ್ತ್ರ ಸತ್ತ್ವವನ್ನೆಲ್ಲ ಹೀರಿ; ಸರ್ವ ಧರ್ಮ–ಕರ್ಮ ಸಂಯೋಜನೆಯ ಗುಟ್ಟನ್ನು ಕಂಡುಹಿಡಿದು ಹಿಗ್ಗುವುದು.

"ಜಗದ ಸೃಷ್ಟಿ-ಸ್ಥಿತಿ-ಪ್ರಲಯ-ಅನುಗ್ರಹ-ತಿರೋಧಾನ ಸರ್ವಾಧಿಕಾರ ಕರ್ತೃ ಪರಮಶಿವನೊಬ್ಬನೇ. ಅವನು ಉಪಾಸಕ ತನುವಿನ ಅಧಿಷ್ಠಾನ ದೇವನಾಗಿದ್ದಾನೆ. ಅನಂತಮುಖ ಭಾವನೆಗಳಿಂದ ಅತೀತನೂ, ಅವ್ಯಕ್ತನೂ, ಅಘೋರ ಮೂರ್ತಿಯೂ ಆದ ಅವನಿಂದ ಅಭಿಮಾನಿತವಾದ ವಸ್ತುಗಳು—ಭಸ್ಮ, ರುದ್ರಾಕ್ಷ, ಶಿವಮಂತ್ರ, ಶಿವಲಿಂಗ, ಶಿವಪ್ರಸಾದವೆಂಬೀ ಐದು. ಮೂಲ ಪರಮಶಿವನಿಗೂ ಈ ವಸ್ತುಗಳಿಗೂ ಆಧಾರ-ಆಧೇಯ ಭಾವವೇ ಸಹಜವು. ಶಿವತತ್ತ್ವಕ್ಕೂ ತನಗೂ ಅದೇ ಬಗೆಯ ಸಮ್ಯಕ್ ಸಂಬಂಧ"—ಎಂಬುದನ್ನು ಅರಿದುಕೊಂಡ ಬಳಿಕ, ಆ ಚಿನ್ಮೂರ್ತಿಯನ್ನು ಆ ಚಿದಾತ್ಮಕನನ್ನು ಉಕ್ತ ಪಂಚ ಮಹಾವಸ್ತುಮುಖದಿಂದ ವೈಭವ ಪೂರ್ಣವಾಗಿ—ಇಲ್ಲವೆಂದರೆ ಇಚ್ಛಾಪೂರ್ಣವಾಗಿ ಆರಾಧಿಸಿ, ತಾನೂ ಅವನಂತೆಯೇ ಪರಮ ಶಾಂತವಾಗುವುದು; ತಾನಿದ್ದ ಜಗತ್ತನ್ನೂ ಶಾಂತಗೊಳಿಸುವುದು—ಆ ಮಗು. ಶಸ್ತ್ರಾಸ್ತ್ರಗಳನ್ನು ಉಪಯೋಗಿಸದಲೇ ಬ್ರಹ್ಮವಿದ್ಯಾ ಸಾಮರ್ಥ್ಯದಿಂದ ಲೋಕವನ್ನು ತಿದ್ದಿ—ಅನುಕೂಲಗೊಳಿಸಬಲ್ಲ

ಇಂತಹ ಶಿಕ್ಷಣ ಎಷ್ಟೊಂದು ಉತ್ತಮತರಹೆಯದು! ಈ ಮಾರ್ಗ ಯಾರಿಗೆ ಹಿತವಲ್ಲ !!

ಇದು ಶಿವತಂತ್ರದ ಮಾತು—"ಶಿವನು ನಿರ್ಭಾವ ಸುಖವಸ್ತು, ಶಾಂತಿ ಪುರುಷ, ನಿರ್ಮಲ ಸ್ವರೂಪಿ. ಅವನ ಇಚ್ಛಾ-ಕ್ರಿಯಾ-ಜ್ಞಾನಶಕ್ತಿ ಪ್ರಸರಣೆಗೆ ಯಾವ ಬಗೆಯ ಪ್ರತಿಬಂಧಕವೂ ಇರುವುದಿಲ್ಲ. ಅವನು ಸರ್ವತ್ರ ಪರಿಪೂರ್ಣನು. ಅವನ ಅನುರಾಗದಲ್ಲಿ ಬೆರೆದು ನಲಿಯಬೇಕೆಂದಿದ್ದರೆ—ಸಾಧಕನು ತಾನು ನಡೆವೆಡೆಯಲ್ಲಿ, ನುಡಿವೆಡೆಯಲ್ಲಿ, ನಿಂತ ಕಡೆಯಲ್ಲಿ, ಕನಸು ಮನಸಿನಲ್ಲಿ—ಎಲ್ಲ ಅವಸರದಲ್ಲೂ ಅವನ ಸ್ವರೂಪವನ್ನೇ ಸ್ಮರಿಸಬೇಕು, ವ್ಯವಹರಿಸಬೇಕು. ಶಿವನೇ ಅನುಭವಿಸುವವನು, ಶಿವನೇ ಅನುಭವಿಸಲ್ಪಡತಕ್ಕವನು. ತಾನು ಅವನ ಕೃಪಾಸ್ಪದ ಜೀವಿ. ಅವನ ಅನುಗ್ರಹವೇ-ಅವನ ಪ್ರಸಾದ ಲಾಭವೇ ತನ್ನ ಜೀವನ ಸರ್ವಸ್ವ. ಗುರು-ಲಿಂಗ-ಜಂಗಮ ಪ್ರಸಾದ ಸ್ವೀಕಾರವೆಂದರೆ, ಅದುವೇ ಶಿವನ ಪ್ರಸಾದ ಸ್ವೀಕಾರ ಯೋಗ." ಹೀಗೆಂದು ತಿಳಿದು—ತಾನು ನಿಷ್ಕಲಂಕನಾಗಬೇಕು; ತಾನೇ ಚಿದ್ವಿಭುವಾಗಬೇಕು. ಇದೇ ಚಿತ್ ಚೈತನ್ಯ ಸ್ವರೂಪಿ ಪರಮ ಶಿವನ ಮತ್ತು ಶಿವಧರ್ಮಿಯ ಅನಿರುದ್ಧ ಇಚ್ಛಾಪ್ರಸರಣ ಸ್ಥಿತಿ. ಇದೇ ಮುಕ್ತನು ಶಿವತನುವನ್ನು ಹೊಂದುವ ಬಗೆ, ಶಿವನಿದ್ದುದೇ ಶಿವಲೋಕ.

ಭಾವನಾತೀತಮವ್ಯಕ್ತಂ ಪರಬ್ರಹ್ಮ ಶಿವಾಭಿದಮ್ ।೪೯॥
ಅಘೋರಾಽಪಾಪಕಾಶೀತಿ ಯಾ ತೇ ರುದ್ರ ಶಿವಾ ತನೂಃ ।
ಯಜುಷಾಗೀಯತೇ ಯಸ್ಮಾತ್ತಸ್ಮಾಚ್ಛೈವೋಽಘವರ್ಜಿತಃ ॥೬೦॥
(ಸಿ. ಶಿ. ಪರಿ—೮

ಏಕ ಏವ ಶಿವಃ ಸಾಕ್ಷಾತ್ಸರ್ವಾನುಗ್ರಹಕಾರಕಃ ।
ಗುರು ಜಂಗಮ ಲಿಂಗಾತ್ಮಾ ವರ್ತತೇ ಭುಕ್ತಿಮುಕ್ತಿದಃ ॥೫೯॥
ಶಿವಲಿಂಗ ಪ್ರಸಾದಸ್ಯ ಸ್ವೀಕಾರಾದ್ಯತ್ಫಲಂ ಭವೇತ್ ।
ತಥಾ ಪ್ರಸಾದ ಸ್ವೀಕಾರಾದ್ಗುರು ಜಂಗಮಯೋರಪಿ ॥೭೭॥
(ಸಿ. ಶಿ. ಪರಿ—೯

ಗಚ್ಛಂಸ್ತಿಷ್ಠನ್ ಸ್ವಪನ್ವಾಽಪಿ ಜಾಗ್ರದ್ವಾಽಪಿ ಮಹಾಮತಿಃ ।
ಶಿವಜ್ಞಾನಸಮಾಯೋಗಾಚ್ಛಿವಪೂಜಾಪರಃ ಸದಾ ॥೨೩॥

ತಸ್ಯ ಸರ್ವಸ್ಯ ಲೋಕಸ್ಯ ಶಿವಸ್ಯಾದ್ವೈತದರ್ಶನಾತ್ ।
ಏಕ ಭಾಜನ ಯೋಗೇನ ಪ್ರಸಾದೈಕ್ಯಮತಿರ್ಭವೇತ್ ॥೨೯॥
ಶಿವೇ ವಿಶ್ವಮಿದಂ ಸರ್ವಂ ಶಿವಃ ಸರ್ವತ್ರ ಭಾಸತೇ ।
ಆಧಾರಾಧೇಯಭಾವೇನ ಶಿವಸ್ಯ ಜಗತಃ ಸ್ಥಿತಿಃ ॥೩೦॥
ನಿರಸ್ತ ವಿಶ್ವಸಂಬಾಧೇ ನಿಷ್ಕಲಂಕೇ ಚಿದಂಬರೇ ।
ಭಾವಯೇಲ್ಲೀನಮಾತ್ಮಾನಂ ಸಾಮರಸ್ಯ ಸ್ವಭಾವತಃ ॥೪೨॥

(ಸಿ. ಶಿ. ಪರಿ—೧೪

ಆತ್ಮೈವ ಸರ್ವ ಭಾವೇಷು ಸ್ಫುರನ್ನಿರ್ವೃತ್ತ ಚಿದ್ವಿಭುಃ ।
ಅನಿರುದ್ಧೇಚ್ಛಾಪ್ರಸರಃ ಪ್ರಸರ ದೃಕ್ಕ್ರಿಯಃ ಶಿವಃ ॥೨॥
.............................................................
.............................................................
ತಸ್ಮಾತ್ ಸಮ್ಯಗಾಕಾರೇ ಸರ್ವಾಸು ಪ್ರತಿಪತ್ತಿಷು ।
ವಿಜ್ಞೇಯಂ ಶಿವರೂಪತ್ವಂ ಸ್ವಶಕ್ತ್ಯಾವೇಶನಾತ್ಮಕಮ್ ॥೧೭॥

(ಶಿ.ದೃ. ಆನಿಕ ೩.)

ದಾಸೋಹವೆಂಬ ಸೋಹಗೊಂಡು ಹೋಗಿ ಗುರುವ ಕಂಡೆ,
ಲಿಂಗವ ಕಂಡೆ, ಜಂಗಮುವ ಕಂಡೆ, ಪ್ರಸಾದವ ಕಂಡೆ.
ಇಂತೀ ಚತುರ್ವಿಧ ಸಂಪನ್ನನಾಗಿ ನಿಮ್ಮೊಳಗೆ ಮನವೇಕವಾಗಿ—
ಭವದೋಷಹಿಂಗೀ ಬದುಕಿಕೊಂಡೆ ಕಾಣಾ ಕೂಡಲ ಸಂಗಮದೇವಾ ॥

(ಬಸವಣ್ಣ—ಪ್ರಸಾದಿ ಸ್ಥಲದ ವಚನ.)

* * * *

ವ್ಯಕ್ತಿ ಜೀವನದಿಂದ-ಸಮಷ್ಟಿ ಜೀವನಕ್ಕೆ ಸಾಗುವ ಶಿವಾದ್ವೈತ ಕ್ರಮವು, ಅರ್ಥಾತ್ ಪರಿಶುದ್ಧ ಮಾನವೀಯತೆಯನ್ನು ಸಂಪಾದಿಸಲೋಸುಗ ಪರಮ ಶಿವನನ್ನು ಕುರಿತು ಮಾಡುವ ಏಕಾಗ್ರ ತಪಸ್ಸು—ವೀರಶೈವ ಸಹಜ ಮಾರ್ಗ ಗಾಮಿಗಳಾದ ಸ್ತ್ರೀ ಪುರುಷರಿಗೆಲ್ಲಾ ತಿಳಿದಿರಲೇ ಬೇಕಾದುದು. ಸರ್ವ ವ್ಯಾಪಿ, ಸರ್ವ ದೃಕ್—ದೃಶ್ಯ ಪ್ರಸಾದ ರೂಪ, ಸಕಲ ನಿಷ್ಕಲ ಶಿವ ಲಿಂಗ ಪ್ರೇಮಿಗೆ ಶಿವ ಭಕ್ತಿ ತತ್ಪರರಿಗೆ ಶಿವ ತಂತ್ರದ ಈ ಜಾಡು ಸ್ಪಷ್ಟವಾಗಿ

ಗೊತ್ತಾಗಿದೆ. ಅವರ ನಡೆ-ನುಡಿ-ವ್ಯವಹಾರವೆಲ್ಲವೂ ಶಿವಾಗಮ ವಾಕ್ಯ ವನ್ನು ಅನುಸರಿಸಿದುದೇ ಆಗಿದೆ. ಸಂದೇಹವಿಲ್ಲ.

ದ್ರಷ್ಟೃ ದರ್ಶನ ದೃಶ್ಯಾನಾಂ ವಿರಮೋ ಯತ್ರ ವಾ ಭವೇತ್

"ಪರಮ ಶಿವತೇಜಕ್ಕಾದರೋ ದ್ರಷ್ಟೃತ್ವ-ದರ್ಶನತ್ವ-ದೃಶ್ಯತ್ವ ಧರ್ಮಗಳ ಹಂಗು ಇರುವುದಿಲ್ಲ. ಅಪ್ರಮಾಣ-ಅಪ್ರಮೇಯ-ಆನಂದ ಸಂಕೇತದ ಸುಂದರ ಪ್ರಕಾಶ-ಅದು. ಸಗುಣ-ನಿರ್ಗುಣ ಸಮಿಾಚೀನ ಸತ್ಯ ಪ್ರತೀಕವು-ಅದು." ಎಂದು ಯಾವ ಶಿವಸಿದ್ಧಾಂತವು ಪ್ರಕಟೀಕರಿಸಿತೋ, ಆ 'ಇತಿ ಶ್ರೀ' ಪ್ರಕರಣವನ್ನು ಇಪ್ಪತ್ತನೆಯ ಹೊಸ ಕಾಲದ ವೈಚಾರಿಕ ಬಳಗವು ತನ್ನ ಒರೆಗಲ್ಲಿಗೆ ತಿಕ್ಕಿ ನೋಡಲು ಪ್ರಯತ್ನಿಸಬೇಕು. ತನಗಿರುವ ಭೌತಿಕ-ರಾಸಾಯನಿಕ, ಇನ್ನಿತರ ಸಕಲ ವೈಜ್ಞಾನಿಕ ಶಕ್ತಿಯಿಂದ ಅಳೆದು ಪರಿಶೀಲಿಸಿ, ಫಲಿತಾಂಶವನ್ನು ಪ್ರಕಟಿಸಬೇಕು. ಎಂದರೇನೇ ಅವರ ಸಾಹಸಕ್ಕೊಂದು ಅಪೂರ್ವ ಕೀರ್ತಿ ದೊರೆಯುತ್ತದೆ. ಪರಿಶುದ್ಧ ಮಾನವೀಯತೆಯ ಉಳಿವಿಗೊಂದು ಅವಕಾಶವಾಗುತ್ತದೆ.

ಮನಶ್ಶಾಸ್ತ್ರದ ಹಾಗೂ ಯೋಗ ಶಾಸ್ತ್ರ ಪದ್ಧತಿಗೆ ಒಪ್ಪುವಂತೆ ಕ್ರಮವಾಗಿ ಶಿವೋಪಾಸನೆ ಮಾಡಿ, ನಿಜವನ್ನು ಕಂಡು ಸಂತೋಷ ಪಡುವುದಕ್ಕಿಂತ ಅತಿಶಯವಾದ ಕರ್ತವ್ಯ ಇನ್ನಾವುದಿದೆ? ಶಿವರಹಸ್ಯದ ಹಾಗೂ ಜಗತ್ತು ಮತ್ತು ಜೀವ ವರ್ಗದ ಅನ್ಯೋನ್ಯತೆಯ ಸರಿಯಾದ ಸಮಾಧಾನವನ್ನು ಕಂಡುಕೊಂಡು, ಉತ್ತಮ ನಾಗರಿಕನಾಗಿ-ವಿಶ್ವ ಪ್ರಿಯನಾಗಿ ಬಾಳುವುದಕ್ಕಿಂದ ಅಮೂಲ್ಯವಾದ-ಅಧಿಕವಾದ ಸಂಪತ್ತು ಇನ್ನಾವುದಿದೆ? ಪಾರತಂತ್ರ್ಯದ ಬೇರ ಸುಟ್ಟು ಭಸ್ಮಮಾಡಿ ಹಣೆಗೆ ಧರಿಸಿಕೊಂಡು, ಭವ್ಯ ಶಿವತಂತ್ರ-ಸ್ವಾತಂತ್ರ್ಯದ ರುದ್ರಾಕ್ಷಿಯ ಆಭರಣಗಳಿಂದ ಅಲಂಕೃತನಾಗಿ, ಶಿವಪಂಚಾಕ್ಷರೀ ಮಹಾಮಂತ್ರದ ಗೂಢಾರ್ಥಾಂಬರ ಧಾರಿಯಾಗಿ, ಶಿವಲಿಂಗದೇಹಿಯಾಗಿ-ಗುಣತ್ರಯಾತೀತನಾಗಿ, ಶಿವ ಪ್ರಸಾದ ವ್ಯಾಮೋಹಿಯಾಗಿ, ಶಿವತತ್ತ್ವ ಸ್ವರೂಪಿಯಾಗಿ--ವಿಶ್ವಾತ್ಮನಾಗಿ ಒಪ್ಪುವುದಕ್ಕಿಂತಲೂ ಇನ್ನಾವುದು ಮೆಚ್ಚು-ನೆಚ್ಚು, ವೀರಶೈವನಿಗೆ. ಸ್ವಧರ್ಮ ಪ್ರೇಮದ ಹೂವ ಮುಡಿಯುವುದಕ್ಕಿಂತಲೂ ಇನ್ನಾವುದು ಅವನ ಶಿರಸ್ಸಿಗೆ ಯೋಗ್ಯ ಭೂಷಣ? ಒಗಟು ಬಿಚ್ಚಲಿ, ವಿಮರ್ಶಕ ಬಾಂಧವರು!

(ಅ) ಸಾಂಸ್ಕೃತಿಕ ಹಿನ್ನೆಲೆ–ಸಂಶೋಧನೆಯ ಆಸಕ್ತಿ

ಮತ್ತೆ ಸ್ವಲ್ಪ ಹಳೆಯ ನೆನಪು—

ಮಾನವನ ಮನಸ್ಸು ಸಹಜವಾಗಿ ವಿವಿಧ ಉಪಕರಣಗಳಿಂದ ಸೀಮಿತ. ಮಂತ್ರ ಜಪಕ್ಕೆ ಜಪಮಾಲೆಯ ಆವಶ್ಯಕತೆ, ಸಂಗೀತಕ್ಕೆ ವಿವಿಧ ವಾದ್ಯ ಸಲಕರಣೆಗಳು, ಶಿಲ್ಪಕರ–ಚಿತ್ರಕಲೆ ಇವುಗಳ ಉತ್ಪತ್ತಿಗೆಲ್ಲ ಬೇರೆ ಬೇರೆ ಅನುಕೂಲ ವಸ್ತುಗಳು ಬೇಕು. ಇನ್ನು ಜೀವನ ವ್ಯವಹಾರದಲ್ಲೂ–ಕಾಲವನ್ನು ತೋರಿಸಲು ಗಡಿಯಾರ, ಶರೀರಶಾಖದ ಪರಿಮಾಣವನ್ನು ಕಂಡುಹಿಡಿಯಲು ಉಷ್ಣಮಾಪಕ, ಅಂತರಿಕ್ಷದ ಗ್ರಹ–ನಕ್ಷತ್ರ ವೇಧೆಯನ್ನು ಪರೀಕ್ಷಿಸಲು ಭೂತಗನ್ನಡಿ, ದಿಕ್ಕನ್ನು ತೋರಿಸುವ ದಿಕ್ಸೂಚಿ, ಉಳುವುದಕ್ಕೆ-ಒಕ್ಕುವುದಕ್ಕೆ–ಅಳುವುದಕ್ಕೆ–ನಗುವುದಕ್ಕೆ ಕೂಡ ಯಂತ್ರದ ಉಪಯೋಗ. ಮೃತ್ಯುವನ್ನು ಗೆದ್ದು ಮೃತ್ಯುಂಜಯನಾಗಲೂಬೇಕು–ತಕ್ಕ ಸಾಧನಾ ಸಾಮುಗ್ರಿಗಳ ನೆರವು. ಕ್ಲುಪ್ತ ಸಲಕರಣೆಗಳ ಅನುವರ್ತನೆಗಿಂತ ದೂರ ದೂರ ನಿರೀಕ್ಷಿಸುವುದು, ಸೀಮಾತೀತನಾಗಿ–ನಿಸ್ಸೀಮನಾಗಿ ವರ್ತಿಸುವುದು ಪ್ರಯಾಸವೇ ಪ್ರಯಾಸ.

ಒಮ್ಮೆ ಯಂತ್ರದ ಮಹಿಮೆ ಬಹಳವಾಗಿಬಿಟ್ಟು, ಬುದ್ಧಿ ಅದರ ಹಿಂದೆ ಹಿಂದೆ ಚರಿಸಬೇಕಾಗುತ್ತದೆ. ಮತ್ತೊಮ್ಮೆ ಬುದ್ಧಿಯ ಬಲ ಮುಂದೆ ಮುಂದೆ ಯಂತ್ರಶಕ್ತಿ ಅದನ್ನು ಹಿಂಬಾಲಿಸಿ ಹೋಗಬೇಕಾಗುತ್ತದೆ. ಎರಡೂ ಅವಿರೋಧವಾಗಿಯೇ–ಸಮುಗ್ರೈಯಿಂದಲೇ ವಿಸ್ತಾರದೃಷ್ಟಿಯಿಂದಲೇ ವರ್ತಿಸುವುದೂ ಉಂಟು. ವೀರಶೈವರ ' ಶರಣಸತಿ-ಲಿಂಗಪತಿ ' ತತ್ತ್ವ ಪ್ರತಿಪಾದನೆಯೂ ಹೀಗೆಯೇ. ಮೊದಮೊದಲು ಭಕ್ತಸ್ಥಲದ ಆರಂಭದೆಸೆಯಲ್ಲಿ, ಅಥವ ಶಿವಲಿಂಗಾರ್ಚನೆಯ ಪ್ರಾರಂಭದ ಸಮುಯದಲ್ಲಿ–ಏನೋ ಒಂದು ಬಗೆಯ ಲೋಕಾಚಾರದ ಭಾವನೆಯಿಂದ, ಇಲ್ಲವೆ-ಮನೆತನದ ಗೌರವ ಪರಿಪಾಲನೆಯ ಕರ್ತವ್ಯದಿಂದ, ಅಂದಂದಿಗೆ ತಕ್ಕ ಉಪಕರಣಗಳನ್ನು–ಉಪಚಾರ ದ್ರವ್ಯಗಳನ್ನು ಉಪಯೋಗ ಮಾಡಿಕೊಳ್ಳುತ್ತಾ ಪ್ರಾರಂಭವಾಗಿ, ಅದರ ಮುಂದಿನ ಸ್ಥಲಗಳ ಅನುಭವ ಪಡೆಯುತ್ತಾ ಮುನ್ನಡೆದಂತೆಲ್ಲ-ದೇಹ, ಮನ, ಭಾವಶಕ್ತಿಹಿಂದಾಗಿ ಶಿವಶಕ್ತಿಯ ಪರಿಶುದ್ಧ ಪ್ರಭೆಯಲ್ಲಿಯೇ ಸಾಧಕನು ಉಳಿದು ಉತ್ತಮನಾಗುತ್ತಾ ; ಉನ್ಮನೀ ಸ್ಥಿತಿಗೇರಿ ಊರ್ಜಿತ

ಘೃವನಾಗುತ್ತಾನೆ. ಪುರಾತನಕಾಲದ ಮುನಿಗಳೂ, ಯತಿಗಳು, ಮಾಹೇಶ್ವರರೂ ಗಣಂಗಳೂ ಹೀಗೆಯೇ ಇದ್ದುಕೊಂಡು ದೈವೀಜ್ಞಾನದ ಸಾಂದ್ರತೆಯನ್ನು ಬೆಳೆಸಿದರು; ಸಮಾಜಸಂಘಟನೆಯನ್ನು ಆಧಾರ ಮಾಡಿಕೊಂಡು ವಿಶ್ವದ ನೆಮ್ಮದಿಯನ್ನು ಕಾಪಾಡಿದರು; ಶಿವಧರ್ಮದ ಕಾರಣಕರ್ತರೆಂದು ಪ್ರಖ್ಯಾತರಾದರು.

ರಾಜಕೀಯ ವೀರಯೋಧನು ಯೋಗ್ಯವಾದ ಶಿಸ್ತಿನಲ್ಲಿ ಬೆಳೆದು-ವೀರರಿಗೆ ತಕ್ಕ ವಿದ್ಯೆಯನ್ನು ಕಲಿತು, ಆ ಶಿಸ್ತಿನ-ವಿದ್ಯೆಯ ಸಹಾಯದಿಂದ ಶತ್ರುಬಲವನ್ನು ಮುರಿದು–ಸೀಮಾತೀತನೆನಿಸಿಕೊಂಬತೆ, ಶಿವಸಿದ್ಧಾಂತಾನುವರ್ತಿಯು ತನ್ನ ನಡೆ–ನುಡಿ–ವ್ಯವಹಾರ ವಿಶೇಷದಿಂದ ಶುದ್ಧನಾಗಿ ಬುದ್ಧನಾಗಿ ಸೀಮಾತೀತನೆನಿಸುವನೆಂದೆನ್ನಬಹುದು. ಲೌಕಿಕ ಬುದ್ಧಿಯ ಚಾಲನೆಗಿಂತಲೂ, ಪಾರಲೌಕಿಕ ಮಂತ್ರಸಿದ್ಧಿಯ ಚಾಲನೆಯಲ್ಲಿ ಅಪಾರ ಸಾಮರ್ಥ್ಯ ಹುದುಗಿರುವುದನ್ನು ಅವನು ಸ್ವತಃ ಪರೀಕ್ಷಿಸಿ ಕಂಡುಕೊಂಡಿದ್ದನೆಂದೆನ್ನಬಹುದು. ಶಿವಧರ್ಮದ ಆಚರಣಾ ಬಲದಿಂದ, ಸತ್‌ಶೀಲಸಂಗ್ರಹ ಕಾರಣದಿಂದ —ಅವನ ಬುದ್ಧಿ ನೈಜವಾಗಿ ಬೆಳವಣಿಗೆ ಕಂಡಿತ್ತು. ತ್ರಿಕಾಲಜ್ಞಾನ ಪರಿಣತನಾಗಿ, ಅಸಾಧಾರಣ ಮೇಧಾವಿಯಾಗಿ ಬದುಕಿ, ಜಗತ್ತಿನ ಕಲ್ಯಾಣಕ್ಕೆ ಅವನು ಸರ್ವಪ್ರಕಾರದಲ್ಲೂ ನೆರವಾದುದುಂಟು.

ಹಿಂದುಳಿದವರಿಗೆ ವಿದ್ಯೆ ಬುದ್ಧಿ ಔದ್ಯೋಗಿಕ ಸೌಕರ್ಯ ಸೌಲಭ್ಯಗಳನ್ನೊದಗಿಸಿದರು. ಕಾಯಕನಿಷ್ಠರಾಗಿ ಬಾಳ್ವೆ ಸಾಗಿಸಲು ಒಳ್ಳೆಯ ದಾರಿ ಹಾಕಿಕೊಟ್ಟರು. ಅಖಿಲ ಪ್ರಾಣಿಕುಲದ ನಲಿವು ತಮ್ಮ ನಲಿವು, ಅವುಗಳ ನೋವು ತಮ್ಮ ನೋವು ಎಂದು ತಿಳಿದು ದಯಾಧರ್ಮವನ್ನು ಪೋಷಿಸಿದರು. ಅವರ ಅಸಂಖ್ಯಾತ ಹಿಂಬಾಲಕರು ಭೂಮಿಯಲ್ಲಿದ್ದೇ ಕೈವಲ್ಯವನ್ನು ಕಂಡರು. ಅವರ ನೈತಿಕಮಟ್ಟ ಎಷ್ಟು ಉತ್ತಮವಾಗಿತ್ತೋ ಜೀವನದ ಮಟ್ಟವೂ ಅಷ್ಟೇ ಉತ್ಕೃಷ್ಟಸ್ಥಿತಿಯಲ್ಲಿತ್ತು. ಸ್ವಯಂ ನಿಕೃಷ್ಟತಾ ಭಾವನೆಯನ್ನು ಯಾರೂ ತಳೆದದ್ದಿಲ್ಲ; ಸ್ವಯಂ ಕೃತಾಪರಾಧವನ್ನು ಯಾರೂ ಗೌರವಿಸಿದ್ದಿಲ್ಲ. ಆ ಶಿವಪ್ರಸಾದ ಜೀವಿಗಳು. ಈ ಮೊದಲೇ ಆರನೆಯ ಪ್ರಕರಣದಲ್ಲಿ ಈ ಬಗ್ಗೆ ಸಾಧಾರಣ ವಿವರಣೆ ಬಂದಿರುವುದರಿಂದ ಇಲ್ಲಿ ಪುನರುಕ್ತಿ ಬೇಕಾದ್ದಿಲ್ಲ. ಆ ಬಗ್ಗೆ.

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾ ಕ್ಷಮಾ ।
ದಾನಂ ಪೂಜಾ ಜಪೋ ಧ್ಯಾನಮಿತಿ ಧರ್ಮಸ್ಯ ಸಂಗ್ರಹಃ ॥೫೯॥
ಶಿವೇನ ವಿಹಿತೋ ಯಸ್ಮಾದಾಗಮೈರ್ಧರ್ಮ ಸಂಗ್ರಹಃ ।
ತಸ್ಮಾತ್ತ ಮಾಚರನ್ ವಿದ್ವಾನ್ ತತ್ಪ್ರಸಾದಾಯ ಕಲ್ಪತೇ ॥೬೦॥
ಅಧರ್ಮಂ ನ ಸ್ಪೃಶೇತ್ ಕಿಂಚಿದ್ವಿಹಿತಂ ಧರ್ಮಮಾಚರೇತ್ ।
ತಂ ಚ ಕಾಮವಿನಿರ್ಮುಕ್ತಂ ತಮಪಿ ಜ್ಞಾನ ಪೂರ್ವಕಮ್ ॥೬೧॥
ಆತ್ಮವತ್ಸರ್ವ ಭೂತಾನಿ ಸಂಪಶ್ಯೇದ್ಯೋಗ ವಿತ್ತಮಃ ।
ಜಗದೇಕಾತ್ಮತಾ ಭಾವಾನ್ನಿಗ್ರಹಾದಿ ವಿರೋಧತಃ ॥೬೨॥
ಏಕ ಏವ ಶಿವಸ್ಸಾಕ್ಷಾಜ್ಜಗದೇಶ ದಿತಿ ಸ್ಫುಟಂ ।
ಪಶ್ಯತಃ ಕಿಂ ನ ಜಾಯೇತ ಮಮಕಾರೋ ಹಿ ವಿಭ್ರಮಃ ॥೬೩॥
ಧರ್ಮ ಏವ ಸುಮುಸ್ತಾನಾಂ ಯತಃ ಸಂಸಿದ್ಧಿ ಕಾರಣಂ ।
ನಿಃಸ್ಪೃಹೋಽಪಿ ಮಹಾಯೋಗೀ ಧರ್ಮಮಾರ್ಗಂ ಹಿ ನ
ತ್ಯಜೇತ್ ॥೬೪॥
(ಸಿ.ಶಿ. ಪರಿ-೧೬)

ಶಿವಸಿದ್ಧಾಂತದ ಸಂದೇಶ ಅಸಾಧಾರಣವಾದುದು ; ಶಿವಧರ್ಮದ ಉಜ್ಜೀವನ ಸಂಪೂರ್ಣ ಆತ್ಮಗೌರವದಿಂದ ಪ್ರೇರಣೆಗೊಂಡುದು. ಮುನ್ನಿನ ಧರ್ಮಾಚಾರ್ಯರಾದರೂ ಆ ಗುಟ್ಟನ್ನು ಸುಲಭವಾಗಿ ಸರ್ವರಿಗೂ ತಿಳಿಯುವಂತೆ ವಿವರಿಸಿ ಹೇಳಿದರು. ಆದರೆ ಆ ಪ್ರಕಾರ ನಡೆಯುವುದೇನೂ ಊಹಿಸಿದಷ್ಟು ಸುಲಭದ ಕೆಲಸವಲ್ಲ. ಅದನ್ನು ಯಾರೊಬ್ಬರ ಮೇಲೂ ಬಲಾತ್ಕಾರವಾಗಿ ಹೇರುವಂತಿಲ್ಲ. ಜೀವಿಯ ಪ್ರಬುದ್ಧ ದೆಸೆಯಲ್ಲಿ ಅವನ ಆಸಕ್ತಿಗೆ ಅನುಗುಣವಾಗಿ ಆ ಜಿಜ್ಞಾಸೆ ಪ್ರಾರಂಭವಾಗಬೇಕು ; ತತ್ತ್ವಪ್ರಭಾ ಸ್ವಯಂಪ್ರದೀಪಿತವಾಗಬೇಕು. ಅದುವರಿವಿಗೂ, ಸಾಧಕನು ತನ್ನ ಮನೆತನದ ಪದ್ಧತಿಗೆ ತಕ್ಕಂತೆ ಯಾವತ್ತೂ ಪೂರ್ವಕ್ರಿಯೆಗಳನ್ನು ಆಚರಿಸುತ್ತಲೇ ಇರಬೇಕು ; ನೈತಿಕ ಅಧೋಗತಿಗೆ ಅವಕಾಶವೀಯಬಾರದು.

ಸ್ವಧರ್ಮವು ಸರ್ವತೋಮುಖವಾಗಿ ಸುಧಾರಣೆಗೊಳ್ಳಬೇಕೆಂದಿದ್ದಾಗ ದೇಶ ಮಧ್ಯದಲ್ಲಿ–ಪರರಾಷ್ಟ್ರಗಳಲ್ಲಿ ಕೂಡ ಅದರ ಪ್ರಚಾರದ ಆವಶ್ಯಕತೆಯಿದೆಯೆಂದು ಕಂಡು ಕೊಂಡಾಗ, ಬರಿ ಮಠ ಮಾನ್ಯದವರೇ ಏಕೆ? ಭಕ್ತ

ರಿಂದ ಹಿಡಿದು ಎಲ್ಲರೂ ಏಕ ಕಾಲಕ್ಕೆ ಸನ್ನದ್ಧರಾಗಬೇಕು. ಸಾಂಘಿಕ ಶಕ್ತಿಯ ಬಲದಿಂದ—ಸ್ವಜನರ ಅತ್ಯಾಚಾರ ಅನೀತಿಗಳನ್ನು ಖಂಡಿಸುವ ಕೆಲಸ ಮೊದಲು ಆಗಬೇಕು. ಮೂಲ ಧರ್ಮ ಪೀಠಗಳಿಂದ ಯೋಗ್ಯ ಶಾಸನ ವನ್ನು ಹೊರಡಿಸಿ—ಶಿಸ್ತಿನಿಂದ ಧರ್ಮ ಜಾಗೃತಿಗೊಳಿಸಬೇಕು. ಯಾವುದೇ ಕೆಲಸ ಮಾಡಲಿ, ರಾಷ್ಟ್ರ ಘಾತುಕ ವೃತ್ತಿಗೆ ಅನ್ಯ ಮತೀಯರ ಮನಸ್ಸು ನೋಯಿಸುವುದಕ್ಕೆ ಅಲ್ಲಿ ಎಡೆಯಿರಬಾರದು.

ರಕ್ತಗತವಾಗಿ ಬಂದಿರುವ—ತಾಯಿ, ತಂದೆ, ಗುರುಹಿರಿಯರನ್ನು ಸೇವಿಸಲು ಮಕ್ಕಳಿಗೆ ಸ್ವತಃಸಿದ್ಧವಾದ ಅಧಿಕಾರವಿದೆ. ತಾವು ಮಾಡುವ ಸೇವೆಗೆ, ನಿರ್ದಿಷ್ಟ ಫಲ ದೊರಕುವುದೋ, ಇಲ್ಲವೋ ? ಎನ್ನುವ ಸಂದೇಹ-ನಿರಾಶಾಭಾವನೆ ಬೇಡವೇ ಬೇಡ. ತಾಯಿ ನುಡಿಯ ವಿಚಾರವೂ ಹೀಗೆಯೇ. ಅದೂ ವಂಶಪಾರಂಪರ್ಯವಾಗಿ ತನ್ನ ಗತಿಯಲ್ಲಿ ಬೆಳೆಯುತ್ತಾ ಹೋಗಬೇಕು.

ಉದಾಹರಣೆಗೆ :—ಕನ್ನಡಿಗ, ತಾನು ಪ್ರಪಂಚದ ಯಾವ ಮೂಲೆ ಯಲ್ಲೇ ಇರಲಿ—ಯಾವ ಭಾಷೆಯನ್ನೇ ಕಲಿತಿರಲಿ, ಅವನ ಅಭಿಮಾನ—

ಭಾರತಕ್ಕೆ ಆರ್ಯರು ಪ್ರವೇಶಿಸುವುದಕ್ಕಿಂತಲೂ ಹಿಂದಿನ ಕಾಲದಿಂದ ಹಿಡಿದು—ಇವೊತ್ತಿನವರೆವಿಗೆ ಹರಿದುಬಂದಿರುವ ಕನ್ನಡಭಾಷೆ—ಕನ್ನಡ ಸಂಸ್ಕೃತಿಯ ಬಗೆಗೆ ವಿಪುಲವಾಗಿ ಇದ್ದಿರಬೇಕು. ಹರಪ್ಪಾ-ಮಹೇಂಜುದಾರೋ ಮುದ್ರಿಕೆಗಳಲ್ಲಿರುವ ಕನ್ನಡ ಉಲ್ಲೇಖವನ್ನು ಕಂಡು ತನ್ನ ಹಿರಿಮೆಗಾಗಿ-ಗರಿಮೆಗಾಗಿ ಆನಂದದಿಂದ ಹಿಗ್ಗುವುದನ್ನು ಮರೆಯ ಬಾರದು. ಸುಮಾರು ಐದುಸಾವಿರ ವರ್ಷಗಳ ಸರಿಸುಮಾರು ಕಾಲದಿಂ ದಲೂ—ಭರತಖಂಡದ ಬಂಗಾಳ, ಅಸ್ಸಾಂ, ಕಾಶ್ಮೀರ, ಆಂಧ್ರ, ಮಲೆಯಾಳ, ಸಿಂಧಿ, ಗುಜರಾಥ, ಮಹಾರಾಷ್ಟ್ರ—ಹೀಗೆ ಉತ್ತರದ ಹಿಮಾಲಯ ಪರ್ವತ ದಿಂದ ದಕ್ಷಿಣದ ಸಿಂಹಳ ದ್ವೀಪದವರೆವಿಗೂ ಕನ್ನಡತನ—ಕನ್ನಡ ಭಾಷೆಯ ಪ್ರಭಾವ ಹಬ್ಬಿರುವುದನ್ನು ಕಂಡು ನಲಿಯಬೇಕು. ದೂರದ ಪಾಶ್ಚಾತ್ಯ-ಪೌರ್ವಾತ್ಯ ಭೂಭಾಗದಲ್ಲಿ ನೆಲಸಿರುವ ಕನ್ನಡ ಸೋದರರ ಬಗ್ಗೆ ಹೆಚ್ಚು ಸೌಹಾರ್ದ ತೋರಬೇಕು. ಆತ್ಮಸುಖ, ಆತ್ಮೋನ್ನತಿ, ಆತ್ಮೈಕ್ಯ ವ್ಯವಸ್ಥೆ ವರ್ಧಿಸಬೇಕು.

ದೇವರಪೂಜೆ ದೇವತತ್ತ್ವವಿಜ್ಞಾನದ ತಿಳಿವು–ಮುಂತಾದುದರಲ್ಲೂ, ದೇವ–ಭಕ್ತರಿಗೆ ಆಸಕ್ತಿ ಇಮ್ಮಡಿ-ಮುಮ್ಮಡಿ–ಸಾಸಿರ ಮಡಿಯಾಗಬೇಕು. ಮತಾಚಾರದ ನಿಷ್ಠೆ ಗಂಭೀರವಾಗಿ ಹಬ್ಬಿ ಬೆಳೆಯಬೇಕು. ಪೂಜಾಕ್ರಮ, ಅದು ಚಂದವೋ? ಇದು ಚಂದವೋ ಎಂದು ಭಿನ್ನತಾ ಪ್ರವೃತ್ತಿಗೆಳಸದೆ ಆಶಾಭಗ್ನ ಮನೋಭಾವಕ್ಕೆ ಸಿಲುಕಿಕೊಳ್ಳದೆ, ತನ್ನ ಹಿಂದಣವರನ್ನೇ ಅನುಕರಿಸಿ ಸ್ವಧರ್ಮವನ್ನು ಅನವರತ ಪರಿಪಾಲಿಸುತ್ತಾ ಹೋಗಬೇಕು. ಸಾಧಕರು ಎಲ್ಲಿಯೇ ಆದರೂ ಮೌಢ್ಯಪರಿಸ್ಥಿತಿ ಕಂಡುಬಂದು, ಅದರಿಂದ ಸಮಾಜಕ್ಕೆ ಊನವಿರುತ್ತಿದ್ದರೆ–ಯೋಗ್ಯ ವ್ಯವಸ್ಥೆಯಿಂದ ಸರಿಪಡಿಸಿಕೊಳ್ಳಬೇಕು. ಹೃದಯಕಮಲ ಅರಳಿ, ಅನುರಾಗದ ಧ್ವನಿ ಹೊರಹೊಮ್ಮಿ ಭಜಿಸಿ ನುತಿಸಿ ತನ್ನಿಷ್ಟ ದೈವವನ್ನು ಆರಾಧಿಸಬೇಕು. ಸತ್ಯ ಭಗವಂತನಿಗೆ ತಾನು ಶರಣುವೆಣ್ಣಾಗಬೇಕು. ಸರ್ವಾರ್ಪಣ ಕರ್ತವ್ಯಸಿದ್ಧನಾಗಿ–ಧನ್ಯನಾಗಬೇಕು. ಗೊಡ್ಡು ವಿಚಾರವನ್ನು ಪುರಸ್ಕರಿಸಬಾರದು, ಎಂದರೆ–ಸನಾತನ ವರ್ಚಸ್ಸಿಗೆ ಸೊಪ್ಪುಹಾಕುವುದಲ್ಲ.

ಭಾವೀ ಭಾರತೀಯ ಜನಾಂಗದ ನಾಗರೀಕತೆಯೆಂದರೆ, ತಮ್ಮ ನೆರೆಹೊರೆಯ ಮತ–ಧರ್ಮ ಪದ್ಧತಿಯ ಗೌರವವನ್ನೂ ಉನ್ನತಿಯನ್ನೂ ಬಯಸುವ ಔದಾರ್ಯತೆ. ಇಂಥ ಔದಾರ್ಯದ ಹೆಗ್ಗುರುತೆಂದರೆ–ಅವರು ದೇಶ ದೇಶಗಳ ನಾಗರೀಕತೆಯನ್ನು ಪ್ರೀತಿಸುತ್ತಿರುವುದು; ವಿವಿಧ ಭಾಷೆಗಳನ್ನು ಅಭ್ಯಾಸಮಾಡುತ್ತಿರುವುದು; ನಾನಾ ಕಲಾಕ್ಷೇತ್ರಗಳಲ್ಲಿ ಔದ್ಯೋಗಿಕ ಕ್ರಿಯೆಗಳಲ್ಲಿ, ರಾಜಕೀಯ ನಿಷ್ಠೆಗಳಲ್ಲಿ ವಿಶ್ವಾಸ ತೋರಿಸುತ್ತಿರುವುದು.

"Comstant vigilance is the prize of democracy."

ಪ್ರಜಾತಂತ್ರ ಪದ್ಧತಿಯ ರಾಜ್ಯದ ಜನತೆ, ತನ್ನ ಪ್ರಗತಿಯ ಬಗ್ಗೆ ಎಷ್ಟೆಷ್ಟು ಸ್ಥಿರ–ಅಚಲ ಅವಧಾನದಿಂದಿರುತ್ತದೆಯೋ, ಅಷ್ಟೂ ಹಿತ-ಬಹುಮೌಲ್ಯ ಪಾರಿತೋಷಕ ಅದಕ್ಕೆ ಲಭ್ಯವಾಗುತ್ತದೆ–ಎಂಬುದು ಇಲ್ಲಿನ ರಾಜ್ಯ ನಿಬಂಧನೆಗಳಲ್ಲೊಂದು. ಇದಕ್ಕೆ ಅನುಸಾರವಾಗಿ–ತನ್ನ ಧಾರ್ಮಿಕ, ಸಾಮಾಜಿಕ, ನೈತಿಕ, ಆರ್ಥಿಕ, ರಾಜಕೀಯ– ಈ ಯಾವತ್ತೂ ಕ್ಷೇತ್ರದ ಗೌರವವನ್ನು ರಕ್ಷಿಸಿಕೊಂಡುಬರುತ್ತಿರುವುದೂ ವೀರಶೈವರ ಸೌಭಾಗ್ಯವೇಸರಿ.

* * * *

ಈಗ ವೀರಶೈವರ ಸಾಹಿತ್ಯ-ಸಂಸ್ಕೃತಿಯ ಹಿನ್ನೆಲೆಯ ವಿವೇಚನೆ :

ಐತಿಹಾಸಿಕವಾಗಿಯೇನೋ ನಾಲ್ಕಾರು ಸಾವಿರ ವರ್ಷಗಳಷ್ಟು ಪ್ರಾಚೀನತೆಯನ್ನು ಶೈವ ಹಾಗೂ ವೀರಶೈವ ಮತದ ತಲೆಗೆ ಕಟ್ಟುವ ಪರಿಪಾಠವಿದೆ. ವಿಸ್ತೀರ್ಣದ ಊಹೆಯೂ ಅಷ್ಟೇ; ಭಾರತದಲ್ಲಿ ಅತ್ತಲಾಗಿ ಕಾಶ್ಮೀರದಿಂದ–ಇತ್ತ ಕನ್ಯಾಕುಮಾರಿಯವರೆವಿಗೆ. ಆದರೆ ಈ ಸಮರ್ಥನೆಯಷ್ಟೇ ಅಂತಿಮ ಇತ್ಯರ್ಥವಲ್ಲ. ಇತಿಹಾಸ ತ್ರಿಕಾಲಬಾಧಕವಲ್ಲ. ಒಮ್ಮೆ ರೂಪುಗೊಂಡ ಘಟನಾಘಟನಾ ಸಂಗತಿ, ಇನ್ನು ಕೆಲವೇ ಕಾಲದಲ್ಲಿ ತನ್ನ ರೂಪುರೇಷೆಗಳನ್ನು ಕಳೆದುಕೊಳ್ಳುವುದೇನೂ ಸೋಜಿಗವಲ್ಲ. ಅಲ್ಲದೆ, ಗೌತಮಬುದ್ಧನ ಜನನದ ಮುನ್ನಿನ (ಕ್ರಿ ಪೂ. ೬೨೩) ಭಾರತೀಯ ಪುರಾವೃತ್ತವು ಎಲ್ಲೋ ಅಲ್ಪಸ್ವಲ್ಪವಾಗಿ ದೊರಕುತ್ತದೆಂದು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ. ಇನ್ನೂ ಮೌಲಿಕ ಸಾಹಿತ್ಯ ಇದ್ದಿದ್ದರೆ ಅದನ್ನು ಹೊರಕ್ಕೆ ತರುವ ಪ್ರಯತ್ನ ಬಹು ಕಡಿಮೆಯೇ ಸರಿ !

ಭರತಖಂಡದ ಮತ-ಧರ್ಮ-ಸಂಸ್ಕೃತಿ-ನಾಗರೀಕತೆಯ ಬಗ್ಗೆ ಶೋಧಿಸಿದಂತೆಲ್ಲಾ, ದಿನದಿನಕ್ಕೂ ಹೊಸ ಹೊಸ ಸಂಗತಿ ಹೊರಬೀಳುತ್ತಿದೆ. ಇನ್ನೂ ಎಷ್ಟೋ ಕಾಲ ಅವಿಶ್ರಾಂತ ಶ್ರಮವಹಿಸಿ ಪರಿಶೀಲಿಸಬೇಕಾದಷ್ಟು ಸಾಧನ ನಿಧಿ ಭೂಗರ್ಭದಲ್ಲಿ ಮಲಗಿಬಿಟ್ಟಿದೆ ಎಂದೆನಿಸುವಂತಿದೆ. ಉದಾಹರಣೆಗೆ (೧) ಈಗಿನ ಮುಂಬೈ ಬಳಿಯ ನೆವಾಸ ಎಂಬಲ್ಲಿಯ ಜಾಗವು ಈಗ್ಗೆ ಸುಮಾರು ಒಂದು–ಒಂದುವರೆ ಲಕ್ಷ ವರ್ಷಗಳ ಹಿಂದೆಯೆ ಯುದ್ಧ ಸಾಮಗ್ರಿ ಕೈಗಾರಿಕೆಯ ಸ್ಥಳವಾಗಿತ್ತು. (೨) ಗುಲ್ಬರ್ಗ ಪ್ರದೇಶ ಒಮ್ಮೆ ಭೂಮಧ್ಯ ಸಮುದ್ರಪ್ರದೇಶವಾಗಿತ್ತು, (೩) ಈಗ ಬೆಂಗಳೂರು ನಗರವಿರುವ ಸ್ಥಳದಲ್ಲಿ ಕ್ರಿಸ್ತಪೂರ್ವ ಎರಡು ನೂರು ಸಾವಿರ ವರ್ಷಗಳ ಮೊದಲೇ ದೊಡ್ಡ ಪಟ್ಟಣವೊಂದಿತ್ತು. (೪) ಲಿಂಗಪೂಜೆ ಮತ್ತು ಲಿಂಗಧಾರಣಾ ಪದ್ಧತಿ ಕ್ರಿಸ್ತಪೂರ್ವ ನಾಲ್ಕಾರು ಸಾವಿರ ವರ್ಷಗಳ ಪೂರ್ವದಲ್ಲೇ ಮೊಹೆಂಜೊದಾರೊ (ಮಹೇಂದ್ರುದಪ್ಪರ), ಹರಪ್ಪ ನಾಗರಿಕರಲ್ಲಿ ರೂಢಿಯಲ್ಲಿತ್ತು. ಈ ಎಲ್ಲ ವಿಷಯಗಳೂ ಇತ್ತೀಚಿಗಾದರೂ ಪ್ರಕಾಶಕ್ಕೆ ಬಂದುದು ಹೇಗೆ? ಇವೊತ್ತಿನ ಸಮರ್ಥರಾದ ಭೂಗರ್ಭ ಶಾಸ್ತ್ರಜ್ಞರ ಸಾಹಸದಿಂದಲೇ ಅಲ್ಲವೇ ?

ಇನ್ನೂ ಇದರಂತೆಯೇ ಪರಿಗಣಿಸಬೇಕಾದ ವಿಚಾರ : ಭರತಖಂಡದ ಮಟ್ಟಿಗೇ ಅಲ್ಲ, ಇಡೀ ಪ್ರಪಂಚದಲ್ಲೆಲ್ಲಾ ಒಂದು ಕಾಲಕ್ಕೆ ಶಿವಧರ್ಮದ ವ್ಯಾಪ್ತಿ ಇತ್ತು. ಮತ ಮತಾಂತರಗಳ ಕಲಹಕ್ಕೆ-ಆರ್ಯ, ಅನಾರ್ಯರ ವಿರೋಧಕ್ಕೆ ಆಗ ಅವಕಾಶವೇ ಇರಲಿಲ್ಲ. ಅಂದಿನ ಮಾನವ, ದಾನವ, ಯಕ್ಷ, ರಾಕ್ಷಸ, ವಾನರ, ದೇವವರ್ಗದ ಜನಾಂಗವೆಲ್ಲವೂ, ಪ್ರಾಯಃ-ರಾಜಕೀಯ ಪ್ರಜ್ಞೆಯುಳ್ಳವರೇ, ನೀತಿನಿಷ್ಠರೇ, ಸಮಾಜಪ್ರಿಯರೇ, ಕೃಷಿ-ವ್ಯಾಪಾರ-ಕೈಗಾರಿಕೆಗಳಲ್ಲಿ ತಜ್ಞರೆ, ವೇದ-ವೇದಾಂತ ಕುಶಲಕಲಾಭಿಜ್ಞರೇ, ದೇವರು-ದಿಂಡರು-ಗುರು-ಹಿರಿಯರಲ್ಲಿ ಭಕ್ತಿವಿಶ್ವಾಸವುಳ್ಳವರೇ, ಧಾರ್ಮಿಕ ಹಾಗೂ ಸಂಸ್ಕೃತಿಕ ಆಚಾರಶೀಲರೇ ಆಗಿ ಇರುತ್ತಿದ್ದರೆಂದೆನ್ನಲು-ತಕ್ಕಂತೆ ವೇದ ಆಗಮ ಪುರಾಣಗಳ ಸಾಕ್ಷಿಯಿದೆ. ಪುರಾತನ ಕಾಲದ ಭಾರತೀಯರ ನಾಗರೀಕತೆಯುನ್ನು ಸ್ಪಷ್ಟವಾಗಿ ಕಂಡು ಹೇಳಬೇಕಾದರೆ ಇಂತಹ ಅಸಾಧಾರಣ ಗ್ರಂಥರಾಶಿಯನ್ನು ಹೊಸ ಕಣ್ಣಿನಿಂದ-ಒಳಗಣ್ಣಿನಿಂದ ದೀರ್ಘಕಾಲ ನೋಡಿ ಪರೀಕ್ಷಿಸಿಯೇ ಒಂದು ಇತ್ಯರ್ಥಕ್ಕೆ ಬರಬೇಕು. ಇಲ್ಲವಾದರೆ, ಆದಿಯ ಭಾರತದ ನಿವೃತ್ತ ಹಾಗೂ ಪ್ರವೃತ್ತ ಜನಾಂಗದ ಪರಿಸ್ಥಿತಿ ಹೇಗಿತ್ತು ? ಗ್ರೀಕ್-ರೋಮನ್‌ನಂತಹ ಪೂರ್ವಕಾಲದ ಸಂಸ್ಕೃತಿಯೊಡನೆ ಭಾರತೀಯರಿಗೆ ಸಂಪರ್ಕವಿತ್ತೇ ಇಲ್ಲವೆ? ಇಂತಹ ಮಹತ್ವದ ಪ್ರಶ್ನೆಗಳಿಗೆ ಯಥಾರ್ಥವಾಗಿ ಉತ್ತರವೀಯುವುದು ಕಠಿಣವೇ ಸರಿ.

ಒಟ್ಟಾರೆ ಹೇಳುವ ಮಾತು ಒಂದೇ ಒಂದು : ಶಿವನ ಮತ್ತು ಶಿವಭಕ್ತರ ಇತಿಹಾಸ, ಶಿವಧರ್ಮದ ಅನುಭವ, ವೀರಶೈವ ಸಮಾಜಪದ್ಧತಿ ಕೂಡ-ನಿನ್ನೆ ಮೊನ್ನೆಯದಲ್ಲ; ಸಹಸ್ರ ಸಹಸ್ರ ವರ್ಷಗಳ ಸತ್‌ಪ್ರವಾಹ. ಎಂದಿನಿಂದ ಪರಮಶಿವನ ಅಸ್ತಿತ್ವದ ಜ್ಞಪ್ತಿಯೋ, ಎಂದಿನಿಂದ ಮಾನವ ಜಗತ್ತಿನ ಆಹಾರ ವ್ಯವಹಾರ ನಿತ್ಯನೈಮಿತ್ತಿಕ ಪ್ರತಿಷ್ಠೆಯ ಉಗಮವೋ ಅಂದಿನಿಂದ ಶಿವತತ್ತ್ವಜಿಜ್ಞಾಸೆ-ಶಿವಧರ್ಮಪ್ರವರ್ತನೆ-ಬೆಳೆದುಬಂದಿದೆ ; ಉಳಿದುಬಂದಿದೆ. ಶಿವನ ಪಂಚವಿಂಶತಿ ಲೀಲೆಗಳೊಡನೆ ಶಿವಭಕ್ತರ ಇಷ್ಟ-ಪ್ರಾಣ-ಭಾವ ಲೀಲಾಜೀವನ ಪ್ರವೃತ್ತಿ ಹೆಣೆದುಕೊಂಡುಬಂದಿದೆ. ವೇದ ಪೂರ್ವದ ಅಗ್ನಿ-ಇಂದ್ರ ಮುಂತಾದ ದೇವತೆಗಳು, ಪುರಾಣಪ್ರಸಿದ್ಧ ತ್ರಿಮೂರ್ತಿಗಳು ಅವರ ಕುಟುಂಬವರ್ಗ, ಕಶ್ಯಪಾದಿ ಋಷಿಗಳು, ನಳ-

ನಹುಷ-ಮಾಂಧಾತೃ-ರಘು-ಶಂತನು ಹರಿಶ್ಚಂದ್ರ ಇವರೆಲ್ಲರೂ ಶಿವಧರ್ಮ ಪ್ರಿಯರು.

ಶಿವೋಪಾಸನೆಯೆಂಬ ಪರಮೋಪಾಯದಿಂಪಲೇ ಸರ್ವವಸ್ತುಗಳಲ್ಲಿ-ಪ್ರಕೃತಿಯ ಸಮಸ್ತ ಅಭಿವ್ಯಕ್ತ ವಸ್ತುಗಳೊಡನೆ, ಅದು ಪ್ರಾಣಿಯೇ ಆಗಿರಲಿ-ಸಸ್ಯಮೂಲವೇ ಆಗಿದ್ದರೂ ಸರಿ ಮರಳಿನಲ್ಲಿ, ಕಲ್ಲಿನಲ್ಲಿ, ಮರದಲ್ಲಿ, ಗಿರಿಶಿಖರದಲ್ಲಿ, ಹೃದಯ ಗಂಹ್ವರದಲ್ಲಿ, ಮನೋ ಮಂದಿರದಲ್ಲಿ, ಆನೆ-ಕುದುರೆ-ಗೋವೃಂದದಲ್ಲಿ ಮಹಾದೇವನನ್ನು ಸಾಕ್ಷಾತ್ಕಾರ ಮಾಡಿಕೊಂಡು ಒಗ್ಗಟ್ಟಿನಿಂದ ಬಂದ ಜನ ಯುಗಯುಗಕ್ಕೂ ಇದ್ದರು. ಶಿವಮತದ ಗುರುತು ಅನಾದಿ ಸಂಸಿದ್ಧ.

ಸ ಮೇಧಯತಿ ಶಂ ನಿತ್ಯಂ ಸರ್ವಾರ್ಥಾನಾಮುಪಕ್ರಮೇ ।
ಶಿವಮಿಚ್ಛನ್ ಮನುಷ್ಯಾಣಾಂ ತಸ್ಮಾದ್ದೇವಶ್ಶಿವಸ್ಸ್ಮೃತಃ ॥
ಸಮಾ ಭವಂತಿ ಮೇ ಸರ್ವೇ ಮಾನವಾಶ್ಚ ಸುರಾಶ್ಚ ಯೇ ।
ಶಿವೋಽಸ್ಮಿ ಸರ್ವಭೂತಾನಾಂ ಶಿವತ್ವಂ ತೇನ ಮೇ ಸುರಾಃ ॥

ಇದು ಮಹಾಭಾರತದ ಕರ್ಣಪರ್ವದ ಶ್ಲೋಕ, ಲಿಂಗಧಾರಣಚಂದ್ರಿಕಾ ಪುಟ ೯೪ ರಲ್ಲಿ ಉದಾಹೃತವಾಗಿದೆ.

ಶಿವಮತದ ವಾಸ್ತವಿಕತೆಯನ್ನು ಸವಿಸ್ತಾರ ಚಿತ್ರಿಸುವ ಗ್ರಂಥಗಳ ಸಂಖ್ಯೆ ಸಾವಿರಗಟ್ಟಲೆ. ಇನ್ನು ಸ್ವವ್ಯೂಹ ಕಲಹ, ಅರಾಜಕತೆ, ಪರಮತೀಯರ ಧಾಳಿಯಿಂದ ಹಾಳಾಗಿ ಹೋದ ಭಾಗವೆಷ್ಟೆಷ್ಟೋ! ಇಲ್ಲಿ ಆ ಪುರಾಣ ಓದುವುದು ಬೇಡ.

* * * *

ಭರತಖಂಡದಲ್ಲಿ ಅದೆಂದಿನಿಂದಲೋ ಪ್ರಸಿದ್ಧಿಗೆ ಬಂದಿರುವ ಆಧ್ಯಾತ್ಮ ವಿದ್ಯಾಭ್ಯಾಸ ಪದ್ಧತಿ, ಅದು—ಸಾಂಖ್ಯ, ಯೋಗ, ಚಾರ್ವಾಕ, ಜೈನ, ಬೌದ್ಧ, ಪೌರಾಣಿಕ, ಆಗಮಿಕ, ವೈದಿಕ—ಹೀಗೆ ಯಾವ ರೂಪದಲ್ಲೇ ಇರುತ್ತಿರಲಿ; ಎಲ್ಲೆಲ್ಲೂ ಮನುಷ್ಯನ ಮನಸ್ಸಿನ ಆಳ-ಅಗಲ-ಎತ್ತರವನ್ನೂ, ಅವನ ಜೀವಮಾನದ ವರ್ಣವೈವಿಧ್ಯತೆಯನ್ನೂ, 'ದೇವ-ಜೀವ-ಜಗತ್' ಈ ಮೂರರ ಅವಿಭಾಜ್ಯ ವಿಸ್ತಾರವನ್ನೂ ಕುರಿತು ಚರ್ಚಿಸಿ, ಜಟಿಲ ಸಮಸ್ಯೆ

ಗಳನ್ನೆಲ್ಲ ಆಪ್ತಮೀಮಾಂಸಾ ಮತ್ತು ಯುಕ್ತ್ಯನುಶಾಸನಗಳ ಉಪಯೋಗ ಬಲದಿಂದ ಬಿಡಿಸಿ, ತನ್ಮೂಲಕ ಬದುಕಿನ ಸೌಂದರ್ಯವನ್ನು ಪುಷ್ಟಿಗೊಳಿಸಿ ಕೊಂಡು ಆನಂದಿಸುವುದೇ ಆಗಿದೆ. ವೀರಶೈವರ ಇಂಗಿತವೂ ಅದೇ ಪ್ರಕಾರ ಇರುತ್ತದೆ.

ಮತಿ ದೌರ್ಬಲ್ಯಂ ವಿನಾ ನ ಮತದೌರ್ಬಲ್ಯಂ ||

(ವ್ಯಾಸತಾತ್ಪರ್ಯ ನಿರ್ಣಯ—೧೨

ಇತ್ತೀಚಿನ ಮಧ್ಯಸ್ಥಿಕೆಯಿಂದಾಗಿ, ಪಕ್ಷ-ಪ್ರತಿಪಕ್ಷಗಳ ವಿದ್ವತ್ತೆ ಬೆಳಕಿಗೆ ಬಂದಿತೇ ವಿನಾ ಮೂಲ ಧರ್ಮದ 'ಇದಮಿತ್ಥಂ' ನಿರ್ಣಯವು ಹೊರಬಂದದ್ದಿಲ್ಲ. ಅದಾದರೂ ಆದ್ಯ ಗುರು ಸಂಪ್ರದಾಯದಲ್ಲೇ ಉಳಿದು ಕೊಂಡುಬಿಟ್ಟದೆ. 'ವಿಶ್ವಕ್ಕೆ ಅಖಂಡ ಶಾಂತಿ ಸಿಕ್ಕಲಿ; ಸರ್ವ ಜೀವರಿಗೆ ಶುಭವಿರಲಿ' ಇದು ಅವರ ನಿರಂತರ ಘೋಷಣೆ.

ಪಾಶುಪತ, ಲಾಕುಳ, ಕಾಳಾಮುಖ, ಭೈರವ, ಕಾಶ್ಮೀರಶೈವ, ತಮಿಳುಶೈವ, ಕರ್ನಾಟಕದ ಶಾಂತರ-ಸಮಯಗಳು ಕೂಡ ತಮ್ಮ ತಮ್ಮ ಆತ್ಮಬಲಕ್ಕೆ ಶಕ್ಯವಿದ್ದ ಮಟ್ಟಿಗೆ, ಸಮ್ಯಕ್ ದೃಷ್ಟಿಯಿಂದಲೇ ಶಿವಧರ್ಮ ವನ್ನು ಪ್ರತೀಕ್ಷಿಸಿದ್ದಾಗಿದೆ; ಶಿವನ ಕೃಪಾಮೃತವನ್ನು ಸವಿದು ಪುನೀತ ರಾಗಿದ್ದಾರೆ, ಆದರೆ ಆ ಎಲ್ಲ ಮತಧರ್ಮಗಳ ಸಂಪೂರ್ಣ ಚಿತ್ರ ಇವೊತ್ತು ನಮ್ಮ ಮುಂದೆ ಇಲ್ಲದಿರುವುದು ವ್ಯಸನಕರ. ಎಂದೆಂದೋ ಯಾವ ಯಾವ ಕಾರಣಗಳಿಂದಲೋ ಆ ಸಮಯವಾದಿಗಳೆಲ್ಲರೂ ಬೇರೆ ಬೇರೆ ಮತಧರ್ಮ ಗಳನ್ನು ಆಶ್ರಯಿಸಿಬಿಟ್ಟರಬೇಕು. ಒಂದರೊಡನೊಂದು ಮಿಲಿನವೂ ಆಗಿ ಬಿಟ್ಟು ತಮ್ಮ ನಿಜರೂಪವನ್ನು ಕಳೆದುಕೊಂಡು ಪರಿತಪಿಸಿಯೂ ಇರಬೇಕು.

ಸನಾತನ ವೀರಶೈವ ಪದ್ಧತಿಯ ಎಷ್ಟೆಷ್ಟೊ ಭಾಗವು ಆಗಿಂದಾಗ್ಗೆ ಕಾಲಪುರುಷನ ದವಡೆಗೆ ಸಿಕ್ಕಿ ನುಚ್ಚುನೂರಾಗಿದೆ; ಕಲಸುಮೇಲೋಗರದ ಗುಡ್ಡೆಯಾಗಿದೆ. ಆದರೂ, ಸ್ವಭಾವತಃ ಸ್ವಧರ್ಮನಿಷ್ಠ-ಶ್ರದ್ಧಾವಂತ ಪೀಳಿಗೆ ಮಾತ್ರ ಹಾಗಾಗೆಯೇ ಮುನ್ನಿನಂತೆ ಮುಂದುವರಿದುಕೊಂಡು ಬಂದಿದೆ. ಅಜ್ಞಾತವಾಸದಲ್ಲಿ ಎಷ್ಟೆಷ್ಟೋ ಕಾಲವನ್ನು ನೂಕಿಯಾದರೂ ತನ್ನ ತನ್ನ ಉಜ್ವಲಪರಂಪರೆಯನ್ನು ಉಳಿಸಿಕೊಂಡೇ ಬಂದಿದೆ. ಒಳಗೂ-ಹೊರಗೂ ತನ್ನ ತನಕ್ಕೆ ಅಂಟಿಕೊಳ್ಳದಲೆ ಇಲ್ಲವೇ ಇಲ್ಲ—ಸತ್ವವಂತರು.

ಸುವರ್ಣಾಜ್ಜಾಯಮಾನಸ್ಯ ಸುವರ್ಣತ್ವಂ ಹಿ ನಿಶ್ಚಿತಂ |

ಚಿನ್ನದಿಂದ ನಿರ್ಮಿತವಾದ ನಗ-ನಾಣ್ಯಗಳೆಲ್ಲ ಚಿನ್ನವೇ ಅಲ್ಲದೆ ಮತ್ತೇನು? ಹಾಗೆಯೇ, ಸಾಧಕನು ಶಿವನ ಉಪಾಸನೆಯಿಂದ ಶಿವನ ಗುಣತಾತ್ಪರ್ಯ ಸಾರವೇ ಆಗುವನು. ಅಮಲನು, ಅತೀಂದ್ರಿಯನು, ಅತಿ ವರ್ಣಾಶ್ರಮಿ, ಅವ್ಯಕ್ತ ಮಾನವ, ವೀರಮಾಹೇಶ್ವರ-ಎಂದೆನಿಸುವನು—ಆ ನೈಷ್ಠಿಕ ವೀರವ್ರತಿ ; ತನ್ನ ತನಕ್ಕೆ ಪ್ರತಿಯಾದ ಹೆಜ್ಜೆಯನ್ನು ಅವನು ಎಂದಿಗೂ ಇಡಲೊಲ್ಲ ; ಇಡಲೂ ಬಾರದು.

* * * *

ಮಾನವ, ಯಾವಯಾವುದೋ ಐಹಿಕ ಆಸೆಗಳ ಪೂರೈಕೆಗೋಸುಗ ಸ್ವೇಚ್ಛಾವಿಹಾರಿಯಾಗಿ, ಉತ್ತಮ ಕುಲ ಧರ್ಮವಿರೋಧಿಯಾಗಿ, ಪರಾರ್ಥ ಜೀವನವನ್ನು ಉಲ್ಲಂಘಿಸಿ ಹುಚ್ಚಾಬಟ್ಟೆ ವ್ಯವಹರಿಸುವುದು ಸರಿಯಲ್ಲ. ಮುಂದುವರಿದವರ ವಿರುದ್ಧ ಪೈಪೋಟಿ ನಡೆಸಿ, ಅವರ ಯಶಸ್ಸಿಗೆ ಕುಂದು ತರುವುದೂ ಒಳ್ಳೆಯದಲ್ಲ. ಬೆಳೆಯುವ ವ್ಯಕ್ತಿ, ಪಾರಮಾರ್ಥಿಕ ಪ್ರವೃತ್ತಿಯ ಜೊತೆಗೆ, ಲೌಕಿಕ ನಲವು ಒಲವುಗಳನ್ನೂ ಹಿತವಾಗಿ ಮಿತವಾಗಿ ಶೇಖರಿಸಿಕೊಂಡು, ಹಳೆಯ ಅವಿರಳತತ್ವವನ್ನು ಹೊಸಕಾಲದ ದೃಷ್ಟಿಗೆ ಸರಿಯಾಗಿ ಹೊಂದಿಸಿಕೊಂಡು ಬಾಳಲು ಕಲಿಯಬೇಕು. ಆಗಲೇ ತಿಳಿಸಿದಂತೆ—ವ್ಯಕ್ತಿಧರ್ಮ, ಸಮಾಜಧರ್ಮ, ಲೋಕಧರ್ಮ ಸಮ್ಮೇಳನ ಸುಸಂಗಿಯಾಗಿ ; ಅಂಥ ಅವಿರತ ಅಭ್ಯಾಸದಿಂದ ತನ್ನ ಬದುಕನ್ನು ಹಸನುಗೊಳಿಸಿಕೊಳ್ಳುವ ಅನುವರ್ತನೆ ಪ್ರಪಂಚಕ್ಕೇ ಆದರಣೀಯ—ಅನುಚಿಂತನೀಯ.

ವೀರಶೈವರ 'ಶಿವೋಪಾಸನಾ ವಿವೇಕ'ವು ಈಪರಿಯ ಶುಭ ಸ್ವಭಾವ ಸಾರಾಂಶ ಸಂಯುಕ್ತವೇ ಆಗಿದೆ. 'ಲಿಂಗಮಧ್ಯೇ ಜಗತ್ಸರ್ವಂ' ವಾಕ್ಯ ಸಮರ್ಥನೆಯು 'ಒಂದು ಮನೆ—ಹತ್ತಾರು ಕೋಣೆಗಳು' ಈ ಸಾಮ್ಯವನ್ನು ನೆನಪಿಗೆ ತಂದುಕೊಡುತ್ತದೆ. ಲಿಂಗವಂತಿಕೆಯೊಂದೇ ಅಲ್ಲ, ಶಿವಧರ್ಮಿಯು ಗೌರವಿಸುವ ವಿಭೂತಿ, ರುದ್ರಾಕ್ಷಿ, ಶಿವಮಂತ್ರ, ಗುರು, ಜಂಗಮ, ತೀರ್ಥ, ಪ್ರಸಾದ—ಈ ಎಲ್ಲದರ 'ಆಯತ-ಸ್ವಾಯತ-ಸನ್ನಿಹಿತ' ಶಕ್ತಿಯೂ, ಮೂವತ್ತಾರು ಮಹಾತತ್ತ್ವಗಳ-ಷಡಧ್ವಗಳ-ಷಟ್

ಸ್ಥಲಗಳ ಪರಿಶ್ರಮವೂ, ಅನವರತ ಅಭ್ಯಸಿಸುತ್ತಿರುವ ಪಂಚಾಚಾರ-ಸಚ್ಛೀಲಾನುವರ್ತನೆಯೂ ಅವನನ್ನು ಅನಂತರೂಪಮಯ ನಿಸರ್ಗದ ಪ್ರಭುವನ್ನಾಗಿ, ನಿರ್ಮಲ-ನಿರವದ್ಯ-ನಿರಂಜನ ಓಘದ ಸ್ವಸ್ವರೂಪಜ್ಞನನ್ನಾಗಿ ಮಾರ್ಪಡಿಸುವುದು. ತಮ್ಮ ಅನುಯಾಯಿ ಪ್ರಪಂಚವು ಇಂತಹ ಅದ್ಭುತ ಸೌಂದರ್ಯಮಾರ್ಗದಲ್ಲಿ ಸುಖವಾಗಿ ಗಮಿಸಿ ಉದ್ದಿಷ್ಟ ಗುರಿ ಸಾಧಿಸಲಿ—ಎಂದು ಮತಸ್ಥಾಪಕರಾದ ಭಗವಾನ್ ರೇಣುಕಾದಿ ಪಂಚಾಚಾರ್ಯರು ಆಶಿಸಿದರು. ಅದು ಅವರ ಕರ್ತವ್ಯವೇ ಆಗಿತ್ತು. ಅವರ ಉಪದೇಶದಲ್ಲಿ ಸಮ್ಯಕ್ ಸರಲತ್ವ, ಸುಲಭತ್ವ, ಸನಾತನತ್ವ, ಪವಿತ್ರತ್ವ, ಸತ್ಫಲಭರಿತ ಶಿವತ್ವ ಆಳವಾಗಿ ಬೇರುಬಿಟ್ಟಿದೆ. ಅರಿತು ಆಚರಿಸಿ ಸುಖಿಯಾಗಬೇಕು—ಸಾಧಕ ; ಅಷ್ಟೆ.

ಸತ್ಯ ಶುದ್ಧ ಚಾರಿತ್ರ್ಯವುಳ್ಳವರು ಧರ್ಮಕ್ಕೆ ಅಲ್ಪಾರ್ಥವನ್ನಾಗಲಿ-ವಿರೋಧಾರ್ಥವನ್ನಾಗಲಿ ಎಂದೂ ಕಲ್ಪಿಸುವದಿಲ್ಲ. ಅವರ ಸಕಲ ಸಾಧನೆಯ ಹಿನ್ನೆಲೆಯಲ್ಲಿ ಏಕೇಶ್ವರ ನಿಷ್ಠೆ ತಾನೇ ತಾನಾಗಿ ಕಳಕಳಿಸುತ್ತಿದೆ. ಅವರ ದೃಷ್ಟಿಯಲ್ಲಿ—'ಸಂಸ್ಕೃತಿ ಮತ್ತು ಸಂಪ್ರದಾಯ ಪ್ರೇಮ, ಕೇವಲ ಪುಸ್ತಕದಲ್ಲಿಯೇ ಉಳಿದುಹೋಗಬಾರದು ; ಆಚರಣೆಯಲ್ಲಿ ಬರಬೇಕು. ಪ್ರಾಮಾಣಿಕತೆ-ದಕ್ಷತೆ ಎದೆ ತೆರೆದು ನಿಂತು ಶಿವಧರ್ಮವನ್ನು ಪರಿಪಾಲಿಸಬೇಕು ; ಮನಸಾರೆ ಸಾಮಾಜಿಕ ನಿಯಮಗಳನ್ನು ಅನುಷ್ಠಾನಕ್ಕೆ ತಂದುಕೊಳ್ಳಬೇಕು ; ಭಾವ ಸಮ್ಯಕವಾಗಿ ರಾಷ್ಟ್ರದ ಉನ್ನತಿಯನ್ನು ಬಯಸಬೇಕು ಎಂಬ ಮಮತೆಯಿದೆ. ಹೀಗೆ ತ್ರಿಕರಣಪೂರ್ವಕ ನಿರಂತರ ಕೆಲಸಮಾಡುತ್ತಾ ಹೋದರೆ, ಆ ಕೆಲಸವೇ ಸಾಧಕ ಜೀವನವನ್ನು ಶುದ್ಧಗೊಳಿಸುತ್ತದೆ. ಸಮಸ್ತ ಜಂಜಡಗಳ ಸೋಂಕೂ ಇಲ್ಲದಂತಾಗಿ ಹಗುರಾದ ಹೃದಯ ಪರತತ್ತ್ವದ ಕಡೆಗೆ ತೀವ್ರವೇ ಅಭಿಮುಖವಾಗುತ್ತದೆ ; ಇಷ್ಟಾರ್ಥ ಸಿದ್ಧಿಸುತ್ತದೆ—ಇದು ಶಿವಜ್ಞಾನಿಗಳ ಅಭಿಮತ.

ಬ್ರಹ್ಮೇತಿ ಶಂಕರಾಯತ್ತಪಶುಪತಿ ಮಪರೇ ಪಾಂಚರಾತ್ರಾಶ್ಚ ವಿಷ್ಣುಂ ।
ಕರ್ಮೇತ್ಯೇಕಂ ಜೈಮಿನೀಯಾಃ ಕಣಭೃಗನುಗತಾಶ್ಚೇಶ್ವರಂ

ಗೌತಮೀಯಾಃ ॥

ಅವ್ಯಕ್ತಂ ಕಾಪಿಲೇಯಾಃ ಫಣಿಪಮತವಿದಸ್ತ್ವೀಶ್ವರಂ ತನ್ನಿಧಾನಂ ।
ಸ್ವಾಭಿನ್ನಾಚಿಂತ್ಯಶಕ್ತಿಸ್ಫುರಣ ಸಮರಸಂ ಶ್ರೀಮಹಾಲಿಂಗಮಾಡೆ ॥೩॥

ಮರಿತೋಂಟದಾರ್ಯರು—ವೀರಶೈವಾನಂದಚಂದ್ರಿಕಾ
ವಾದಕಾಂಡ ಪ್ರಕರಣ—೧.

"ಯಾವ—ಅಚಿಂತ್ಯ, ಅನಾದಿ, ಅಮೃತ ಉಪಾಸಕೋಪಾಸ್ಯ ಶಕ್ತಿಯು, ಸಾಧಕರ ಅನುಭೂತಿಗೆ ತಕ್ಕಂತೆ ಬ್ರಹ್ಮವೆಂದು ಪಶುಪತಿಯೆಂದು ವಿಷ್ಣುವೆಂದು ಕರ್ಮವೆಂದು ಅನೀಶ್ವರವೆಂದು ಅವ್ಯಕ್ತವೆಂದು ಈಶ್ವರನೆಂದು—ಪರಿಪರಿಯ ಹೆಸರುಗಳಿಂದ ಕರೆಯಲ್ಪಡುತ್ತದೆಯೊ, ಶ್ರೀ ಶಂಕರಾದಿ ಆಚಾರ್ಯರಿಂದ ಅಭಿವಂದ್ಯವಾದ ಆ ಏಕಮೇವಾದ್ವಿತೀಯ ಮಹಾಲಿಂಗದ ಅರಿವು-ಆಚರಣೆ ಇತೋಪ್ಯಧಿಕವಾಗಿ ವಿಸ್ತಾರಹೊಂದಲಿ; ಲೋಕಕ್ಕೆ ಸಕಲ ಸನ್ಮಂಗಳಗಳೂ ದೊರಕೊಳ್ಳಲಿ."

ಯತೋ ಯತಃ ಸಮೀಹಸೇತತೋನೋಽಅಭಯಂ ಕುರು ।
ಶನ್ನಃ ಕುರುಪ್ರಜಾಭ್ಯೋ ಭಯನ್ನಃ ಪಶುಭ್ಯಃ ॥

ಓಂ ಶಾಂತಿಃ ಶಾಂತಿಃ ಸುಶಾಂತಿರ್ಭವತು ॥

ಸರ್ವಾರಿಷ್ಟ ಶಾಂತಿರ್ಭವತು ॥

ಎಂಬುದು ಆ ವಿದ್ವಾಂಸರ ಅನುದಿನದ ಪ್ರಾರ್ಥನೆ. ಅವರ ನೆನಹಿನಲ್ಲಿ ಸುವಿಶಾಲ ದೂರದರ್ಶಿತ್ವವಿದೆ; ಧೀರೋದ್ದಾತ್ತತೆಯಿದೆ; ಸ್ನೇಹವರ್ಧಕ ಜೀವನ ಸಮನ್ವಯವಿದೆ. ಪ್ರಪಂಚದ ಸರ್ವಾಂಗೀಣ ಉನ್ನತಿಗೆ ಇದಕ್ಕಿಂತ ಇನ್ನಾವ ಮಹಾಸೌಕರ್ಯ ಬೇಕು?

ವಿಶ್ವಧರ್ಮಕ್ಕೆ ಜಯವಾಗಲಿ!



# ಮಂಗಲವಾಕ್ಯ



ಶಕೇ ದೇಹಾದಿಕೇ (೧೮೫೮) ಶ್ರೀಮತ್ಪರಾಭವ ಮಿತೇ ಮಹಾ ।
ಶಿವರಾತ್ರಿದಿನೇ ಜೀವವಾಸರೇ ಚ ಶ್ರವಿಷ್ಠಕೇ ॥ ೫ ॥

ಶಿವೋಪಾಸನ ವಿವೇಕಾಖ್ಯ ಗ್ರಂಥೋಽಯಂ ಕಥಿತಂ ಮಯಾ ।
ಸಮರ್ಥೀಭೂತ ಮಕರೋತ್ ಶಿವನಂದೀಕೃಪಾಬಲಾತ್ ॥ ೬ ॥

ಶ್ರೀ ವೀರಭದ್ರದೇವಂ ಧೀವರ ಹಲಗೂರು ಮಠಾಧೀಶಂ ಶಾಸ್ತ್ರೀ ॥
ಜ್ಜೀವನ ಬುದ್ಧಿಯೊಳೊವೆಂದ ಭಾವುಕರುಂ ಮುದಂ ಬಡುಗೆ
ಪರಿಸುತ್ತಿದನುಂ ॥ ೭ ॥

ಜಿಜ್ಞಾಸತ್ವಂ ಸಂವರ್ಧಿಸಿ ಜನರ್ ಜ್ಞಾನಕ್ರಿಯಾ ಭಕ್ತಿಯಾ
ಪ್ರಜ್ಞಾಸಕ್ತರ್ ತಾವಾಗಿ ಸುಖಮಂ ಸೌಭಾಗ್ಯಮಂ ತಾಳ್ದು ಮೇಣ್ ॥
ಸೌಜನ್ಯಶ್ರೀಯಂ ಕೈವಿಡಿಯುತುಂ ಬಾಳ್ದಂ ವಲಂ ಶೋಭಿಸ
ಲ್ಕಾಜ್ಯೋತಿಶ್ಶಾಂತೇಶಂ ದಯೆಯ ನಿತ್ಯಾನಂದಮಂ ಪೊಂದುಗೆ ॥ ೮ ॥

ಇದು ಕಣಾ ವೀರಶೈವಾಚಾರ ನಿರ್ಣಯಂ
ಇದು ಕಣಾ ಶಿವಧರ್ಮಕಾಸಾರ ಚಾರಿತ್ರ್ಯ
ವಿದುಕಣಾ ಪರಶಿವೋಪಾಸನಾ ವಿಜ್ಞಾನ ಷಟ್ಸ್ಥಲಾಭ್ಯಾಸ ಕಥನಂ ॥
ಇದುಕಣಾ ಪರಮುಕ್ತಿ ವನಿತಾ ವಿಹಾರ ಸಂ
ವಿದಿತ ಭೂಮಿಕೆಯಿದಂ ಮುದದಿಂದಲೇರುತುಂ
ಚದುರರುರೆ ನಲಿಯುವುದು ಶಿವದೊಳೊಂದಾಗುವುದು
ಮಂಗಳಂ ಜಯ ಮಂಗಳಂ ॥ ೯ ॥

ರಾಗ–ಕಾಂಭೋಜಿ, ಸೌರಾಷ್ಟ

ಜಯ ಜಯ ಜಯ ಮಂಗಳ ॥ ಪ ॥

ಜಯ ಶಾಂತಲಿಂಗ ಚಿನ್ಮಯ ಪರಬ್ರಹ್ಮ ॥ ಅ.ಪ ॥

ನಿರವಯಲಿನ ತೂಗು ಕಂಬ, ತೆರೆ
ದುರಿವ ಚಿಜ್ಜ್ಯೋತಿಯ ಬೆಳಕಿದೆ ತುಂಬ ||
ಇರಲಾರದಲ್ಲಿ ಕತ್ತಲೆಯು—ಜ್ಞಾನ
ದಿರವೆ ತಾನಹಹ—ಸತ್ಯವಿದು ||೧||

ಮನದ ಮಿಂಚಿನ ಭಾವಲಹರಿ—ಆದ
ಕೇನೇನೂ ಬಿಡವಿಲ್ಲ ನೋಡು ವಿಹಾರಿ ||
ಘನ ಷಟ್‌ಸ್ಥಲಾತ್ಮದಿರವ ನೀನರಿಯುತ
ಲನುವಿನಿಂ ಸ್ವಯವಾಗು ಮೂಲ ಪ್ರಣವದಲ್ಲಿ ||೨||

ಭಸಿತ ಮೊದಲಾದೆಂಟು ಬಗೆಯ—ನೈಜ
ದೆಸಕದ ಬುದ್ಧಿ ನಿಯಂತ್ರಣ ವಿಧಿಯ ||
ನಿಸದ ಕೈಬಿಡದೆ ನಡೆಸಿ ಸದ್ಧರ್ಮದ
ದೆಸೆಯನಡರಿ ಚೆನ್ನಮಲ್ಲನೊಳೊಂದಾಗು ||೩||



# ಅನುಬಂಧ

## (೧) ಸಂಕೇತಗಳ ವಿವರ (ಅಕಾರಾದಿ)

ಅಥರ್ವ ಉ–ಅಥರ್ವಣ ಉಪನಿಷತ್.

ಅನಾದಿ–ಅನಾದಿ ವೀರಶೈವಾಚಾರ ಸಂಗ್ರಹ.

ಈ. ಉ–ಈಶಾವಾಸ್ಯೋಪನಿಷತ್.

ಋಕ್ ಸಂ–ಋಗ್ವೇದ ಸಂಹಿತಾ.

ಐ. ಉ–ಐತರೇಯೋಪನಿಷತ್.

ಕಾರ–ಕಾರಣಾಗಮ.

ಕೇ ಉ–ಕೇನೋಪನಿಷತ್.

ಕೈ. ಸಂ–ಕೈಲಾಸ ಸಂಹಿತಾ.

ಕ್ರಿಯಾ–ಕ್ರಿಯಾಸಾರ.

ಗೀ–ಭಗವದ್ಗೀತಾ.

ಚಂದ್ರ ಚಂದ್ರಜ್ಞಾನಾಗಮ.

ತೈ ಆ ತೈತ್ತಿರೀಯ ಆರಣ್ಯಕ.

ತೈ. ಉ–ತೈತ್ತಿರೀಯ ಉಪನಿಷತ್.

ತೈ. ಸಂ–ತೈತ್ತಿರೀಯ ಸಂಹಿತಾ.

ಬೃ. ಉ–ಬೃಹದಾರಣ್ಯಕೋಪನಿಷತ್.

ಬೃ. ಜಾ. ಉ–ಬೃಹಜ್ಜಾಬಾಲ ಉಪನಿಷತ್.

ಬ್ರ. ಗೀ–ಬ್ರಹ್ಮಗೀತಾ.

ಬ. ಸೂ–ಬ್ರಹ್ಮಸೂತ್ರ.

ಮಹಾ–ಮಹಾಭಾರತ.

ಮ. ನಾ–ಮಹಾ ನಾರಾಯಣೋಪನಿಷತ್.

ಮುಂ. ಉ–ಮುಂಡಕೋಪನಿಷತ್.

ಯಜು–ಯಜುರ್ವೇದ.

ಯ. ವೈ–ಯಜ್ಞವೈಭವ ಖಂಡ.

ರಾ. ವಿ–ರಾಜಶೇಖರ ವಿಲಾಸ.

ರುದ್ರಾ. ಉ–ರುದ್ರಾಕ್ಷ ಜಾಬಾಲೋಪನಿಷತ್.

ರುದ್ರ. ಸಂ-ರುದ್ರ ಸಂಹಿತಾ.
ಲಿಂಗ. ಛಂ-ಲಿಂಗಧಾರಣ ಚಂದ್ರಿಕಾ.
ವಾತೂ-ವಾತೂಲಾಗಮ.
ವಾ. ಸಂ-ವಾಯುವೀಯ ಸಂಹಿತಾ.
ವಾಜ. ಸಂ ವಾಜಸನೇಯ ಸಂಹಿತಾ.
ವಿದ್ಯೇ. ಸಂ-ವಿದ್ಯೇಶ್ವರ ಸಂಹಿತಾ.
ವಿಶೇ-ವಿಶೇಷಾರ್ಥ ಪ್ರಕಾಶಿತಾ.
ವೀ. ಆ-ವೀರಶೈವಾನಂದಚಂದ್ರಿಕಾ.
ವೀ. ಧ-ವೀರಶೈವ ಧರ್ಮಶಿರೋಮಣಿ.
ವೀ. ಸ. ವೀರಶೈವ ಸದಾಚಾರಸಂಗ್ರಹ
ವೀ. ಪ್ರ-ವೀರಶೈವಾಚಾರ ಪ್ರದೀಪಿಕಾ.
ವೈ. ದ-ವೈಶೇಷಿಕ ದರ್ಶನ.
ಶ. ಸಂ-ಶಂಕರ ಸಂಹಿತಾ.
ಶಿವ-ಶಿವಗೀತಾ.
ಶಿ. ರ-ಶಿವರಹಸ್ಯ.
ಶಿವಾ-ಶಿವಾನುಭವಸೂತ್ರ.
ಶಿ. ತ. ರ-ಶಿವತತ್ತ್ವರತ್ನಾಕರ.
ಶಿ. ಪು-ಶಿವಮಹಾಪುರಾಣ.
ಶಿ. ದೃ-ಶಿವದೃಷ್ಟಿ.
ಶಿ. ಮಂ-ಶಿವಾದ್ವೈತಮಂಜರೀ.
ಶಿ. ಸೂ-ಶಿವಸೂತ್ರ.
ಶ್ರೀ. ಭಾ- ಶ್ರೀಕರಭಾಷ್ಯ.
ಶ್ವೇತಾ-ಶ್ವೇತಾಶ್ವತರ ಉಪನಿಷತ್.
ಸಾ. ಶಾ-ಸಾಮವೇದ ಶಾಖೆ.
ಸಿ. ಶಿ-ಸಿದ್ಧಾಂತಶಿಖಾಮಣಿ.
ಸೂ. ಆ-ಸೂಕ್ಷ್ಮಾಗಮ.
ಸೂ. ಸಂ-ಸೂತ ಸಂಹಿತಾ.
ಸ್ಕಾಂ. ಕೇ-ಸ್ಕಾಂದೇ ಕೇದಾರಖಂಡ.
ಸ್ಕಾಂ. ಬ್ರ-ಸ್ಕಾಂದೇ ಬ್ರಹ್ಮೋತ್ತರಖಂಡ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೧೮ | ಕಳೆಕಳಿಪಾ | ಪೊಳೆವಾ |
| ೩ | ೧೭ | ಯಥ್ಯಾನಲಃ | ಯಥಾನಲಃ |
| ೯ | ೨೭ | (ಸಿ)ಶ-೯ಸ್ಲರಿ. | ಸಿ. ಶಿ.ಪರಿ-೫ |
| ೧೧ | ೨ | ಪಕ್ಷತೆ | ಪಕ್ವತೆ |
| ೧೨ | ೨೬ | ವಿಶ್ವಪ್ರಜ್ಞೆ | ನಿಃಸಂಜ್ಞಾ ವಿಶ್ವಪ್ರಜ್ಞೆ. |
| ೧೪ | ೫ | ವಪ್ಪುವಿ | ಒಪ್ಪುವಿ |
| ೧೮ | ೧೦ | ಸಮಸ್ಯೆಗಳನು | ಸಮಸ್ಯೆಗಳನ್ನು |
| ೨೩ | ೧೪ | ಘಟವನ್ನು | ಘಟ್ಟವನ್ನು |
| ೨೫ | ೧೧ | ಎಂಬ | ಎಂಬ ಹೆಸರೂ, |
| ೨೫ | ೧೨ | ವೆಂಬ | ವೆಂಬ ಹೆಸರೂ |
| ೨೫ | ೧೪ | ವೆಂಬ | ವೆಂಬ ಹೆಸರೂ |
| ೨೫ | ೧೬ | ವೆಂಬ | ವೆಂಬ ಹೆಸರೂ |
| ೩೧ | ೧೪ | ಅಗಿರಿತ್ಯಾದಿಭಿ | ಅಗ್ನಿರಿತ್ಯಾದಿಭಿ |
| ೩೨ | ೧೫ | ಈಶೇಶನ | ಈಶೇನ |
| ೩೩ | ೨೪ | – – ಚ | ಸಾಯಾಹ್ನೇಚ |
| ೩೪ | ೬ | ಕ್ಯಾಗೇs – – | ತ್ಯಾಗೇs – – |
| ೩೪ | ೯ | ಪರತ್ರತ್ವ | ಪರತತ್ತ್ವ |
| ೩೫ | ೧೪ | ಪಿಶಾಚಾತ್ಟ | ಪಿಶಾಚಾಶ್ಚ |
| ೩೫ | ೧೯ | ಭವದ | ಭವವ |
| ೩೬ | ೨೫ | ರಿಷ್ಟ | ಇಷ್ಟ |
| ೩೬ | ೨೬ | ಯೆಂದೆನ್ನುವ | ಎಂದೆನ್ನುವ |
| ೩೬ | ೨೬ | ಸಿದ್ದಾಂತ | ಸಿದ್ಧಾಂತ |
| ೩೭ | ೧೯ | ಮಾನೋ | ಮಾನೋ |
| ೩೮ | ೨೩ | ಭೋಧಿಸಿದ | ಬೋಧಿಸಿದ |
| ೪೭ | ೭ | ತಟಕೇ | ಕಟಕೇ |

| | | | |
|---|---|---|---|
| ೫೫ | ೧೫ | ಅಭೇಧ | ಅಭೇದ |
| ೭೭ | ೨೨ | ವಿಳೈವನ್ | ವಿಟಿತ್ರೈವನ್ |
| ೮೩ | ೨೭ | ಶಿವಧರ್ವಿುಪ್ರಿಯ | ಶಿವಧರ್ಮಪ್ರಿಯ |
| ೮೫ | ೧೫ | ಅಪರೂಪವಾಸ | ಅಪರೂಪವಾದ |
| ೮೫ | ೨೪ | ಸಂಪಲ್ಪ | ಸಂಕಲ್ಪ |
| ೮೯ | ೨೦ | ಪಶುಪತಿ-ಪಾಶ | ಪಶು-ಪತಿ-ಪಾಶ |
| ೯೦ | ೨೨ | ಭ್ರಮಣಿ | ಭ್ರಮಣೆ |
| ೯೪ | ೧೮ | – – ಗಳನ್ನು | ನಿಂದೆಗಳನ್ನು |
| ೧೦೨ | ೨೭ | ಡ್ವಯಾರ್ಽಪೇಕ್ಷೋ | ದ್ವಯಾಽಪೇಕ್ಷೋ |
| ೧೧೦ | ೧೬ | ಮಹಾತ್ತತ್ಪ | ಮಹಾತತ್ತ್ವ |
| ೧೧೦ | ೨೧ | ನಿಶ್ಶ್ರೇಶಯಸಗಳು | ನಿಶ್ಶ್ರೇಯಸಗಳು |
| ೧೧೧ | ೨೫ | ದಿಗ್ಧೇವತಾ | ದಿಗ್ದೇವತಾ |
| ೧೧೨ | ೨೫ | ಸಾಮೂತ್ಪ್ರಸಾದ | ಸಾಮ್ಯಾತ್ಪಸಾದ |
| ೧೨೬ | ೩ | ರೋಗಭಯಂ | ರೋಗಭಯಮಂ |
| ೧೩೦ | ೯ | ಧಾತವ್ಯ | ಧ್ಯಾತವ್ಯ |
| ೧೩೦ | ೧೦ | ಯಜ್ಞೇತ್ಸದಾ | ಯಜೇತ್ಸದಾ |
| ೧೩೪ | ೮ | ಯೋಗಿಕ | ಯೌಗಿಕ |
| ೧೩೬ | ೧೧ | ಪರಮತತ್ತ್ವದ | ಪರಮಶಿವತತ್ತ್ವಧ |
| ೧೩೭ | ೧೫ | ಆನವರತ | ಅನವರತ |
| ೧೪೦ | ೯ | ಪೂರ್ವಪ್ರಯೆ | ಪೂರ್ವಪ್ರಯೋಗ |
| ೧೪೧ | ೨ | ಮನವ | ಮಾನವ |
| ೧೪೨ | ೧೦ | – – ಪೃಭಿನ್ಯ | – – ಪೃಭಿನ್ನ |
| ೧೪೨ | ೧೬ | ಚಿತ್ತ್ರಣ | ಚಿತ್ತ್ರವು |
| ೧೪೩ | ೮ | ಪಕೃತಿ | ಪ್ರಕೃತಿ |
| ೧೪೪ | ೪ | ಸ್ವಮಕವನ್ನು | ಸ್ವಮತವನ್ನು |
| ೧೪೭ | ೧೫ | ಪಪ್ರುಥಮವಾಗಿ | ಪ್ರಪ್ರಥಮವಾಗಿ |
| ,, | ೧೭ | ಸರ್ವಾಂತರ್ಯಾಮಿ | ಸರ್ವಾಂತರ್ಯಾಮಿ |

| | | | |
|---|---|---|---|
| ೧೪೯ | ೧೫ | ಕಂಡುಕೊಳಲಿ | ಕಂಡುಕೊಳ್ಳಲಿ |
| ,, | ೨೨ | ಪ್ರತಿಜ್ಞೆಯಾಮಿ ಎಂದು | – – |
| ೧೫೨ | ೧೩ | ಪ್ರತಿಕ್ಷಣದಿಂದ | ಪ್ರತಿಕ್ಷಣದ |
| ೧೫೪ | ೧೫ | ಆದರಂತೆ | ಅಂದರಂತೆ |
| ೧೫೫ | ೧೩ | ಯಚ್ಛವಾಯ | ಯಚ್ಛಿವಾಯ |
| ೧೫೮ | ೧೨ | ಭಿದ್ಯತೆ | ನ ಭಿದ್ಯತೆ |
| ,, | ೨೪ | ಅ ಶಿವದೊಳಗೆ | ಅಶಿವದೊಳಗೆ |
| ೧೬೦ | ೬ | ಇತಿಹಾಸಿಕವಾಗಿ | ಐತಿಹಾಸಿಕವಾಗಿ |
| ೧೬೧ | ೨೩ | ನಿರ್ಘನಿತನ | ನಿರ್ಘನಿಕನು |
| ೧೬೩ | ೧೧ | ವಂಶದಿಂದ | ವಶದಿಂದ |
| ,, | ೧೨ | ಸತ್ಯವರ್ಮಾಚರಣೆ | ಸತ್ಕರ್ಮಾಚರಣೆ |
| ,, | ೨೫ | ಯಜೇದ್ರುದ್ರಂ | ಯಜೇದ್ರುದ್ರಂ |
| ೧೬೪ | ೧೫ | ಬಿಸಿಲ್ಗುದರೆಯನ್ನು | ಬಿಸಿಲ್ಗುದುರೆಯನ್ನು |
| ೧೬೫ | ೨೬ | ಅನಿಶ್ಚಿಕತೆ | ಅನಿಶ್ಚಿತತೆ |
| ೧೬೬ | ೬ | ಶತ್ತ್ವವಶಃ | ತತ್ತ್ವವಶಃ |
| ,, | ೨೬ | ಸುಗುಣ | ಸಗುಣ |
| ,, | ೨೭ | ತಲೆಯೂ | ಕಲೆಯೂ |
| ೧೬೭ | ೧ | ಶೃತಿಯಲ್ಲಿ | ಶ್ರುತಿಯಲ್ಲಿ |
| ೧೬೯ | ೧೧ | ಸಾಮ್ಯಭುಜ್ಯ | ಸಾಮ್ಯಭುಜ |
| ೧೭೨ | ೧೬ | ಭವದೋಃಷ ಹಿಂಗೀ | ಭವದೋಷ ಹಿಂಗಿ |
| ೧೭೪ | ೫ | ಶಿಲ್ಪಕರ | ಶಿಲ್ಪಕಲೆ |
| ೧೭೬ | ೧೧ | ಸುಮಸ್ತಾನಾಂ | ಸಮಸ್ತಾನಾಂ |
| ೧೮೧ | ೬ | ಗಂಹ್ವರದಲ್ಲಿ | ಗಹ್ವರದಲ್ಲಿ |
| ೧೮೪ | ೧೮ | ಸವ್ಮ್ಯಕವಾಗಿ | ಸಮ್ಯಕ್ತವಾಗಿ |
| ೧೮೫ | ೧೧ | ಸನ್ಮಂಗಳಗಳೂ | ಸನ್ಮಂಗಲಗಳೂ |
| ೧೮೬ | ೧೨ | ನಿತ್ಯಾನಂದವುಂ | ನಿತ್ಯಾನಂದವುಂ |



ಪದ್ಮಶ್ರೀ ವಿ. ಕೃ ಗೋಕಾಕ್,
ಉಪಕುಲಪತಿ
ಬೆಂಗಳೂರು ವಿಶ್ವವಿದ್ಯಾನಿಲಯ,
ಬೆಂಗಳೂರು—೧.

V.C.P. 3346/67
21-12-1967

ಶ್ರೀ ಸ್ವಾಮಿ ವೀರಭದ್ರ ಶಿವಾಚಾರ್ಯರವರ ಸನ್ನಿಧಿಗೆ ಅನೇಕ ವಂದನೆಗಳು—

ತಾವು ವಿಶ್ವಾಸವಿಟ್ಟು ನನಗಿತ್ತ 'ಶಿವೋಪಾಸನಾವಿವೇಕವನ್ನು ನೋಡಿದ್ದೇನೆ. ಸರಳ ಭಾಷೆಯಲ್ಲಿ ಒಂದು ಉಜ್ವಲ ಪರಂಪರೆಯ ಸಾರ ವನ್ನೆಲ್ಲಾ ಗ್ರಹಿಸಿ ಈ ಕೃತಿಯಲ್ಲಿ ಓದುಗರಿಗೆ ತಾವು ನೀಡಿದ್ದೀರಿ. ಇದು ಅಭಿನಂದನೀಯವಾಗಿದೆ, ಅಲ್ಲಲ್ಲಿ ಪ್ರಮಾಣ ಗ್ರಂಥಗಳಿಂದ ಸಂಸ್ಕೃತ ಶ್ಲೋಕಗಳನ್ನು ಉದಾಹರಿಸಿರುವುದರಿಂದ ಬರವಣಿಗೆ ಇನ್ನಿಷ್ಟು ಶ್ರೀಮಂತ ವಾಗಿದೆ. ಹೀಗೆಯೇ ತಮ್ಮಿಂದ ಹೆಚ್ಚಿನ ಸೇವೆ ಸಲ್ಲುತ್ತಿರಲಿ.

(Sd.) ವಿ. ಕೃ. ಗೋಕಾಕ್.

ಮಹಾರುದ್ರಪ್ಪ ಮಹಾಲಿಂಗಪ್ಪ ಮಿರ್ಜಿ.
ಮಹಾಲಿಂಗ ಶಾಲೆಯ ಲೇಖಕ,
ನ್ಯೂ ಕಾಟನ್‌ಮಾರ್ಕೆಟ್, ಹುಬ್ಬಳ್ಳಿ. 9-12-1967

ಪರಮ ಪೂಜ್ಯರಾದ ಶ್ರೀಮದ್ಘನಲಿಂಗಚಕ್ರವರ್ತಿಗಳಾದ ಶ್ರೀ ವೀರಭದ್ರಶಿವಾಚಾರ್ಯರು ಬೃಹನ್ಮಠ ಹಲಗೂರು ಅವರ ಸನ್ನಿಧಿಗೆ—

'ಶಿವೋಪಾಸನಾ ವಿವೇಕ,' ಈ ಇನಿದಾದ ಸತ್‌ಕೃತಿಯು ಸೂತ್ರರೂಪಾಗಿ ಇಂಪಾಗಿದೆ, ಕಂಡಗಳು ಅರ್ಥವತ್ತಾಗಿವೆ, ವಿಭಾಗಿಸಲ್ಪಟ್ಟ ಪ್ರತಿ ಅಧ್ಯಾಯಗಳು ಕ್ರಮಬದ್ಧವಾಗಿವೆ. ವಿವರಣೆ-ವಿವೇಚನೆ ವಿಷಯ ಪ್ರತಿಪಾದನೆ ಸಮಂಜಸವಾಗಿವೆ. ಮನನೀಯವಾಗಿ ಪರಿಣಮಿಸಿವೆ. ಓದುಗರ ಕುತೂಹಲವನ್ನು ಹೆಚ್ಚಿಸುತ್ತಿವೆ. ಅದರಲ್ಲಿಯ ಸರಳತೆ ಹಾಗೂ ಮಾಧುರ್ಯವು, ಬರೆಹ ಸರಣಿಯು ವಿಮರ್ಶಾತ್ಮಕವಾಗಿ ಚೇತನವನ್ನೀಯುವಂತೆ ಆಗಿವೆ. ಶೈಲಿಯು ಆದರಣೀಯವಾಗಿ ಪ್ರಶಸ್ತವಾಗಿದೆ ಹೊಂದಿಕೆಯಾಗುವ ಉತ್ತಮವೆನಿಸುವ ಪದ್ಯಗಳನ್ನು ಕೃತಿಯು ತುಂಬಾ ಮನೋಹರವಾಗಿ ಉದಹರಿಸಲ್ಪಟ್ಟಿರುವುದು ಶ್ಲಾಘನೀಯವಾಗಿದೆ.

ಶಿವಭಕ್ತನು ಹೇಗೆ ನಡೆಯಬೇಕು, ಲಿಂಗವಂತಿಕೆಯು ಎಂತು, ಸಮಾಜಜೀವಿಯು ಹೇಗೆ ವರ್ತಿಸಬೇಕು. ಅದೆಲ್ಲ ಕೂಲಂಕಷವಾಗಿ ಪ್ರತಿಪಾದಿಸಲ್ಪಟ್ಟು, ಸಮಂಜಸವಾಗಿ, ತೃಪ್ತಿಕರವಾಗಿ ಪ್ರಕಾಶವಾಗಿದೆ. ಮಂಗಲವನ್ನು ಕರುಣಿಸುವ ಈ ಗದ್ಯಕೃತಿಯು ರಸವತ್ತಾಗಿ ಮೂಡಿ ಬಂದಿರುವುದು ಪಾಠಕರ ಭಾಗ್ಯವೆಂದು ಹೇಳುವುದು ಅತಿಶಯೋಕ್ತಿಯಲ್ಲವು. ಇಂಥ ರಮಣೀಯವಾದ ಸರ್ವಾಂಗ ಸುಂದರವಾದ ಆಣಿ ಮುತ್ತುಗಳು ನಿಮ್ಮ ಲೇಕ್ಕಣಿಕೆಯಿಂದ ಹೊರಸೂಸುತ್ತ ಪ್ರಕಾಶಗೊಳ್ಳಲೆಂದು ಶ್ರೀ ಮಹಾದೇವನನ್ನು ಸ್ಮರಿಸಿ, ಭಕ್ತಿಯಿಂದ ಪ್ರಾರ್ಥಿಸದೆ ಇರಲಾರೆ.

ಇತಿ, ತಮ್ಮ ಪುರಾತನರ ಕಂದನ
ಪ್ರೇಮ ಪ್ರಣಾಮಗಳು,
(Sd.) ಮಹಾರುದ್ರಪ್ಪ ಮಹಾಲಿಂಗಪ್ಪ ಮಿರ್ಜಿ.

## S. V. Jeevoor B.A. (Hons.) M.ED.
## Director of Public Instruction, Bangalore.

ಶ್ರೀ ಷ. ಬ್ರ. ಶ್ರೀ ಸ್ವಾಮಿ ವೀರಭದ್ರಶಿವಾಚಾರ್ಯರು ಬೃಹನ್ಮಠ ಹಲಗೂರು ಇವರು ಬರೆದಿರುವ "ಶಿವೋಪಾಸನಾವಿವೇಕ" ವೆಂಬ ಗ್ರಂಥ ಗ್ರಂಥವನ್ನು ಓದಿನೋಡಿದೆನು. ಸ್ವಾಮಿಗಳು ವಿಷಯ ಪ್ರತಿಪಾದನೆಯನ್ನು ಸಮೀಚೀನವಾಗಿ ಮಾಡಿದ್ದಾರೆ. ವೇದ, ಆಗಮೋಪನಿಷತ್ತು, ಸಿದ್ಧಾಂತ ಶಿಖಾಮಣಿ, ಬ್ರಹ್ಮಸೂತ್ರ, ಭಗವದ್ಗೀತೆ, ಪುರಾಣಗಳು, ಕಾವ್ಯಗಳು, ಶಿವಶರಣ ವಚನಗಳು, ಕಾಶ್ಮೀರ ಪ್ರತ್ಯಭಿಜ್ಞಾ ಸಿದ್ಧಾಂತ, ಶತಕಗಳೇ ಮೊದಲಾದ ನೂರಾರು ಪ್ರೌಢಗ್ರಂಥಗಳ ಆಧಾರಸಮ್ಮತವಾಗಿ ವಿಷಯ ನಿರೂಪಣೆ ಮಾಡಿರುವ ರೀತಿ ನಿಜಕ್ಕೂ ಮೆಚ್ಚತಕ್ಕದ್ದಾಗಿದೆ.

ಪ್ರೌಢ ಪ್ರಬಂಧರೂಪವಾದ ಈ ಗ್ರಂಥದಲ್ಲಿ ಧರ್ಮಸಮ್ಮತವಾದ ನಡೆನುಡಿಗಳಿಂದಲೇ ಜನಾಂಗದಲ್ಲಿ ಭಾವೈಕ್ಯ, ಶಾಂತಿ, ನೆಮ್ಮದಿಗಳುಂಟಾಗುತ್ತವೆಂದು ಹೇಳಿದ ಅಂಶ ಮೆಚ್ಚತಕ್ಕದಾಗಿದೆ. ಉಪಾಸನಾ ಸಾಧನಗಳ ಬಗೆಗೆ ಕೆಲವುಕಡೆ ವೈಜ್ಞಾನಿಕವಾಗಿಯೂ ವಿಚಾರಮಾಡಿದ್ದಾರೆ. "ಯತೋಽಭ್ಯುದ ನಿಃಶ್ರೇಯಸಃ ಸಿದ್ಧಿಃ ಸ ಧರ್ಮಃ" ಎಂಬ ಧರ್ಮದ ವ್ಯಾಖ್ಯೆಗೆ ಅನುಗುಣವಾಗಿ ಗ್ರಂಥಸ್ಥ ವಿಷಯವು ಓದುಗರನ್ನು ಪ್ರಭಾವಿಗೊಳಿಸುತ್ತದೆಂದು ಭಾವಿಸಿದ್ದೇನೆ. ಜಿಜ್ಞಾಸುಗಳು ಈ ಗ್ರಂಥದ ಲಾಭ ಮಾಡಿಕೊಂಡರೆ ಗ್ರಂಥಕರ್ತರ ಶ್ರಮ ಸಾರ್ಥಕವಾದೀತೆಂದು ಆಶಿಸುತ್ತೇನೆ.

ಬೆಂಗಳೂರು,
ತಾ॥ 5-2-1968

(Sd.) ಜೀವೂರ್.

ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯ,
ಸಂಸ್ಕೃತಾಧ್ಯಾಪಕರು
ಮಾನಸಗಂಗೋತ್ರಿ, ಮೈಸೂರು. 20-12-67

ಜನರಿಗೆ ಸ್ವಧರ್ಮದಲ್ಲಿ ಪ್ರವೃತ್ತಿಯನ್ನು ಹುಟ್ಟಿಸಲಿಕ್ಕಾಗಿ ಷ|| ಬ್ರ|| ಶ್ರೀ|| ಶ್ರೀ ವೀರಭದ್ರಶಿವಾಚಾರ್ಯರು 'ಶಿವೋಪಾಸನಾವಿವೇಕ'ವೆಂಬ ಸದ್ಗ್ರಂಥವನ್ನು ಬರೆದು ಪ್ರಕಟಿಸಿರುವುದು ಅವರ ಲೋಕಕಲ್ಯಾಣದ ಹಿತ ದೃಷ್ಟಿಯನ್ನು ವ್ಯಕ್ತಪಡಿಸುತ್ತದೆ.

ಮಾನವರು ಶಿವನಿಗೆ ನೇರವಾಗಿ ಸಂಬಂಧಪಟ್ಟು, ಅವನಿಂದಲೇ ನೇರವಾಗಿ ಬಂದು, ಅವನ ಕೃಪಾಪ್ರಸಾದದಿಂದಲೇ ಬಾಳಿ ಬದುಕಿ, ಕೊನೆಗೆ ಅವನಲ್ಲಿಯೇ ಸೇರಬೇಕಾಗಿರುವುದರಿಂದ ಅವನನ್ನೇ ನಿರಂತರವೂ ಉಪಾಸನ ಮಾಡಬೇಕಾಗಿದೆ. ಅವನನ್ನು ಉಪಾಸನಮಾಡಬೇಕಾದರೂ ಒಂದು ಪರಿಚಯದ ಮಾರ್ಗಬೇಕು. ತಾನು ಅವನ ಅಮೃತಪುತ್ರನೆಂಬ ಅರಿವು-ಆದರ ಇರಬೇಕು. ಬೆಳೆಯುವ ವ್ಯಕ್ತಿ ಪಾರಮಾರ್ಥಿಕ ಪ್ರವೃತ್ತಿಯ ಜೊತೆಗೆ ಲೌಕಿಕ ನಲವು ಒಲವುಗಳನ್ನು ಹಿತವಾಗಿ ಸೇರಿಸಿಕೊಂಡು, ಹಳೆಯದನ್ನು ಹೊಸ ದೃಷ್ಟಿಗೆ ಹೊಂದಿಸಿಕೊಂಡು ಬಾಳಲು ಕಲಿಯಬೇಕು. ಈ ಪರಿಯ ಶುಭಸಂದೇಶವನ್ನು ಶ್ರೀ ವೀರಭದ್ರಶಿವಾಚಾರ್ಯರು ಸಾಧಕರಿಗೆ ನೀಡಿರುವುದು ನಿಜಕ್ಕೂ ಒಳ್ಳೆಯದೇ ಆಗಿದೆ. ತ್ಯಾಗದ ವ್ರತವನ್ನು ಸ್ವೀಕರಿಸಿ, ನಿಸ್ವಾರ್ಥ ಸೇವಾ ಜೀವನ ಸಾಗಿಸುತ್ತಿರುವ ಸ್ವಾಮಿಗಳವರು ಲೋಕ ಜಾಗೃತಿಗಾಗಿ ಈ ಪವಿತ್ರ ಗ್ರಂಥವನ್ನು ಇತ್ತುದು ಸಮಯೋಚಿತವೇ ಆಗಿದೆ. ಹಲವಾರು ಕಾರಣಗಳಿಂದ ಸನಾತನ ಧರ್ಮದ ಕಾಂತಿ ಕುಂದುತ್ತಿರುವ ಈ ವೇಳೆಯಲ್ಲಿ ಶ್ರೀಗಳವರು ಇಂಥ ಉತ್ತಮ ಪುಸ್ತಕವನ್ನು ಹೊರ ತಂದುದು ಸಮಾಜಕ್ಕೆ ಆದ ದೊಡ್ಡ ಉಪಕಾರ, ಇದಕ್ಕಾಗಿ ಅವರ ಪಾದಾರವಿಂದಗಳಲ್ಲಿ ಭಕ್ತಿಪೂರ್ವಕ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಕರ್ಣಾಟಕದ ಸೋದರ ಸೋದರಿಯರೆಲ್ಲರೂ ಈ ಪುಸ್ತಕದ ಸದುಪಯೋಗ ಪಡೆಯಲೆಂದು ಹಾರೈಸುತ್ತೇನೆ.

ಇತಿ ಗುರು-ಜಂಗಮರ ಪಾದಸೇವಕ,

(Sd) ಟಿ. ಜಿ. ಸಿದ್ಧಪ್ಪಾರಾಧ್ಯ.

ಜೆ. ರುದ್ರಪ್ಪ, ಎಂ.ಎ.. ಎಲ್ ಎಲ್, ಬಿ.,
ರಿಟೈರ್ಡ್ ಡಿಸ್ಟ್ರಿಕ್ಟ್ ಅಂಡ್ ಸೆಷನ್ ಜಡ್ಜ್.

112 ಗಾಂಧೀನಗರ,
ಬೆಂಗಳೂರು—9.

## ಶಿವೋಪಾಸನಾವಿವೇಕ

ಶಿವೋಪಾಸನೆಯು ನಾನಾ ಮುಖವಾಗಿದೆ. ಉಪಾಸನೆ ಪ್ರಾರಂಭಿಸುವುದಕ್ಕೆ ಮೊದಲು ನಾನು ಯಾರು? ನಾನು ಎಲ್ಲಿಂದ ಬಂದೆ? ನಾನು ಎಲ್ಲಿಗೆ ಹೋಗುತ್ತೇನೆ? ನಾನು ಸುಖದುಃಖಗಳನ್ನು ಅನುಭವಿಸುತ್ತಿದ್ದೇನೆ, ಈ ಸುಖ-ದುಃಖಗಳ ವ್ಯವಸ್ಥೆ ಹೇಗೆ? ದುಃಖ ನಿವಾರಣೆಯಾಗಿ ಸುಖ ಶಾಂತಿಗಳನ್ನು ಹೊಂದುವ ಬಗೆ ಹೇಗೆ? ಎಂಬ ಪ್ರಶ್ನೆಗಳು ವಿವೇಕಿ ಅಥವಾ ಜಿಜ್ಞಾಸುವಿಗೆ ಅಂಕುರಿಸುತ್ತವೆ. ಹಾಗೆಯೇ ನಾವು ನೋಡುತ್ತಿರುವ ಮತ್ತು ವ್ಯವಹರಿಸುತ್ತಿರುವ ಪ್ರಪಂಚದ ಸ್ವರೂಪವೇನು? ಈ ಪ್ರಪಂಚದ ವ್ಯವಹಾರದಲ್ಲಿ ತೊಡಗಿರುವ ನಮ್ಮ ಸ್ವರೂಪ, ಗುಣ, ಶಕ್ತಿ, ಧರ್ಮಗಳೇನು? ನಾವು ತಿಳಿದೋ ತಿಳಿಯದೆಯೋ ದೇವರ ಹೆಸರನ್ನು ಬಳಸುತ್ತಿದ್ದೇವೆ. ಆ ದೇವರ ಸ್ವರೂಪ, ಶಕ್ತಿ, ಗುಣ ಧರ್ಮಗಳೇನು. ಹಾಗೆಯೇ ಧರ್ಮದ ಹೆಸರನ್ನು ನಾವು ಮಾಡುವ ಕಾರ್ಯಗಳ ಸಮರ್ಥನೆಗೆ ಬಳಸುತ್ತಿದ್ದೇವೆ. ಇವೆಲ್ಲವುಗಳ ಪರಸ್ಪರ ಸಂಬಂಧವೇನು ಬಂದೂ, ನಾವು ಪ್ರಪಂಚದಲ್ಲಿ ಶಾಂತಿ-ಸುಖಗಳಿಂದ ಬಾಳಿ ಪರದಲ್ಲಿ ಶ್ರೇಯಸ್ಸನ್ನು ಹೊಂದುವ ಬಗೆ ಹೇಗೆಂಬುದನ್ನು ವಿಚಾರಶೀಲರಾದ ಜನರು ಆಲೋಚಿಸುತ್ತಾರೆ.

ಈ ಮೇಲಿನ ಪ್ರಶ್ನೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಚರ್ಚಿಸಿ, ಆಚಾರ್ಯ ಶ್ರೀಗಳವರು ತಮ್ಮ ಗ್ರಂಥದಲ್ಲಿ ವಿವೇಚಿಸಿದ್ದಾರೆ. ವೀರಶೈವರ ಶಿವೋಪಾಸನೆಯು ದೀಕ್ಷಾ ಸಂಸ್ಕಾರದಿಂದ ಪ್ರಾರಂಭವಾಗುತ್ತದೆ. ದೀಕ್ಷೆಯು ಮಾನವನನ್ನು ಉತ್ತಮನನ್ನಾಗಿ ಮಾಡುವ ಕರ್ಮವಿಶೇಷ. ವೀರಶೈವರಲ್ಲಿ ಶಿವದೀಕ್ಷೆಯಿಂದ ಲಿಂಗಪೂಜೆ ಪ್ರಾರಂಭವಾಗುತ್ತದೆ. ಗುರುವು ಶಿಷ್ಯನ ಶೀಲವನ್ನು ಪರೀಕ್ಷಿಸಿ ಶಿವಜ್ಞಾನವನ್ನು ಬೋಧಿಸಿ ದೀಕ್ಷಾ ಸಂಸ್ಕಾರವನ್ನು ಮಾಡಿ, ಮಂತ್ರೋಪದೇಶವನ್ನು ಮಾಡುವನು. ಆಗ ಶಿಷ್ಯನು ಶಾಸ್ತ್ರಾಭ್ಯಾಸಕ್ಕೂ ಲಿಂಗೋಪಾಸನೆಗೂ ಅರ್ಹನಾಗುವನು. ಈ ಶಿವೋಪಾಸನೆಯ ಫಲವನ್ನು ಪಡೆಯುವ ಉತ್ತರವಾದಿತ್ವವು ಶಿಷ್ಯನದು.

ಶಿವೋಪಾಸನೆ ಪ್ರಾರಂಭವಾಗುವುದಕ್ಕೆ ಮುಂಚೆ ಶಿವಜ್ಞಾನವನ್ನು ತಿಳಿಯಬೇಕು. ತನ್ನ ಯೋಗ್ಯತೆಯನ್ನು ಸ್ವಾತ್ಮವಿಮರ್ಶೆಯಿಂದ ಅರಿಯಬೇಕು. ಗುರುಗಳ ಮುಖದಿಂದ ತಿಳಿಯಬೇಕು. ಅನಂತರ ದೃಢಭಕ್ತಿಯಿಂದ ಶಿವನನ್ನು ಆರಾಧಿಸಬೇಕು. ಈ ಸಾಧನೆಗೆ ಮೊದಲು ಜ್ಞಾನಬೇಕು, ಎರಡನೆಯದು ಭಕ್ತಿಬೇಕು. ಇವುಗಳ ಬೆಳಕಿನಲ್ಲಿ ಕರ್ಮವನ್ನಾಚರಿಸಬೇಕು. ನಾವು ಮಾಡುವ ಶಿವೋಪಾಸನೆಯೆಲ್ಲವೂ ಸರ್ವಸಮರ್ಪಣ ಶಿವಭಕ್ತಿಯಿಂದ ಕೂಡಿರುವುದಾದರೆ ಏನು ತೊಂದರೆ ಬಂದರೂ ಶಿವನೇ ಪಾರು ಮಾಡುತ್ತಾನೆಂಬ ದೃಢವಿಶ್ವಾಸವೇರ್ಪಡುವುದು. " ಶಿವನೊಳಗೆ ವಿಶ್ವಾಸ, ಶಿವನೊಳಗೆ ನಂಬಿಕೆಯು, ಶಿವನೊಳಗೆ ಮೋಹವಿರೆ ತಾನೇ ಶಿವನು " ಎಂಬ ಮುಪ್ಪಿನ ಷಡಕ್ಷರಿ ವಚನವೇ ದಾರಿದೀಪವಾಗುವುದು.

ಶಿವೋಽಸ್ಮಿ ಸಾಧನಾವಿಷ್ಟಃ ಶಿವೋಽಹಂ ಯಾಜಕೋಽಪ್ಯಹಂ ।<br>
ಶಿವಂ ಯಾಮಿ ಶಿವೋಯಾಮಿ ಶಿವೇನ ಶಿವ ಸಾಧನಃ ॥<br>
ಭಿನ್ನೋಽಪ್ಯಭಿನ್ನ ಏವಾಸ್ಮಿ ಶಿವ ಇತ್ಥಂ ವಿಚೇಷ್ಟನಂ ॥<br>
ಶಿವೋ ಭೋಕ್ತಾ ಶಿವೋ ಭೋಜ್ಯಂ ಶಿವೇಷು ಶಿವಸಾಧನಃ !<br>
ಶಿವಃಕರ್ತಾ ಶಿವಃ ಕರ್ಮ ಶಿವೋಽಸ್ಮಿ ಕರಣಾತ್ಮಕಃ ।

(ಶಿವದೃಷ್ಟಿ, ಆಹ್ನಿಕ ೭–ಶ್ಲೋಕ ೯೮ ೯೯.(

ಸಾಧನಾಭ್ಯಾಸಗಳಿಂದ ನಾನು ಶಿವರೂಪನಾಗಿರುವೆನು, ಶಿವನನ್ನು ಹೊಂದುವೆನು, ಶಿವನಾಗಿರುವುದರಿಂದ ಶಿವನನ್ನು ಸಾಧಿಸುವೆನು, ನಾನು ಭಿನ್ನವಾಗಿ ತೋರಿದರೂ ಅಭಿನ್ನವಾಗಿಯೇ ಇರುವೆನು. ಈ ವಿಶ್ವವೆಲ್ಲಾ ಶಿವನ ವ್ಯವಹಾರ, ಶಿವನೇ ಅನುಭವಿಸುವವನು, ಶಿವನೇ ಅನುಭವಿಸಲ್ಪಡತಕ್ಕ ವಸ್ತು, ಶಿವಸ್ವರೂಪಿಗಳಲ್ಲಿ ಶಿವನನ್ನು ಸಾಧಿಸುವೆನು, ಶಿವನೇ ಕರ್ತಾ, ಶಿವನೇ ಕರ್ಮ, ನಾನು ಕರಣಗಳಿಂದ ಕೂಡಿದವನಾದರೂ ನಾನು ಶಿವನಾಗಿದ್ದೇನೆ.

" ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।<br>
ತಸ್ಮಾತ್ ಕಾರುಣ್ಯಭಾವೇನ ರಕ್ಷ-ರಕ್ಷ ಮಹೇಶ್ವರ ॥ "

ಈ ವಿಧವಾದ ಅನವರತ ಶಿವಭಾವನೆಯಿಂದ ಪರಿಪಾಕಾವಸ್ಥೆಯಲ್ಲಿ ಶಿವಾನುಗ್ರಹದಿಂದ ಸಾಧಕನು ಶಿವಾಭಿನ್ನನಾಗುವನು.

ಸಂಗ್ರಹೇಣ ಸುಖದುಃಖ ಲಕ್ಷಣಂ ಮಾಂ ಪ್ರತಿ ಸ್ಥಿತಮಿದಂ ಶೃಣು ಪ್ರಭೋ |
ಸೌಖ್ಯಮೇವ ಭವತಾ ಸಮಾಗಮಃ ಸ್ವಾಮಿ ನಾ ವಿರಹ ಏವ ದುಃಖತಾ ||

—ಉತ್ಪಲದೇವ.

"ಪ್ರಭುವೇ, ಕೇಳು ಸಂಗ್ರಹವಾಗಿ ಹೇಳುವುದಾದರೆ ಇದೇ ಸುಖ-ದುಃಖದ ಲಕ್ಷಣ ನಿನ್ನೊಂದಿಗಿರತಕ್ಕದೇ ಸುಖ, ನಿನ್ನನ್ನಗಲುವಿಕೆಯೇ ದುಃಖ"

ಈ ಎಲ್ಲ ನಿರ್ಣಯಗಳೂ ಕೂಡಿ ಆಚಾರ್ಯ ಶ್ರೀಗಳವರಿಂದ ಬರೆಯಲ್ಪಟ್ಟಿರುವ ಈ ಗ್ರಂಥವು ಆದರಣೀಯ; ಸಂಗ್ರಹಯೋಗ್ಯ.

ಬೆಂಗಳೂರು
28-12-1967

ಇತಿ,
(Sd) ಜಿ. ರುದ್ರಪ್ಪ

———

ವೇದಾಂತವಿದ್ವಾನ್

ಡಾ|| N. S. ಅನಂತರಂಗಾಚಾರ್,

B.A. (Hons) B.T., Ph.D.

Mysore Educational Service. Date 19-1-1968

ಸ್ವಾರ್ಥ, ಅನ್ಯಾಕ್ರಮಣ, ದೌರ್ಜನ್ಯ, ಸಂಶಯ ಮೊದಲಾದವುಗಳಿಂದ ಕದಡಿಹೋಗಿರುವ ಇಂದಿನ ಸಮಾಜದಲ್ಲಿ ಜನರ ವಿವೇಕದ ಕಣ್ಣನ್ನು ತೆರೆಸುವುದರಲ್ಲಿ ಬಹಳಮಟ್ಟಿಗೆ ಉಪಯೋಗವಾಗುವ 'ಶಿವೋಪಾಸನಾವಿವೇಕ'ವೆಂಬ ಕೃತಿಯನ್ನು ಶ್ರೀ|| ಷ|| ಬ್ರ|| ಶ್ರೀ ಸ್ವಾಮಿ ವೀರಭದ್ರಶಿವಾಚಾರ್ಯರು, ಬೃಹನ್ಮಠ, ಹಲಗೂರು ಇವರು ರಚಿಸಿ ಕನ್ನಡಿಗರಿಗೆಲ್ಲಾ ಉಪಕಾರ ಮಾಡಿದ್ದಾರೆ.

ಈ ಕೃತಿಯಲ್ಲಿ ಪ್ರಾಚೀನ ಮತ್ತು ನವೀನ ದೃಷ್ಟಿಗಳ ಸಮನ್ವಯವಿರುವುದೂ ಸಿದ್ಧಾಂತಶಿಖಾಮಣಿಯೇ ಮೊದಲಾದ ಸಂಸ್ಕೃತ ಗ್ರಂಥಗಳ ಹಾಗೂ ವಚನಕಾರರ ವಚನ ವಾಙ್ಮಯದ ಉಪದೇಶ ಸಾರವಿರುವುದೂ ಇದರ ವೈಶಿಷ್ಟ್ಯ.

ಮಾನವನಲ್ಲಿ ಆತ್ಮಪ್ರಜ್ಞೆಯನ್ನು ಮೂಡಿಸುವ ಸಲುವಾಗಿ ಮೂಡಿಬಂದ ದರ್ಶನಗಳಲ್ಲಿ ಶೈವಸಿದ್ಧಾಂತವೂ ಮುಖ್ಯವಾದುದು. ಸಗುಣಬ್ರಹ್ಮವಾದವನ್ನೂ, ಜಗತ್ಸತ್ಯತ್ವವನ್ನೂ, ಪರಿಣಾಮವಾದವನ್ನೂ, ಜ್ಞಾನಕರ್ಮ ಸಮುಚ್ಚಯವನ್ನೂ ಪ್ರತಿಪಾದಿಸುವ ಈ ಸಿದ್ಧಾಂತ ಷಟ್‌ಸ್ಥಲಮಾರ್ಗವನ್ನು ಮೋಕ್ಷೋಪಾಯವಾಗಿ ನಿರೂಪಿಸುತ್ತದೆ. ಈ ಮಹೋತ್ತಮ ಮಾರ್ಗದ ಹಿರಿಮೆಯನ್ನೂ ವೈಶಿಷ್ಟ್ಯವನ್ನೂ ಸ್ವಾಮಿಗಳು ಈ ಕೃತಿಯಲ್ಲಿ ಬಹಳ ಮನೋಜ್ಞವಾಗಿ ನಿರೂಪಿಸಿದ್ದಾರೆ.

ಲೇಖಕರ ಭಾಷೆ ಬಹಳ ಲಲಿತವಾಗಿ ವೀರ್ಯವತ್ತರವಾಗಿದೆ. ಅವರ ಪಾಂಡಿತ್ಯ ಹಾಗೂ ಅನುಭವವನ್ನು ಈ ಕೃತಿ ಪ್ರತಿಬಿಂಬಿಸುತ್ತದೆ. ಈ ಕೃತಿ ಕೇವಲ ಶೈವಸಿದ್ಧಾಂತದ ಅನುಯಾಯಿಗಳಿಗೇ ಅಲ್ಲದೆ ಇತರರಿಗೂ ಬಹಳ ಉಪಯುಕ್ತವಾಗಿದೆ. ಇದರ ಅನುಶೀಲನದಿಂದ ಓದುಗರಲ್ಲಿ ಆತ್ಮಗುಣ ಸಂವರ್ಧನೆಯಾಗಲೆಂದೂ ಆತ್ಮ ಪ್ರಜ್ಞೆ ಮೂಡುವಂತಾಗಲೆಂದೂ ಹಾರೈಸುತ್ತೇನೆ.

(Sd) Anantharangachar.

ಎಚ್. ಎಸ್. ಸೋಮಶೇಖರಶರ್ಮ ಎಂ.ಎ., ಎಲ್ ಎಲ್. ಬಿ.
ಸಾಹಿತ್ಯಶಿರೋಮಣಿ, ಅಡ್ವೋಕೇಟ್, ಅಧ್ಯಕ್ಷ, ಆಂಧ್ರಪ್ರದೇಶ ವೀರಶೈವಸಂಘ,
9/2 ಬ್ರಾಡಿಪೇಟೆ, ಗುಂಟೂರು—೨. (A.P.)

ತಾ॥ 16-1-1968

ತಮ್ಮ "ಶಿವೋಪಾಸನಾವಿವೇಕ" ಎಂಬ ಕನ್ನಡ ಗ್ರಂಥವು ನನ್ನ ಕೈ ಸೇರಿದೆ. ತಮ್ಮ ಗ್ರಂಥದ ಬಗ್ಗೆ ನನ್ನ ಅಭಿಪ್ರಾಯವನ್ನು ಬರೆಯುವದು ಕಷ್ಟವಾದ ಕೆಲಸವೇ. ಏಕೆಂದರೆ. ತಮ್ಮ ಗ್ರಂಥದಲ್ಲಿ ಪ್ರತಿಪಾದಿತ ವಿಷಯವು ಅತ್ಯಂತ ಗಹನವಾಗಿದ್ದು, ನಿರಂತರ ಶಿವೋಪಾಸನಾ ನಿರತ ವ್ಯಕ್ತಿಗೇ ಅರ್ಥವಾಗುವದು.

ಶಿವೋಪಾಸನೆಯ ಅಗತ್ಯ ಮತ್ತು ಅದರಿಂದಾಗುವ ಫಲವನ್ನು ತಾವು ಉದಾತ್ತವಾಗಿ ಈ ಗ್ರಂಥದಲ್ಲಿ ಚಿತ್ರಿಸಿರುವಿರಿ. ಮನುಷ್ಯ ಜೀವನವು ಪವಿತ್ರವಾಗಲಿಕ್ಕೆ 'ಧರ್ಮ'ವು ಅವಶ್ಯವೆಂತಲೂ, ಆ ಧರ್ಮವು 'ಶಿವೋಪಾಸನೆ'ಯಿಂದಲೇ ಸಾಧ್ಯವೆಂತಲೂ, ಶಿವೋಪಾಸನೆ ಎಂದರೆ 'ಲಿಂಗೋಪಾಸನೆ' ಎಂತಲೂ, ಲಿಂಗೋಪಾಸನೆ ಸಿದ್ಧಿಸಲು ಲಿಂಗ-ರುದ್ರಾಕ್ಷ-ಭಸ್ಮಧಾರಣೆ-ಶಿವಮಂತ್ರ ಜಪದೊಡನೆ ಪಂಚಾಚಾರ ವ್ರತವೂ ಅಗತ್ಯವೆಂತಲೂ ಈ ರೀತಿಯ ಉಪಾಸನೆ ಮತ್ತು ಸದಾಚಾರದಿಂದ ವ್ಯಕ್ತಿಯ ಚಂಚಲ ಮನಸ್ಸು ಸ್ಥಿರೀಕೃತಗೊಂಡು, ಅದರಿಂದ ಧ್ಯಾನ (Concentration) ವು ಸಾಧ್ಯವಾಗಿ, ತದ್ವಾರಾ 'ಶಿವಯೋಗ'ವು ಸಿದ್ಧಿಸುವುದೆಂದೂ ತಾವು ಪ್ರತಿಪಾದಿಸಿದ್ದು ಅತ್ಯಂತ ಉದಾತ್ತವೂ ಮತ್ತು ಪಂಡಿತ ಗ್ರಾಹ್ಯವೂ ಆಗಿದೆ 'ಶಿವೋಪಾಸನೆ'ಯನ್ನು ಆಧುನಿಕ ದೃಷ್ಟಿಯಿಂದ ತಾವು ಚರ್ಚಿಸಿದ್ದರಿಂದ, ಈ ಗ್ರಂಥವನ್ನು ಓದುವ ಆಸ್ತಿಕ ವ್ಯಕ್ತಿಗೆ ಶಿವೋಪಾಸನೆ ಅರ್ಥಾತ್ ಲಿಂಗೋಪಾಸನೆಯಲ್ಲಿ ಶ್ರದ್ಧಾ ಭಕ್ತಿಗಳು ಉಂಟಾಗದೇ ಇರವು.

ಈ ಗ್ರಂಥದಲ್ಲಿ ಸರಳ ಭಾಷೆಯನ್ನು ಉಪಯೋಗಿಸಿದ್ದರೆ ಸಾಮಾನ್ಯ ವಿದ್ಯಾವಂತರಿಗೂ ಪ್ರವೇಶಾರ್ಹವಾಗುತ್ತಿತ್ತೆಂದು ನನಗೆ ಅನಿಸುತ್ತದೆ.

(Sd) ಎಸ್. ಆರ್. ಸೋಮಶೇಖರಶರ್ಮ.

ವಿದ್ಯಾಭೂಷಣ, ಸಾಹಿತ್ಯಪ್ರವೀಣ

ಓ. ಎಸ್. ಲಿಂಗಣ್ಣಯ್ಯ ಬಿ.ಎ. (ಆನರ್ಸ್)

ರಿಟೈರ್ಡ್, ಅಸಿಸ್ಟೆಂಟ್ ಕಮಿಷನರು, ಚಿತ್ರದುರ್ಗ ತಾ॥ 29-1-1968

" ಶಿವೋಪಾಸನಾವಿವೇಕ " ಎಂಬ ವೀರಶೈವತತ್ತ್ವ ಗ್ರಂಥವನ್ನು ಆಮೂಲಾಗ್ರವಾಗಿ ಓದಿದೆನು ; ಚಿಂತನೆ ಮಾಡಿದೆನು. ಹಲಗೂರು ಬೃಹನ್ಮಠದ ಶ್ರೀ॥ ಷ॥ ಬ್ರ॥ ಶ್ರೀ ಸ್ವಾಮಿ ವೀರಭದ್ರಶಿವಾಚಾರ್ಯರು ಈ ಗ್ರಂಥವನ್ನು ಬರೆದಿರುತ್ತಾರೆ. ಗಹನ ತತ್ತ್ವಸಿದ್ಧಾಂತವನ್ನು ಗ್ರಂಥಕರ್ತರು ಮಧುರಶೈಲಿಯಲ್ಲಿ ವಿವರಿಸಿರುತ್ತಾರೆ. ಎಲ್ಲ ಸಾಧಕರೂ ತತ್ತ್ವಪ್ರೇಮಿಗಳೂ ಹೆಣ್ಣುಮಕ್ಕಳೂ ಇದನ್ನು ಓದಿ ಅರ್ಥಮಾಡಿಕೊಳ್ಳಬಹುದು. ಈ ಗ್ರಂಥದ ತತ್ತ್ವಹೃದಯವನ್ನು ಲೇಖಕರು ಅವರ ಸವಿನುಡಿಯಲ್ಲಿಯೇ ಚಿತ್ರಿಸಿರುತ್ತಾರೆ. "ಅನುಭವ ಪರಿಪೂರ್ಣ ಶಿವಭಕ್ತಿ-ಶಿವಜ್ಞಾನ-ಶಿವಕ್ರಿಯಾ ಸಮುಚ್ಚಯಾರ್ಥವನ್ನು ಅಥವಾ ತ್ಯಾಗ-ಭೋಗ-ಯೋಗಸಮನ್ವಯ ವೈಶಿಷ್ಟ್ಯವನ್ನು ಇಲ್ಲವೆ, ಕಾಯಿಕ-ವಾಚಿಕ-ಮಾನಸಿಕ ಕ್ರಿಯಾಪದ್ಧತಿಯನ್ನು ಪ್ರಧಾನವಾಗಿ ಗ್ರಹಿಸಿ, ಭಕ್ತಸ್ಥಲದಲ್ಲಿ ಮೊದಲು ಸೃಷ್ಟಿ, ಸ್ಥಿತಿ, ಲಯ, ಕರ್ಮಗಳು ಬಿಡುವಿಲ್ಲದೆ ಸಾಗುತ್ತಿವೆ. ಈ ಕರ್ಮಜಾಲದಲ್ಲಿ ಮನುಷ್ಯ ಸಿಕ್ಕಿದ್ದಾನೆ. ಅವನು ಈ ಅನಂತ ಕ್ರಿಯೆಯಲ್ಲಿ ಮುಳುಗಿಹೋಗಬಾರದು. ಅವನು ಈ ಸುಳಿಯನ್ನು ತಪ್ಪಿಸಿಕೊಂಡು ಶಿವನಕಡೆಗೆ ನಡೆಯುವ ಸಾಧಕನಾಗಬೇಕು ; ಸಾಹಸಿಯಾಗಬೇಕು. ಅದುವೇ ವಿವೇಕ!. ಈ ತತ್ತ್ವಾರ್ಥವನ್ನು ಶ್ರೀ ಸ್ವಾಮಿ ವೀರಭದ್ರಶಿವಾಚಾರ್ಯರು ಬಹು ಸುಂದರ ಭಾಷೆಯಲ್ಲಿ ಹೇಳಿರುತ್ತಾರೆ. ಇವರ ಬೃಹನ್ಮಠವೇ ಇವರ ಆಧ್ಯಾತ್ಮಿಕ ತಪೋಭೂಮಿ ; ಇವರ ಸಾಹಿತ್ಯಾರಾಧನೆಯೇ ಜ್ಞಾನ ದಾಸೋಹ. ಇವರು ಕ್ರಿಯಾಜ್ಞಾನ ಸಂಪನ್ನರು ; ಲೋಕ ಹಿತಾರ್ಥ ಶಿವಪೂಜಾನಿಷ್ಠರು ; ಶುದ್ಧ ಸಾತ್ವಿಕ ಮನೋವೃತ್ತಿಯ ಶಿವಾಚಾರ್ಯರು ! ಇವರ ತತ್ತ್ವನಿರೂಪಣೆಯಲ್ಲಿ ವೀರಮನೋಧರ್ಮವಿದೆ ; ಪರಮ ಭದ್ರಾಕಾಂಕ್ಷೆ ಇವೆ ! ಅದರಿಂದಲೇ ಇವರು ವೀರಭದ್ರಶಿವಾಚಾರ್ಯರು ! ಆ ದೇವ ದೇವ ವೀರಭದ್ರನ ಕೈಯ ಅಲಗಿನಂತೆಯೇ ಇವರ ಶೈಲಿಯಲ್ಲಿ ತೇಜಸ್ಸು ಮಿಂಚುತ್ತಿದೆ, ಓಜಸ್ಸು ತೋರುತ್ತಿದೆ.

ಹಲಗೂರು ಬೃಹನ್ಮಠವೆಂದರೆ ಅನಾದಿ ಶಿವಾಚಾರ್ಯ ಕ್ಷೇತ್ರ! ಶ್ರೀ ಸ್ವಾಮಿಾ ವೀರಭದ್ರಶಿವಾಚಾರ್ಯರು ಇದುವರೆಗೆ ಹಲವಾರು ಉತ್ತಮ ಗ್ರಂಥಗಳನ್ನು ಬರೆದು ಕನ್ನಡ ನಾಡಿನಲ್ಲಿ ವಿಖ್ಯಾತರಾಗಿದ್ದಾರೆ. ಇವರು ಸಾಹಿತ್ಯ-ಸಂಸ್ಕೃತಿ ಮತ್ತು ಶಿಕ್ಷಣ ಕ್ಷೇತ್ರಗಳಲ್ಲಿ ಅಪಾರ ಶ್ರದ್ಧೆಯಿಂದ ದುಡಿಯುತ್ತಿದ್ದಾರೆ ; ಶಿವಯೋಗಬಲದಿಂದ ಸಮಾಜಾಭ್ಯುದಯವನ್ನು ಸಾಧಿಸುತ್ತಿದ್ದಾರೆ. ಈ ಸಮರ್ಥ ಗುರು-ಸಾಹಿತಿಯ ಲೇಖನಿಯಿಂದ ಇನ್ನೂ ಅನೇಕ ಸರ್ವೋತ್ತಮ ಗ್ರಂಥಗಳು ಉದಯವಾಗಲಿ ಎಂದು ಹಾರೈಸುತ್ತೇನೆ.

(Sd) ಓ. ಎಸ್. ಲಿಂಗಣ್ಣಯ್ಯ.

ಮ. ಮಲ್ಲಪ್ಪ,
ಕನ್ನಡಪಂಡಿತರು,
ಸರಕಾರಿ ಪ್ರೌಢಶಾಲ, ಮಂಡ್ಯ. ತಾ|| 13-1-1968

ಪೂಜ್ಯರಾದ ಶ್ರೀ ಶ್ರೀ ವೀರಭದ್ರಶಿವಾಚಾರ್ಯಮಹಾಸ್ವಾಮಿಗಳವರ ಇತ್ತೀಚಿನ ಕೃತಿ "ಶಿವೋಪಾಸನಾವಿವೇಕ"ದಲ್ಲಿ ವೀರಶೈವ ಸಂಸ್ಕೃತಿಯನ್ನು ವೀರಶೈವರು ಅನುಸರಿಸುವ ಬೆಳೆಸುವ ಉಳಿಸುವ ದೃಷ್ಟಿಕ್ರಮವಾಗಿ ಪ್ರತಿಪಾದಿತವಾಗಿದೆ. "ಧರ್ಮ ಮಾನವನ ಪ್ರಾಣ; ಮಾನವನು ತನ್ನ ಜೀವ ಮಾನವನ್ನು ಸುಸ್ಥಿತಿಯಲ್ಲಿಟ್ಟುಕೊಳ್ಳುವುದಕ್ಕೆ ಚಿತ್ತಶಾಂತಿಗೆ ಧರ್ಮವೇ ಇದಿಕಾರಣ" ಎನ್ನುವ ಸ್ವರೂಪಚಿತ್ರ ಇದರಲ್ಲಿ ಪ್ರಕಟವಾಗಿದೆ. "ಸಾಂಸ್ಕೃತಿಕ ಜೀವನದಸೊಗಸು-ಸೊಂಪು-ನೀತಿ-ಕ್ರಿಯೆ-ಚರ್ಯೆ-ಯೋಗ ಇವುಗಳಿಂದ ವರ್ಧಿಸತ್ತದೆ; ನೀತಿಯಿದ್ದಲ್ಲಿ ಧರ್ಮ-ಕ್ರಿಯೆ-ತತ್ತ್ವ ಜ್ಞಾನಸಮೃದ್ಧಿ, ಅನೈತಿಕತೆಯ ಉಲ್ಬಣದಿಂದ ಸರ್ವ ಸೌಭಾಗ್ಯ ಹಾನಿ" ಎಂಬ ಉದ್ಗಾರ ಇಲ್ಲಿ ತುಂಬಿಬಂದಿದೆ. "ಶಿವ+ಉಪಾಸನ+ವಿವೇಕ" ಈ ಮೂರು ಪದಗಳ ವಿವೇಚನೆ ಇಲ್ಲಿ ಚೆನ್ನಾಗಿ ಆಗಿದೆ ಶಿವನು ಜ್ಞಾನಸ್ವರೂಪಿ; ಉಪಾಸನೆಯು ಕ್ರಿಯಾಪ್ರಾಧಾನ್ಯವಾಗಿ ಇದ್ದಿರಬೇಕು; ಮಹಾದೇವನ ಕರುಣೆಯನ್ನು ಪಡೆಯುವುದಕ್ಕೆ ಭಕ್ತಿಯೇ ಮುಖ್ಯ ಸಾಮಗ್ರಿ ಎನ್ನುವುದೆ, ವಿವೇಕವು. "ಗುರುವಿನ ಜೀವರಕ್ತ ಕಣವೇ ಅತ್ಯುತ್ತಮ ಗ್ರಂಥ' ಎನ್ನುವ ಜಾನ್ ಮಿಲ್ಟನ್ (John Milton) ನ ಮಾತಿನ ಅರ್ಥವು ಇದನ್ನು ವಿಶದೀಕರಿಸಿತೆನ್ನಬಹುದು.

ಈ ಗ್ರಂಥದಲ್ಲಿ ಅಲ್ಲಲ್ಲಿ ಹೆಸರಿಸಲ್ಪಟ್ಟಿರುವ ೧) ಮಂತ್ರಾನುಭವ ಮಂಜರಿ, ೨) ಪರಾವಿದ್ಯಾವಿಲಾಸ, ೩) ಮಹಾವರಣ ಸಹಿತೆ, ೪) ಶಿವ ಕ್ರಿಯಾತರಂಗ ಇವೆಲ್ಲವೂ ಶ್ರೀ ಗುರುದೇವರ ಲೇಖನಿಯಿಂದ ಬಂದ ಗ್ರಂಥಗಳು; ಅಪ್ರಕಾಶಿತ. ಇವೆಲ್ಲವನ್ನೂ ಹೊರತರಲು ಸಮಾಜವು ಮುಂದೆ ಬರಬೇಕು. ನೂರಾರು ಶಾಸ್ತ್ರಗ್ರಂಥಗಳ ಮತ್ತು ಶಿವಾನುಭವ ಸಂಗಮದ, ಪ್ರಾಚೀನ ಪರಂಪರೆಯ ಅರುಹಿನ ಕುರುಹಾದ ಈ ಎಲ್ಲ ಗ್ರಂಥಗಳೂ

ಪ್ರಕಾಶಕ್ಕೆ ಬಂದರೆ ಆಗ ಸಮಾಜಕ್ಕೆ ಒಂದುಬಗೆಯ ಒಳ್ಳೆಯ ಬೆಳಕು, ಅಂತರ್ವಿಕಾಸ ಆಗುತ್ತದೆಂಬುದು ನನ್ನ ವಿಶ್ವಾಸ.

ವೀರಶೈವ ಮತದಲ್ಲಿ ಸಂಜನಿಸಿದವನು, ಸೇರ್ಪಡೆಯಾದವನು ತಾನು ವೀರಶೈವಸ್ಥಿತಿಯಲ್ಲಿಯೇ ಇದ್ದಿರಲು ಏಕೆ ಪ್ರಯತ್ನಿಸಬೇಕು, ಜೊತೆಗೆ ನಮ್ಮೊಡನೆಯೇ ಇರುವ ನಮ್ಮ ನೆರೆಯ ಧರ್ಮ, ಭಾಷೆ, ವರ್ಣ, ಸಮಾಜ ಎಲ್ಲವರೊಡನೆ ಹೇಗೆ ಹೇಗೆ ಇದ್ದರೆ ಚೆನ್ನು; ವಿಭಿನ್ನತೆಯಲ್ಲಿ ಏಕತೆ ಎಂಬುದರ ಒಳಮರ್ಮವೇನು? ಎಂದೆಲ್ಲಾ ಈ ಗ್ರಂಥಕರ್ತರು ಚರ್ಚಿಸಿ ಸಮಂಜಸ ಉತ್ತರ ಕಂಡುಕೊಂಡಿದ್ದಾರೆ. ರಾಷ್ಟ್ರೀಯ ಐಕ್ಯತೆಯನ್ನು-ವಿಶ್ವಶಕ್ತಿಯನ್ನು ಅಭಿವೃದ್ಧಿಪಡಿಸಿಕೊಂಡು ಸರ್ವ ಜನರೂ ಸುಖಜೀವನ ಬಾಳಬೇಕೆಂಬುದರ ವಿಷಯದಲ್ಲಿ ಒಳ್ಳೆಯ ದೃಷ್ಟಿ ಶ್ರೀ ಶ್ರೀಗಳವರ ಗ್ರಂಥಗಳಿಂದ ನನಗೆ ದೊರಕಿತು. ಎಂದು ಓದುಗರು ಮನಸಾರೆ ಹೇಳಬಲ್ಲರು. ಎಂತಲೇ ಈ ಗ್ರಂಥಗಳನ್ನು ಸಮಾಜದವರು ನೆರವಿತ್ತು ಪ್ರಕಾಶಗೊಳಿಸಿ ಪುಣ್ಯಭಾಜನರಾಗಬೇಕೆಂದು ನನ್ನ ಕಳಕಳಿಯ ವಿನಂತಿ.

(Sd) ಮ. ಮಲ್ಲಪ್ಪ.
ಮಂಡ್ಯ.